12th Century's Enlightenment
Technic and Revolution

# ಅರಿವೇ ಗುರು

## ಸತ್ಯ ಸಂವಾದ



ಬಸವರಾಜ ಸ್ವಾಮಿ

*12th Century's*
*Enlightenment Technic*
*and Revolution*

# ಅರಿವೇ ಗುರು

## ಸತ್ಯ ಸಂವಾದ


ಬಸವರಾಜ ಸ್ವಾಮಿ

ರಾಯಚೂರು



ಪ್ರಕಾಶಕರು

**ಶ್ರೀ ಬಸವ ಸೇವಾ ಪ್ರತಿಷ್ಠಾನ**

ಬಸವನಗರ, ಬಾಲಂಕು ಆಸ್ಪತ್ರೆ ಪಕ್ಕದಲ್ಲಿ

ಗಂಜ್ ರಸ್ತೆ, ರಾಯಚೂರು - 584102

ಕರ್ನಾಟಕ

**ARIVE GURU**
Conversation of Truth

Author : Basavaraj Swamy
Editor Suddimoola Kannada Daily Siyatalab,
Raichur - 584102
Mobile : 99805 53750



**ಅರಿವೇ ಗುರು**

**ಸತ್ಯಸಂವಾದ**

ಲೇಖಕರು : **ಬಸವರಾಜ ಸ್ವಾಮಿ**

ಕಾಗದ ಬಳಕೆ : ಡೆಮ್ಮಿ 1/8 ಅಳತೆ
70 ಜಿಎಸ್ಎಂ ಎನ್ ಎಸ್ ಮ್ಯಾಪಲಿತೋ ಪೇಪರ್

ಮುದ್ರಣ : ಪ್ರಥಮ ಮುದ್ರಣ ಜನೇವರಿ 2023
:ದ್ವಿತೀಯ ಮುದ್ರಣ ಅಕ್ಟೋಬರ್ 2023
: ತೃತೀಯ ಮುದ್ರಣ ನವೆಂಬರ್ 2023
: ನಾಲ್ಕನೇ ಮುದ್ರಣ ಡಿಸೆಂಬರ್ 2024

ಪ್ರತಿಗಳು : 500

Copies : 500

ಪುಟಗಳು : 156 + XII

Pages : 156 + XII

ಹಕ್ಕುಗಳು : ಲೇಖಕರವು

ಬೆಲೆ : ರೂ.200/-

ಅಕ್ಷರ ಜೋಡಣೆ : ಶ್ರೀಮತಿ ರೇಖಾ

ಮುಖಪುಟ : ಮುರಳೀಯಧರ ವಿ.ರಾಠೋಡ, ಬೆಂಗಳೂರು

ಮುದ್ರಕರು : ಅಮರಾವತಿ ಪ್ರಿಂಟರ್ಸ್, ಹೈದರಾಬಾದ

ಪ್ರಕಾಶಕರು

**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಬಸವನಗರ, ಬಾಲಂಕು ಆಸ್ಪತ್ರೆ ಪಕ್ಕದಲ್ಲಿ
ಗಂಜ್ ರಸ್ತೆ, ರಾಯಚೂರು – 584102
ಕರ್ನಾಟಕ

# ಅರ್ಪಣೆ

ಭೂಮಂಡಲದಲ್ಲಿರುವ
ಸಕಲ ಕಾಯಗಳಿಗೆ
ಈ ಕೃತಿ ಅರ್ಪಣೆ

# ಓದುವ ಮುನ್ನ....

ಹನ್ನೆರಡನೇ ಶತಮಾನದಲ್ಲಿ ಬಸವಾದಿ ಶರಣರು ಮಾಡಿದ ಕ್ರಾಂತಿ ಅದು ಸ್ವಯಂ ಕ್ರಾಂತಿ. ಮನದಿಂದಾಗಿ ತನುವಿನಲ್ಲಿ ಉಂಟಾದ ಅಜ್ಞಾನವನ್ನು ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನದಿಂದ ಕೊಂದು ಹಾಕುವ ಇಪ್ಪತ್ತೆರಡು ಸಾವಿರ ವಚನ ರೂಪದ ಸೂತ್ರಗಳನ್ನು ರಚಿಸಿ ಕಾಯದ ಮೂಲಕ ಕಾಯದಲ್ಲಿಯೇ ಕ್ರಾಂತಿ ಮಾಡಿದರು.

ಯಾರನ್ನೂ ಸರಿ ಮಾಡಲು ಬರುವುದಿಲ್ಲ. ತನಗೆ ತಾನೇ ತನ್ನಲ್ಲಿಯೇ ಅರಿವಿನ ಕೃಷಿ ಮಾಡಿಕೊಂಡರೆ ತನ್ನನ್ನು ತಾನೇ ಸರಿಮಾಡಿಕೊಳ್ಳಲು ಬರುತ್ತದೆ ಎಂದು ನಿರ್ಧಾರ ಮಾಡಿ:

''ಲೋಕದ ಡೊಂಕ ನೀವೇಕೆ ತಿದ್ದುವಿರಯ್ಯ
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆ ಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವಾ''
ಎನ್ನುವ ಮಹಾಸೂತ್ರವನ್ನು ರಚಿಸಿದರು.

ಜ್ಞಾನಿಗಳು ರಚನೆ ಮಾಡಿದ ಸೂತ್ರಗಳ ಮೂಲಕ ತನುವಿನಲ್ಲಿ ಉಂಟಾದ ಅಜ್ಞಾನವನ್ನು ತನುವಿನ ಜ್ಞಾನದಿಂದಲೇ ಕಳೆದುಕೊಂಡು ಮಹಾಜ್ಞಾನಿಯಾಗಬೇಕೆ ವಿನಹ ಜ್ಞಾನಿಯನ್ನು ನೆನೆದರಾಗದು, ಜ್ಞಾನಿಯನ್ನು ಪೂಜಿಸಿದರೂ ಆಗದು, ಸ್ವತಃ ತಾನು ಕೃಷಿ ಮಾಡದಿದ್ದರೆ:

''ಕರಿಕ ಕೆಂಚನನ್ನು ನೆನೆದರೆ ಕೆಂಚನಾಗಲಾರ.

ಕೆಂಚ ಕರಿಕನ ನೆನೆದರೆ ಕರಿಕನಾಗಲಾರ. ನೆನೆದರಾಗದು'' ಎಂದು ಬಸವಣ್ಣನವರು ಹೇಳಿದ್ದಾರೆ.

ಭಾರತ ಜ್ಞಾನ ಪ್ರಧಾನವಾದ ರಾಷ್ಟ್ರ ಎಂದು ಅನ್ಯ ರಾಷ್ಟ್ರಗಳಿಂದ ಕರೆಯಿಸಿಕೊಂಡಿದೆ. ಈ ದೇಶದ ಕವಿಗಳು ಸಾಹಿತಿಗಳು, ಉಪನಿಷತ್‌ಕಾರರು ದಾರ್ಶನಿಕರು, ಬುದ್ಧ ಮಹಾವೀರ ಬಸವಾದಿ ಶರಣರು, ದಾಸವರೇಣ್ಯರು, ತತ್ವ ಪದಕಾರರು, ಜಾನಪದರು ತತ್ವ ಭರಿತ ಶಬ್ದಗಳನ್ನು ಅಕ್ಷರಗಳ ಮೂಲಕ ಸೂತ್ರ ರೂಪದಲ್ಲಿ ಹರಡಿದ್ದಾರೆ.

ಸಿದ್ಧಾರ್ಥ ತಾನು ಕಂಡುಕೊಂಡ ತತ್ವವನ್ನು ಅಕ್ಷರಗಳಲ್ಲಿ ತುಂಬಿ ಶಬ್ದಗಳ ಮೂಲಕ 'ಬುದ್ಧ' ದರ್ಶನ ಮಾಡಿಸಿದ್ದಾರೆ. ವರ್ಧಮಾನ ಅಕ್ಷರಗಳ ಮೂಲಕ ತತ್ವಭರಿತ ಕತೆಗಳನ್ನು ಪೋಣಿಸಿ ತತ್ವದರ್ಶನ ಮಾಡಿಸಿ 'ಮಹಾವೀರ' ಎಂದು ಕರೆಯಿಸಿಕೊಂಡಿದ್ದಾರೆ.

ತತ್ವಪದಕಾರರು, ದಾಸರು ಅಕ್ಷರಗಳಿಗೆ ಅರಿವಿನ ಸಿಹಿ ಲೇಪಿಸಿ ಕಲ್ಲು ಸಕ್ಕರೆಯನ್ನಾಗಿ ಮಾಡಿ ಸಂತೆಯಲ್ಲಿ ಮಾರಿದ್ದು ಸಣ್ಣ ಮಾತಲ್ಲ.

ಬಸವಾದಿ ಶರಣರು, ತನುವಿನಲ್ಲಿ ತನ್ಮಯವಾದ ತತ್ವವನ್ನು ಅಕ್ಷರಗಳಲ್ಲಿ ತುಂಬಿ ಇಪ್ಪತ್ತೆರಡು ಸಾವಿರ ವಚನ ಸೂತ್ರಗಳನ್ನು ರಚಿಸಿದ್ದಾರೆ.

ಮಾತು ಬಲ್ಲ ಮನುಷ್ಯ ತಾನು ಆಡುವ ಮಾತಿನ ಮರ್ಮವರಿತು ತತ್ವವೇತ್ತನು

ಆಗಲಿ ಎಂದು ರಾಮಾಯಣ ಮಹಾಭಾರತ ಭಗವದ್ಗೀತೆಗಳನ್ನು ಈ ಪುಣ್ಯ ಭೂಮಿಯಲ್ಲಿಯೇ ರಚಿಸಲಾಗಿದೆ.

ಶ್ರೀರಾಮನ ಪ್ರಶ್ನೆಗಳಿಗೆ ಸಂವಾದದ ರೂಪದಲ್ಲಿ ಉತ್ತರಿಸಿದ ವಸಿಷ್ಠರ ಬೋಧಾಮೃತ ಕೂಡಾ ಜ್ಞಾನ ದರ್ಶನಕ್ಕಾಗಿ ಮನುಷ್ಯರನ್ನು ಕೈ ಮಾಡಿ ಕರೆಯುತ್ತಿದೆ.

ಹೀಗಿದ್ದರೂ ಕೂಡಾ ಮನುಷ್ಯ ತನ್ನದೇ ಆದ ಜ್ಞಾನವನ್ನು ತಾನೇ ಬಳಕೆ ಮಾಡಿಕೊಂಡು ಜ್ಞಾನದಿಂದ ಅರಳಿ ಮಹಾಜ್ಞಾನದ ಪರಿಮಳ ಬೀರಲು ಮನುಷ್ಯನಿಗೆ ಸಾಧ್ಯವಾಗುತ್ತಿಲ್ಲ.

ಮಾತು ಏನೆಲ್ಲವೂ ಅಲ್ಲ ; ಮಾತಿನಲ್ಲಿಯೇ ಏನೆಲ್ಲವೂ ಇದೆ. ಆದರೂ ಮಾತು ಆಡಿ, ಮಾತು ಕೇಳಿ ಜೀರ್ಣಸಿಕೊಳ್ಳಲು ಮನುಷ್ಯನಿಗೆ ಸಾಧ್ಯವಾಗುತ್ತಿಲ್ಲ.

'ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ'
ಎಂದು ಬಸವಣ್ಣನವರು ಹಾಡಿದ್ದಾರೆ.

ಇದು ಮಾನವ ಕುಲ ಅರಿವಿನಂದ ಬೆಳಗಲು ಸಹಾಯ ಮಾಡುವ ಮಹಾಸೂತ್ರ. ಈ ವಚನವನ್ನು ಅರಿವಿನಿಂದ ತಿಳಿಯಲು ಹೋದ ಓದುಗನಿಗೆ ವಿರಾಟ ಸ್ವರೂಪವಾಗಿ ದರ್ಶನ ನೀಡುತ್ತದೆ.

ವಚನ ಎಂದರೆ ಮಾತು ಶಬ್ದ. ಶಬ್ದದಲ್ಲಿ ಅರಿವಿದೆ. ಮರೆವಿನಿಂದ ಕೇಳಿದರೆ ಕೇಳಿದ ತನುವನ್ನು ಸುಡುತ್ತದೆ ; ಹೀಗೆಯೆ ಮರೆವಿನಿಂದ ನುಡಿದ ತನುವನ್ನು ಕೂಡಾ ಸುಡುತ್ತದೆ.

ಶಬ್ದ ದುರ್ಭಾವದಿಂದ ನುಡಿದ ತನುವನ್ನು ತನು ಇರುವವರೆಗೂ ನುಡಿದ ತನುವಿನಲ್ಲಿಯೇ ಇದ್ದು ತನುವನ್ನು ಮತ್ತೆ ಮತ್ತೆ ಸುಡುತ್ತದೆ.

ಶಬ್ದದಲ್ಲಿ 'ಅರಿವು' ಇದೆ ಎಂಬುದನ್ನು ಮನ ತನುವಿನ ಮೂಲಕ ಮರೆವಿನಿಂದ ನುಡಿದ ಫಲ. ಹಾಗೆಯೇ ಮರೆವಿನಿಂದ ಕೇಳಿದ ಫಲ ತನು ಮತ್ತು ಮನಕ್ಕೆ ದಕ್ಕುತ್ತದೆ.

'ನಿಃಶಬ್ದಂ ಬ್ರಹ್ಮಮುಚ್ಚತೆ' ಪ್ರತಿ ಶಬ್ದದಲ್ಲಿ ಅರಿವು ಎನ್ನುವ ಬ್ರಹ್ಮ ಬಚ್ಚಿಟ್ಟುಕೊಂಡಿದ್ದಾನೆ. ರಭಸದಿಂದ ತನುವಿನ ಮೂಲಕ ಬಾಣದಂತೆ ಪ್ರಯೋಗಿಸುವ ಶಬ್ದವನ್ನು ; ಕೇಳುವ ತನು ಗುತ್ತಿಗೆ ಹಿಡಿದು ಅದನ್ನು ನಿಃಶಬ್ದಗೊಳಸಿ ಅರಿವಿನಿಂದ ಕೇಳಿದಾಗ ಅದು ಕೇಳಿದ ತನುವಿನಲ್ಲಿ ಜೀರ್ಣವಾಗುತ್ತದೆ. ನುಡಿದ ತನುವಿಗೆ ಮಾತ್ರ ಗಾಯ ಮಾಡುತ್ತದೆ.

ಉದಾ : 'ಕತ್ತೆ' ಎನ್ನುವ ಶಬ್ದದಲ್ಲಿ ಅರಿವಿದೆ. ಮನುಷ್ಯ ಒಂದು ಪ್ರಾಣಿಯನ್ನು ಗುರುತಿಸುವುದಕ್ಕೆ 'ಕತ್ತೆ' ಎಂದು ಹೆಸರಿಟ್ಟ. ಕತ್ತೆ ಕತ್ತೆಯಲ್ಲ ಎಂದು ಮನುಷ್ಯನಿಗೆ ಗೊತ್ತಿದೆ. ಆದರೂ ಆತ 'ಕತ್ತೆಯಂಥವನೇ' ಎಂದು ಶಬ್ದ ದುರ್ಬಳಕೆ ಮಾಡಿಕೊಂಡು ಮತ್ತೊಬ್ಬನನ್ನು ನಿಂದಿಸಿದಾಗ 'ಶಬ್ದ' ನಿಂದಿಸಿದ ತನುವನ್ನು ಮೊದಲು ಸುಡುತ್ತದೆ. ನಿಂದನೆಗೆ ಒಳಗಾದ

ತನುವನ್ನು ನಂತರ ಸುಡುತ್ತದೆ. ಶಬ್ದ ಅರಿವಿನಿಂದ ನುಡಿಯದ್ದಕ್ಕಾಗಿ ನುಡಿದ ತನುವನ್ನು ಹೀಗೆ ನುಡಿಯಬಾರದಿತ್ತು ಎಂದು ಸುಡುತ್ತದೆ. ಅರಿವಿನಿಂದ ಶಬ್ದ ಕೇಳದ ತನುವನ್ನು ತನ್ನನ್ನು 'ಕತ್ತೆ'ಎಂದು ನುಡಿದನಲ್ಲ ಎಂದು ಸುಡುತ್ತದೆ.

ಕತ್ತೆ ತಾನಲ್ಲ ಎಂಬುದು ಕೇಳಿದಾತನಿಗೆ ಹೊಳೆಯುವುದಿಲ್ಲ, ಕತ್ತೆ ಅವನಲ್ಲ ಎಂದು ನುಡಿದಾತನಿಗೂ ಹೊಳೆಯುವುದಿಲ್ಲ. ಹೀಗಾಗಿ 'ಕತ್ತೆ' ಎನ್ನುವ ಶಬ್ದ ಮರೆವಿನಿಂದ ನುಡಿದಾತನನ್ನು , ಮರೆವಿನಿಂದ ಕೇಳಿದಾತನನ್ನು ನಿರಂತರ ಗಾಯಗೊಳಿಸುತ್ತದೆ. ಹೀಗೆ ಮರೆವಿನಿಂದ ನುಡಿದು, ಕೇಳಿದ ಎರಡು ತನುಗಳಿಗೆ ಶಬ್ದದಿಂದ ಆದ ಗಾಯ ತನು ಇರುವವರೆಗೆ ಮಾಯುವುದೇ ಇಲ್ಲ. ನುಡಿದ ತನುವಿನಲ್ಲಿ ಹೊತ್ತಿದ ಕಿಚ್ಚು ನುಡಿದ ತನುವನ್ನು ; ನುಡಿಗೊಳಗಾಗಿ ಕೇಳಿದ ತನುವನ್ನು ನಿರಂತರ ಸುಡದೆ ಬಿಡುವುದಿಲ್ಲ.

ಸು-ಶಬ್ದ, ಕು-ಶಬ್ದ ಶಬ್ದದಲ್ಲಿಯೇ ನೋಡಾ ಎಂದು ಚೆನ್ನಬಸವಣ್ಣನವರು ಹೇಳಿದರೆ, ಶಬ್ದ ಸೂತಕಿಗಳು ರೌರವ ನರಕಿಗಳು ಎಂದು ಅಲ್ಲಮ ಪ್ರಭು ಹೇಳಿದ್ದಾರೆ.

ಶಬ್ದ , ಸ್ಪರ್ಶ, ದೃಶ್ಯ, ರುಚಿ, ವಾಸನೆಯ ಸುಖಕ್ಕಾಗಿ ಕಾಯ ನಿರಂತರ ಹೋರಾಟ ಮಾಡುತ್ತದೆ. ಮನ ಮಾಡುವ ಬಯಕೆಯಿಂದಾಗಿ ತನು ನಿರಂತರ ಸುಖ ದುಃಖಗಳಲ್ಲಿ ಮುಳುಗುತ್ತದೆ. ಸುಖ ಸುಖವೂ ಅಲ್ಲ ; ದುಃಖ ದುಃಖವೂ ಅಲ್ಲ ಎಂದು ಮನಕ್ಕೆ ಅರಿವು ಆಗುವುದೇ ಇಲ್ಲ. ಏಕೆಂದರೆ ಶಬ್ದ ಕೇಳುವ ಕಿವಿಯಲ್ಲಿ ಮರೆವು ಇದೆ. ಈ ಕಿವಿಯ ಮರೆಯಲ್ಲಿ ಅರಿವಿನ ಕಿವಿಯೊಂದು ಇದೆ. ಶಬ್ದ ಅರಿವಿನ ಕಿವಿಯಿಂದ ಕೇಳಿದರೆ ಸುಖವೂ ಆಗುವುದಿಲ್ಲ. ದುಃಖವೂ ಆಗುವುದಿಲ್ಲ. ಹೀಗಾಗಿ ಬಸವಣ್ಣನವರು :

''ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯ
ಚರ್ಮದೊಳಗೆ ಚರ್ಮವಿದ್ದು ಸ್ಪರ್ಶಿಸಲೇಕರಿಯರಯ್ಯ
ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯ
ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯ
ಘ್ರಾಣದೊಳಗೆ ಘ್ರಾಣವಿದ್ದು ಮೂಸಿಸಲೇಕರಿಯರಯ್ಯ'' ಎಂದು ಮನುಕುಲವನ್ನು ಪ್ರಶ್ನಿಸಿದ್ದಾರೆ.

ಈ ನಾಡಿನ ಸಾಹಿತಿಗಳು ಸಂಶೋಧಕರು, ಶರಣರು ರಚಿಸಿದ ವಚನಗಳಲ್ಲಿ ಏನಿದೆ ಎಂಬುದರ ಕುರಿತು ಸಂಶೋದಧನೆಯಲ್ಲಿ ತೊಡಗಬೇಕಾಗಿದೆ. ಸರಕಾರ ಕೂಡಾ ಈ ಕೆಲಸಕ್ಕೆ ಸ್ಪಂದಿಸಬೇಕಾಗಿದೆ.

ಶರಣರ ವಚನಗಳನ್ನು ಆಯ್ದುಕೊಂಡು 'ಅರಿವೇ ಗುರು ' ಎನ್ನುವ ಸಂವಾದ ರೂಪದ ಈ ಕಿರು ಪುಸ್ತಕವನ್ನು ಹೊರತರಲಾಗಿದೆ. ಓದುವ ಓದುಗ ಬರೆದವನನ್ನು ನೆನೆಯದೆ ಓದುವ ಒಡಲಿನಲ್ಲಿ ಅರಿವಿನ ಕ್ರಾಂತಿಯ ಕಿಡಿ ಸಿಡಿದರೆ ಸಾಕು ಮಹಾಜ್ಞಾನದ ಬೆಳಕು ಬೆಳಗಿಂಗೆ ಬೆಳಗಾಗಿ ಬೆಳಗುವುದರಲ್ಲಿ ಸಂದೇಹವೇ ಇಲ್ಲ. ಆಗ 'ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಾ' ಎನ್ನುವ ಅರಿವಿನ ಸೂತ್ರ ಸಾರ್ಥಕ್ಯ ಪಡೆಯುತ್ತದೆ.

ಈ ಕೃತಿ ರಚಿಸಲು ಪ್ರೇರಣೆ ನೀಡಿದ ಸದ್ಗುರು ವಿದ್ಯಾನಂದ ಶರಣರ ಚರಣಗಳಿಗೆ ಹಣೆಮಣೆಯುವೆ . ಸದಾ ಅರಿವಿನ ಕೃಷಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಗುರುಭಾಯಿ ದೇವಾನಂದ ಶರಣರಿಗೂ ಸದಾ ನನ್ನೊಂದಿಗೆ ಅರಿವಿನ ಚರ್ಚೆಯಲ್ಲಿ ಭಾಗಿಯಾಗುವ ಶರಣಶ್ರೀ ಬಿ.ಜಿ.ಹುಲಿ, ಅಯ್ಯಪ್ಪಯ್ಯ ಹುಡಾ, ಮಂಡಲಗಿರಿ ಪ್ರಸನ್ನ ಅವರಿಗೂ ಶರಣು ಶರಣಾರ್ಥಿ.

13.01.2023 ಬಸವರಾಜ ಸ್ವಾಮಿ
ರಾಯಚೂರು ಸಂಪಾದಕ,
ಸುದ್ದಿಮೂಲ

# ವಿಷಯಾನುಕ್ರಮಣಿಕೆ

# ಕಾಯ ಉಳ್ಳವನು ಗುರುವಲ್ಲ

ಸಂಜೆ ಸಮಯ , ಸೂರ್ಯಾಸ್ತ ವಾಗುವುದರಲ್ಲಿದೆ. ಕಲ್ಯಾಣದ ಮಹಾಮನೆಯಲ್ಲಿ ಶರಣರ ಸಮೂಹ ಸತ್ಸಂಗಕ್ಕಾಗಿ ಸೇರುತ್ತಲಿದೆ. ಬಸವಣ್ಣ, ಚೆನ್ನಬಸವಣ್ಣ ಆಸೀನರಾಗಿದ್ದಾರೆ.

ಅಲ್ಲಮಪ್ರಭುಗಳು ಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದಾರೆ.

ಬಸವಣ್ಣನವರು ಎದ್ದುನಿಂತು ಸಕಲ ಶರಣರನ್ನು ಸ್ವಾಗತಿಸುತ್ತಾ ಪ್ರಭುದೇವರಿಗೆ ಶರಣೆಂದು ''ಗುರು'' ಎನ್ನುವ ವಿಷಯವನ್ನು ಪ್ರಸ್ತಾಪಿಸಿದರು.

ಸಕಲ ಶರಣರು ಒಕ್ಕೊರಲಿನಿಂದ

ತಾವೇ ನಮಗೆಲ್ಲರಿಗೂ ಗುರುವಾಗಿರುವಾಗ

ಪುನಃ ಗುರು ವಿಷಯವೇಕೆ ಪ್ರಸ್ತಾಪಿಸಿದಿರಿ ಬಸವಣ್ಣ .

**ಬಸವಣ್ಣ :** ಅಪಚಾರ, ಅಪಚಾರ. ಗುರುದೇವ ಕಾಯ ಉಳ್ಳವನಲ್ಲ. ಪ್ರತಿ-ಕಾಯದಲ್ಲಿ ಇದ್ದವನು. ಪ್ರತಿ-ಕಾಯದಲ್ಲಿ ಗುರು ಇರಬೇಕಾದರೆ ಕಾಯವುಳ್ಳವನು ಮತ್ತೊಂದು ಕಾಯಕ್ಕೆ ಗುರುವಾಗಲು ಸಾಧ್ಯವೆ?

**ಶರಣರ ಸಮೂಹ :** (ಆಶ್ಚರ್ಯ ವ್ಯಕ್ತಪಡಿಸುತ್ತಾ ತಮ್ಮೊಳಗೆ ತಾವು ಮಾತನಾಡಿಕೊಳ್ಳತೊಡಗಿದರು. ಶರಣ ಸಮೂಹದಲ್ಲಿಯ ಒಬ್ಬ ಶರಣ ಎದ್ದು ನಿಂತು)

**ಶರಣ :** ತಾವು ವ್ಯಕ್ತಪಡಿಸಿದ ವಿಷಯ ಸರಿ ಬಸವಣ್ಣ. ಆದರೆ, ಗುರುದೇವನೆಂದರೆ ಕಾಯವುಳ್ಳವನೆಂದು ನಾವು ನಂಬಿದ್ದೇವೆ. ಹಾಗೆಯೇ ಇಡೀ ಲೋಕ ನಂಬಿದೆ. ಆದರೆ ತಾವು ಹೇಳುವ ವಿಷಯ ಎಲ್ಲ ಶರಣರಿಗೂ ಕುತೂಹಲ ಮೂಡಿಸಿದೆ. ಹಾಗಾದರೆ ಗುರು ಯಾರು? ಗುರುದೇವನನ್ನು ಹೇಗೆ ಗುರುತಿಸಬೇಕು?

**ಬಸವಣ್ಣ :** ಚೆನ್ನಬಸವಣ್ಣನವರೆ, ತಾವು ಶರಣಸಮೂಹಕ್ಕೆ ''ಗುರು'' ಎಂದರೆ ಯಾರು ಎನ್ನುವುದನ್ನು ವಿವರಿಸಿ ಹೇಳಬಹುದೆ?

**ಚೆನ್ನಬಸವಣ್ಣ :** (ಬಸವಣ್ಣನವರಿಗೆ ಅಲ್ಲಮಪ್ರಭುಗಳಿಗೆ ತಲೆಬಾಗಿ) ಶರಣು ಶರಣೆಂದು, ಇಡೀ ಶರಣ ಸಮೂಹಕ್ಕೆ ತಲೆಬಾಗಿ ಶರಣೆನ್ನುತ್ತಾ ಗುರು ವಿಷಯವನ್ನು ಪ್ರಸ್ತಾಪಿಸತೊಡಗಿದರು.

ಗುರುದೇವ ಒಬ್ಬ ವ್ಯಕ್ತಿಯಲ್ಲ. ಕಾಯವುಳ್ಳವನು ಗುರುವಲ್ಲ. ಗುರುದೇವ ಅಕಾಯ. ಪ್ರತಿ ಕಾಯದಲ್ಲಿಯೂ ಇದ್ದಾನೆ. ಗುರು ವ್ಯಕ್ತನಲ್ಲ ; ಅವ್ಯಕ್ತ ಶಕ್ತಿ! ಈತ ಕಾಯ ಮತ್ತು ಕಾಯವನ್ನು ಆವರಿಸಿದ ಮನಕ್ಕೆ ಕಾಯದಲ್ಲಿಯೇ ಇದ್ದು ಬೋಧಿಸುತ್ತಾನೆ. ಹೀಗೆ ಕ್ಷಣ ಕ್ಷಣಕ್ಕೂ ಬೋಧಿಸುವ ಗುರುದೇವನನ್ನು ಮನವೇ ಕಂಡುಕೊಳ್ಳಬೇಕು.

**ಪ್ರಭುದೇವರು :** ಸರಿಯಾದ ಮಾತು ಚೆನ್ನಬಸವಣ್ಣನವರೆ. ನಿಮ್ಮ ಮಾತು ನನಗೆ ಅತೀ ಆನಂದವನ್ನುಂಟು ಮಾಡಿತು. ಒಡಲುಳ್ಳವನು ಗುರು ಹೇಗೆ ಆಗುತ್ತಾನೆ?

ಒಡಲೊಳಗಿದ್ದವನು ಗುರು! ಸಕಲ ಒಡಲುಗಳಲ್ಲಿಯೂ ಗುರುವಿದ್ದಾನೆ, ಅಂದಮೇಲೆ ಗುರುವಿದ್ದ ಒಡಲು ಮತ್ತೊಂದು ಒಡಲೊಳಗಿದ್ದ ಗುರುವಿಗೆ ಬೋಧಿಸಲು ಬರುತ್ತದೆಯೇ? ಗುರುದೇವ ಗುರುದೇವನಿಗೆ ಬೋಧಿಸಿದಂತಾಗಲಿಲ್ಲವೆ? ಒಡಲು ಯಾವ ದೇಶದ್ದಾದರೇನು? ಯಾವ ಭಾಷೆಯದಾದರೇನು? ಅದು ಹೆಣ್ಣಾದರೇನು, ಗಂಡಾದರೇನು? ಅದು ಗುರುದೇವನಿದ್ದ ಒಡಲು.

ಆತ ಒಡಲೊಳಗೆ ಇದ್ದಾನೆ , ಒಡಲಿಂಗೆ ಆಧಾರವಾಗಿ ಇದ್ದಾನೆ . ಒಡಲನ್ನು ಸೋಂಕದೆ ಸದಾ ಒಡಲನ್ನು ಬೆಳಗುತ್ತಿದ್ದಾನೆ . ಬೆಳಗಿಂಗೆ ಬೆಳಗಾಗಿ ಬೆಳಗುತ್ತಿದ್ದಾನೆ . ಆತನೇ ಗುರುದೇವ ; ಪ್ರತಿ ಒಡಲೊಳಗಿದ್ದ ಗುರುದೇವ.

**ಶರಣ** : ಒಡಲೇ ಗುರುವಾಗಿ, ಒಡಲುಗಳನ್ನೇ ಶಿಷ್ಯರುಗನ್ನಾಗಿಸಿಕೊಂಡು ಬೋಧಿಸುತ್ತಿದೆಯಲ್ಲ. ಒಡಲೇ ಗುರುವೆಂದು, ಒಡಲೇ ಶಿಷ್ಯನೆಂದು ಲೋಕ ಮುದ್ರೆ ಒತ್ತಿದೆಯಲ್ಲ? ಲೋಕದ ನಿಯಮ ತಪ್ಪಾಗಿದೆಯೆ ? ಲೋಕ ಗುರುದೇವನನ್ನು ತಪ್ಪಾಗಿ ಭಾವಿಸಿದೆಯೆ ಹೇಗೆ? ಒಡಲುಳ್ಳ ಶಿಷ್ಯ ಒಡಲುಳ್ಳ ಗುರುದೇವನಿಗೆ ಶಿಷ್ಯನಾಗಬಾರದೆ ? ಒಡಲುಳ್ಳ ಗುರು ಒಡಲುಳ್ಳ ಶಿಷ್ಯನನ್ನು ಶಿಷ್ಯನನ್ನಾಗಿಸಿಕೊಳ್ಳಬಾರದೆ ? ಈ ವಿಷಯ ಇಡೀ ಸಂಪ್ರದಾಯವನ್ನೇ ಬುಡಮೇಲು ಮಾಡಿದಂತಾಗುತ್ತದೆಯಲ್ಲ? ವಿವರಿಸಿ ಹೇಳಿ ಎನ್ನೊಡೆಯಾ.

**ಪ್ರಭು** : ಶರಣರಿಗೆ ತಿಳಿಯುವಂತೆ ಹೇಳಿ ಬಸವಣ್ಣ.

**ಬಸವಣ್ಣ** : ಅಪ್ಪಣೆ (ಎದ್ದು ನಿಂತು ಪ್ರಭುದೇವ ಚೆನ್ನಬಸವಣ್ಣನವರಿಗೆ ಕೈ ಮುಗಿದು)

ಗುರುದೇವ ಒಡಲುಳ್ಳವನು ಹೇಗೆ ಅಲ್ಲವೊ ಹಾಗೆಯೇ ಒಡಲುಳ್ಳವನು ಶಿಷ್ಯನೂ ಅಲ್ಲ. ಶಿಷ್ಯ ಕೂಡಾ ಒಡಲೊಳಗೆ ಇದ್ದವನೇ ಆಗಿದ್ದಾನೆ. ಈತ ಕೂಡ ಅವ್ಯಕ್ತ.

ಒಡಲು ಕಾಣುತ್ತದೆ ; ಒಡಲೊಳಗೆ ಸಂಗಮವಾದ ಅರಿವು ಕಾಣುವುದಿಲ್ಲ. ಈ ಅರಿವೇ ಗುರು. ಈತನನ್ನೆ ನಾನು ಸಂಗಮನಾಥ ಎಂದು ಕರೆದಿದ್ದೇನೆ. ಕಾಣುವ ಒಡಲನ್ನು ಆವರಿಸಿದ ಮನವೆಂಬ ನಾನು ಒಡಲಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನನ್ನೇ ಗುರುದೇವನನ್ನಾಗಿಸಿಕೊಂಡು , ಈ ಗುರುದೇವನಿಗೆ ಮನವೆಂಬ ನಾನು ಶಿಷ್ಯನಾಗಿ ಶರಣು ಹೋಗಿ ಶರಣಾಗತನಾಗಿದ್ದೇನೆ . ಆಗ ಗುರುದೇವ ಮೈದಡವಿ ಮನದ ಭವಿತನ ಸುಟ್ಟು ನನ್ನನ್ನು ಭಕ್ತನನ್ನಾಗಿಸಿಕೊಂಡಿದ್ದಾನೆ . ನಾನೇ ನನ್ನ ಗುರುವಿಗೆ ಶಿಷ್ಯನಾದೆ ; ನನ್ನ ಒಡಲೊಳಗಿದ್ದ ಗುರುದೇವನೆ ನನಗೆ ಗುರುವಾದ .

ಗುರು ಶಿಷ್ಯರ ಸಂಗಮ ಅಂಗದಲ್ಲಿಯೇ ಘಟಿಸಿ ಅಂಗ ಕೂಡಲಸಂಗಯ್ಯನಿದ್ದ ಸುಕ್ಷೇತ್ರವಾಯಿತು. ಗುರು ಶಿಷ್ಯರ ಸಂಗಮಕ್ಕೆ ಅಂಗ ಸಾಕ್ಷಿಯಾಯಿತು. ಹೀಗಾಗಿ ಇಡೀ ಪ್ರಪಂಚದಲ್ಲಿ ಗುರುದೇವ ಎನ್ನುವವನು ಒಬ್ಬನೆ ; ಶಿಷ್ಯನು ಕೂಡಾ ಒಬ್ಬನೇ ಆಗಿದ್ದಾನೆ.

ಕಾಯವನ್ನೇ ಕೈಲಾಸ ಮಾಡಿಕೊಂಡು ಅರಿವೆಂಬ ಗುರುದೇವ ಮನವೆಂಬ ಶಿಷ್ಯ ಇವರಿಬ್ಬರೂ ಕಾಯದಲ್ಲಿಯೇ ವಾಸ ಮಾಡಿದ್ದಾರೆ.

**ಶರಣ** : ಬಸವಣ್ಣಾ ತಾವು ಹೇಳುವ ಒಡಲನ್ನೇ ಲೋಕ ಗಂಡು, ಹೆಣ್ಣು ಎಂದು

ಗುರುತಿಸಿ ಮೇಲು ಕೀಳು ಎಂಬ ಕ್ರಿಯೆಯಲ್ಲಿ ತೊಡಗಿದೆಯಲ್ಲ. ಹಾಗಾದರೆ ಗಂಡು ಹೆಣ್ಣೆಂದು ಇಲ್ಲವೇ ಹೇಗೆ ?

**ಬಸವಣ್ಣ :** ಹೌದು ಶರಣರೇ. ಒಡಲಲ್ಲಿ ಗಂಡು ಎನ್ನುವ ಶಬ್ದ ಹುಡುಕಿದರೆ ಸಿಕ್ಕುವುದಿಲ್ಲ. ಹಾಗೆಯೇ ಹೆಣ್ಣು ಎನ್ನುವ ಶಬ್ದವೂ ಸಿಕ್ಕುವುದಿಲ್ಲ.

**ಶರಣ :** ಅದು ಹೇಗೆ ಬಸವಣ್ಣನವರೇ !

**ಬಸವಣ್ಣ :** ಕಣ್ಣು ಹೆಣ್ಣೂ ಅಲ್ಲ ; ಗಂಡು ಕೂಡಾ ಅಲ್ಲ. ಕಿವಿ, ಮೂಗು, ನಾಲಿಗೆ, ಚರ್ಮ ಇವು ಯಾವೂ ಕೂಡಾ ಗಂಡು ಅಲ್ಲ ಹೆಣ್ಣು ಕೂಡಾ ಅಲ್ಲ. ಒಡಲಲ್ಲಿ ಹರಿದಾಡುವ ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು, ರೋಮ, ನಖ ಇವು ಕೂಡಾ ಹೆಣ್ಣೂ ಅಲ್ಲ ಗಂಡು ಕೂಡಾ ಅಲ್ಲ. ಒಡಲಲ್ಲಿ ಗಂಡು ಹೆಣ್ಣು ಎನ್ನುವುದನ್ನು ಹುಡುಕಿದರೆ ಸಿಕ್ಕುವುದೇ ಇಲ್ಲ. ಒಡಲುಗಳಲ್ಲಿರುವ ಪದಾರ್ಥ ಒಂದೇ ಆಗಿದೆ. ಒಡಲು ಯಾವ ದೇಶದ್ದಾದರೇನು? ಒಡಲಲ್ಲಿರುವ ಅರಿವು ಒಂದೇ, ಒಡಲು ಒಂದೇ, ಒಡಲನ್ನು ಆವರಿಸಿರುವ ಮನ ಒಂದೇ ಆಗಿದೆ.

**ಶರಣ :** ತಾವು ಹೇಳುವುದೆಲ್ಲ ಸತ್ಯವೇ ಆಗಿದೆಯಲ್ಲ ಬಸವಣ್ಣಾ ! ಹಾಗಾದರೆ ಗಂಡು ಎಂದು ಯಾರಿಗೆ ಅನ್ನಬೇಕು ; ಹೆಣ್ಣು ಎಂದು ಯಾರಿಗೆ ಅನ್ನಬೇಕು ? ಈ ಶಬ್ದ ಒಡಲನ್ನು ನೋಡಿಯೇ ನಿರ್ಧರಿಸಿದೆಯಲ್ಲ ಈ ಲೋಕ! ತಾವು ಹೇಳುವ ಮಾತು ನನ್ನ ಅನುಭವಕ್ಕೆ ಬಂದು ಸತ್ಯ ಎನ್ನಿಸಿದರೂ ; ಲೋಕ ತಮ್ಮ ಈ ಮಾತನ್ನು ವಿರೋಧಿಸುತ್ತಿದೆಯಲ್ಲ!

**ಬಸವಣ್ಣ :** ಹೌದು ಶರಣರೆ. ಲೋಕದ ಮಾತು ಲೋಕಾನುಭವದ ಮಾತು. ಶರಣನ ಮಾತು ಸ್ವಾನುಭಾವದ ಮಾತು. ಲೋಕದ ಸಕಲ ಮಾತುಗಳನ್ನು ಶರಣ ತನ್ನ ಸ್ವಾನುಭಾವಕ್ಕೆ ತೆಗೆದುಕೊಂಡು ಹೋಗಿ ಆಲಿಸುತ್ತಾನೆ . ಆಗ ಲೋಕದ ಮಾತೇ ಬೇರೆಯಾಗುತ್ತದೆ ; ಶರಣನ ಮಾತೇ ಬೇರೆಯಾಗುತ್ತದೆ .

**ಶರಣ :** ಆದರೂ ಲೋಕದಲ್ಲಿ ಹೆಣ್ಣು ಗಂಡು ಎನ್ನುವ ಶಬ್ದ ಇದೆಯಲ್ಲ , ಹಾಗಾದರೆ ಹೆಣ್ಣು ಯಾವುದು ಗಂಡು ಯಾವುದು?

**ಬಸವಣ್ಣ :** ಮೊಲೆ ಮುಡಿ ಬಂದ ಒಡಲನ್ನು ಲೋಕ ಹೆಣ್ಣು ಎಂದು ಕರೆಯುತ್ತದೆ. ಗಡ್ಡ, ಮೀಸೆ ಬಂದ ಒಡಲನ್ನು ಲೋಕ ಗಂಡು ಎಂದು ಕರೆಯುತ್ತದೆ. ಒಡಲಲ್ಲಿಯೇ ಸಂಗಮವಾದ (ಆತ್ಮ) ಅರಿವು ಎಂಬ ಗುರುದೇವ ಹೆಣ್ಣೂ ಅಲ್ಲ ಗಂಡೂ ಅಲ್ಲ. ಇದೆಲ್ಲ ಒಡಲನ್ನು ಆವರಿಸಿದ ಮನದ ಕೆಲಸ.

**ಶರಣ :** ಅದು ಹೇಗೆ ಎಂಬುದನ್ನು ಬಿಡಿಸಿ ಹೇಳಿ ಬಸವಣ್ಣಾ

**ಬಸವಣ್ಣ :** ಒಡಲನ್ನು ಆವರಿಸಿದ ಮನ ಗಡ್ಡ ಮೀಸೆ ಬಂದ ಒಡಲನ್ನು ಗಂಡೆಂದು ಖಚಿತಪಡಿಸಿಕೊಂಡು ಗಂಡು ಎನ್ನುವ ಅಜ್ಞಾನ ಆಮಂತ್ರಣ ಮಾಡಿಕೊಂಡು ಮೊಲೆ ಮುಡಿ ಬಂದ ಒಡಲನ್ನು ಹೆಣ್ಣು ಎಂದು ಅಜ್ಞಾನದಿಂದ ನೋಡುತ್ತದೆ. ಹೀಗಾಗಿ ನೋಡುವ ಕಣ್ಣಲ್ಲಿ ಅಜ್ಞಾನ ದೃಶ್ಯವೊಂದು ನಿರ್ಮಾಣವಾಗಿದೆ.

**ಶರಣ :** (ಸಭೆಗೆ ಕೈ ಮುಗಿದು) ಪ್ರಭು , ಒಡಲಲ್ಲಿ ಎಂತಹ ಅದ್ಭುತವಾದ

ಅರಿವಿನ ರಹಸ್ಯವೇ ಅಡಗಿದೆಯಲ್ಲ ಒಡೆಯಾ ! ಬಸವಣ್ಣನವರು ಹೇಳಿದ ಮಾತು ಕೇಳಿ ನಮಗೆಲ್ಲ ರೋಮಾಂಚನವಾಗಿದೆ. ದಯವಿಟ್ಟು ತಾವು ಜ್ಞಾನ ಮತ್ತು ಅಜ್ಞಾನದ ಕಣ್ಣಿನ ಬಗ್ಗೆ ವಿವರವಾಗಿ ಹೇಳಿ ಪ್ರಭು.

**ಪ್ರಭು** : '' ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲಾ .
ನೋಡೂದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ .
ಕೂಡದ ಅಗಲದ ಕೂಟದ ಸುಖವನು
ಗುಹೇಶ್ವರಾ ನಿಮ್ಮ ಶರಣ ಮಾತ್ರ ಬಲ್ಲ ''

ನೋಡಲು ಹೋದರೆ ಒಡಲುಗಳೆಲ್ಲಾ ಒಂದೇ ಆಗಿ ಕಾಣುತ್ತವೆ. ಒಡಲಲ್ಲಿರುವ ಪದಾರ್ಥ ಕೂಡಾ ಒಂದೇ . ಮನೋಮಯವಾದ ಅಜ್ಞಾನದ ದೃಶ್ಯದಿಂದ ನೋಡಿದರೆ ಒಡಲು ಹೆಣ್ಣಾಗಿ ಗಂಡಾಗಿ ಕಾಣುತ್ತದೆ . ಜಾತಿ, ಮತ, ಪಂಥಗಳ ಮೂಲಕ ಕಾಣುತ್ತದೆ. ಶ್ರೀಮಂತ, ಬಡವ, ಅಧಿಕಾರಿ ಎಂದು ಅಜ್ಞಾನದ ದೃಶ್ಯ ಭೇಧಿಸಿ ನೋಡುತ್ತದೆ . ಆದರೆ ಕಣ್ಣಲ್ಲಿರುವ ಅರಿವಿನ ದೃಶ್ಯ ಬೇರೆಯೇ ನೋಡುತ್ತದೆ . ಆ ದೃಶ್ಯಕ್ಕೆ ಒಡಲು ಮಾತ್ರ ಕಾಣುತ್ತದೆ. ಒಡಲಲ್ಲಿರುವ ಅರಿವು ಎನ್ನುವ ಗುರುದೇವ ಮಾತ್ರ ಕಾಣುತ್ತಾನೆ. ಒಡಲು ಎನ್ನುವುದು ಅರಿವು ಎನ್ನುವ ಗುರುದೇವನ ಒಡವೆ !

**ಶರಣ** : ಬಸವಣ್ಣನವರೆ ತಾವು, ಒಡಲಲ್ಲಿರುವ ಒಡೆಯನನ್ನು ನೋಡಿಯೆ ''ಎನಗಿಂತ ಕಿರಿಯರಿಲ್ಲ'' ಎಂದು ಹೇಳಿರಬಹುದಲ್ಲವೇ?

**ಬಸವಣ್ಣ** : ಹೌದು ಶರಣರೇ, ತಾವು ಸರಿಯಾಗಿಯೇ ಊಹಿಸಿರುವಿರಿ. 'ಎನಗಿಂತ ಕಿರಿಯರಿಲ್ಲ ; ಶಿವಭಕ್ತರಿಗಿಂತ ಹಿರಿಯರಿಲ್ಲ' ಎನ್ನುವ ಸೂತ್ರವೇ ಸತ್ಯ.

ಸಕಲ ಒಡಲುಗಳಲ್ಲಿ ಇರುವ ಅರಿವು ಎನ್ನುವ ಗುರುದೇವನು ಹಿರಿಯ. ಅರಿವು ಎನ್ನುವ ಗುರುದೇವನನ್ನೇ ಪೂರ್ವಜರು ಮಹಾದೇವನೆಂದು, ಸದಾಶಿವನೆಂದು, ಸಾಕ್ಷಾತ್ ಪರಬ್ರಹ್ಮನೆಂದು ಕರೆದಿದ್ದಾರೆ.

''ಗುರುದೇವೋ ಮಹಾದೇವೋ
ಗುರುದೇವೋ ಸದಾಶಿವಃ.
ಗುರು ಸಾಕ್ಷಾತ್ ಪರಬ್ರಹ್ಮ
ತಸ್ಮೈ ಶ್ರೀ ಗುರುವೇ ನಮಃ''

ಎಂದು ಪೂರ್ವಜರು ಹೇಳಿದ ಸೂತ್ರ ಕೂಡಾ ಹಾಗೆಯೇ ಹೇಳುತ್ತಿದೆಯಲ್ಲ.

ಕಣ್ಣಲ್ಲಿರುವ ಮನವೆಂಬ ದೃಶ್ಯಕ್ಕೆ ಈ ಸೂತ್ರ ಅರಿವಿಗೆ ಬಂದರೆ ; ಕಣ್ಣಲ್ಲಿಯೇ ಇರುವ ಅರಿವು ಎಂಬ ದೃಶ್ಯದಲ್ಲಿ ಮನವೆಂಬ ಅಜ್ಞಾನ ದೃಶ್ಯ ಸಂಗಮವಾಗಿ ಅರಿವಿನ ದೃಶ್ಯವೇ ತಾನಾಗುತ್ತದೆ.

ಅರಿವಿನ ದೃಶ್ಯದಿಂದ ನೋಡಿದರೆ ಅಣು , ರೇಣು , ತೃಣ , ಕಾಷ್ಠದಲ್ಲಿಯೂ ಸತ್ಯವೇ ಕಾಣುತ್ತದೆ. ಹೀಗಾಗಿ ಒಡಲಲ್ಲಿರುವ ಅರಿವೇ ಗುರುದೇವನಾಗಿದ್ದಾನೆ. ಒಡಲನ್ನು ಆವರಿಸಿದ ಮನವೇ ಆ ಗುರುದೇವನಿಗೆ ಭಕ್ತನಾಗಿದ್ದಾನೆ. ಒಡಲಲ್ಲಿ ಅರಿವು ಎನ್ನುವ ಶಿವನೂ

ಇದ್ದಾನೆ ; ಆತನನ್ನು ಆರಾಧಿಸುವ ಮನವೆಂಬ ಭಕ್ತನೂ ಇದ್ದಾನೆ.ಹೀಗಾಗಿ ನಾನು ನನಗೆ ಕಂಡ ಸತ್ಯವನ್ನೇ ಹೇಳಿದ್ದೇನೆ ಶರಣರೇ.

'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ'

ನಾನು ಕಿರಿಯರಲ್ಲಿ ಕಿರಿಯನಾಗಿದ್ದೇನೆ. ಸತ್ಸಂಗದಲ್ಲಿ ಪಾಲ್ಗೊಂಡ ಸಕಲ ಶರಣರು, ಅಷ್ಟೇ ಏಕೆ ಈ ಬ್ರಹ್ಮಾಂಡದಲ್ಲಿರುವ ಸಕಲ ಒಡಲುಗಳಲ್ಲಿರುವ (ಗುರುದೇವ) ಶಿವನೇ ಹಿರಿಯನಾಗಿದ್ದಾನೆ.

**ಶರಣ ಸಮೂಹ :** ಧನ್ಯರಾದೆವು ಬಸವಣ್ಣ ; ನಾವೆಲ್ಲ ಪಾವನರಾದೆವು !

''ನೋಡೂದ ನೋಡಲರಿಯದೇ ಕೆಟ್ಟಿತ್ತೀ ಜಗವೆಲ್ಲ''

ಎಂದು ಹೇಳಿದ ಪ್ರಭುದೇವರ ಸೂತ್ರ;

''ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ''

ಎಂದು ಹೇಳಿದ ಬಸವಣ್ಣನವರ ಸೂತ್ರ ಕೇಳಿ , ಕಣ್ಣೊಳಗಿರುವ ಅರಿವೆಂಬ 'ಗುರುದೇವನ' ಕಣ್ಣಿಗೆ ಕಣ್ಣನ್ನು ಆವರಿಸಿದ ' ಮನವೆಂಬ ' ಮಾಯಾಮಯವಾದ ಪೊರೆ ಕಳಚಿ ಮನವೆಂಬ ಕಣ್ಣೆ ಅರಿವಿನ ಕಣ್ಣಿಗೆ ದಾಸನಾಯಿತು ಗುರುದೇವ ಎಂದು ಶರಣ ಸಮೂಹ ಒಕ್ಕೊರಲಿನಿಂದ ಹೇಳಿತು.

**ಪ್ರಭುದೇವ :** ''ಗುರು'' ಎನ್ನುವ ವಿಷಯದ ಕುರಿತು ನಡೆದ ಚರ್ಚೆ ಇಲ್ಲಿಗೆ ಮುಕ್ತಾಯ ಮಾಡೋಣ. ನಾಳೆ ಬೆಳಗಿನ ಚರ್ಚೆಯಲ್ಲಿ ಇದೇ ವಿಷಯವನ್ನು ಮುಂದುವರೆಸೋಣ ಎಂದು ಸಭೆಗೆ ಮಂಗಲ ಹಾಡಿದರು.

ಶರಣ ಸಮೂಹ ಇದೇ ಚರ್ಚೆಯಲ್ಲಿ ತೇಲಾಡುತ್ತಾ ಓಲಾಡುತ್ತಾ ಪರಮಾನಂದದಿಂದ ತಮ್ಮ ತಮ್ಮ ಮನೆಗೆ ಮರಳಿದರು.

## ಕಾಯ ಉಳ್ಳವನು ಶಿಷ್ಯನಲ್ಲ

ಅರುಣೋದಯದ ಸಮಯ. ಕಲ್ಯಾಣದಿಂದ ಶರಣ ಸಮೂಹ ಬಸವಣ್ಣನು ಇರುವ ಮಹಾಮನೆಗೆ ಸತ್ಸಂಗಕ್ಕಾಗಿ ತೆರಳುತ್ತಲಿದೆ. ಪಕ್ಷಿಗಳ ಕಲರವ ಇಂಪಾಗಿ ಕೇಳುತ್ತಲಿದೆ. ಮಹಾಮನೆಯಲ್ಲಿ ಬಸವಣ್ಣ, ಚೆನ್ನಬಸವಣ್ಣ ವೇದಿಕೆಯ ಮೇಲೆ ಆಸೀನರಾಗಿದ್ದಾರೆ. ಅಲ್ಲಮ ಪ್ರಭುಗಳು ಅಧ್ಯಕ್ಷತೆಯನ್ನು ವಹಿಸಿದ್ದಾರೆ. ಸಕಲ ಶರಣರು ಶರಣು ಶರಣಾರ್ಥಿ ಎನ್ನುತ್ತಾ ಕೈ ಮುಗಿದು ಕುಳಿತುಕೊಳ್ಳುತ್ತಾರೆ.

**ಶರಣ :** ಎದ್ದು ನಿಂತು ಅಲ್ಲಮಪ್ರಭುಗಳಿಗೆ, ಬಸವಣ್ಣ, ಚೆನ್ನಬಸವಣ್ಣನವರಿಗೆ ಶರಣು ಹೇಳುತ್ತಾ, ಶರಣ ಸಮೂಹಕ್ಕೂ ಶರಣೆನ್ನುತ್ತಾ ನಿನ್ನೆ ತಾವು ಮಂಡಿಸಿದ ' ಗುರುದೇವ 'ನ ವಿಷಯ ಇಡೀ ಶರಣ ಸಮೂಹದ ಕಣ್ಣು ತೆರೆಯಿಸಿತು. ನಾವೆಲ್ಲ ಏಕೆ? ಇಡೀ ಪ್ರಪಂಚದಲ್ಲಿರುವ ಮನುಕುಲವೆಲ್ಲ 'ಗುರುದೇವ ' ನನ್ನು ಒಬ್ಬ ವ್ಯಕ್ತಿ ಎಂದು ಭಾವಿಸಿದೆ. ಈ ಭಾವವೇ ಮನು ಕುಲಕ್ಕೆ ಕಂಟಕವಾದಂತಾಗಿದೆ. ಗುರುದೇವ ಒಬ್ಬ ವ್ಯಕ್ತಿ ಎಂದು ತಿಳಿದುಕೊಂಡ ಹಾಗೆಯೇ 'ಶಿಷ್ಯ' ಕೂಡಾ ಒಬ್ಬ ವ್ಯಕ್ತಿಯೆಂದು ತಿಳಿದುಕೊಂಡಿದೆ.

ಇಲ್ಲಿಯೇ ತಪ್ಪಾಗಿದೆ. ದಯವಿಟ್ಟು ನಮಗೆಲ್ಲ ತಿಳಿಯುವ ಹಾಗೆ ''ಗುರು'' ವಿಷಯವನ್ನೇ ಮುಂದುವರಿಸಲು ಶರಣ ಸಮೂಹದಿಂದ ನನ್ನ ಮನವಿ ಪ್ರಭು ಎಂದಾಗ

ಶರಣ ಸಮೂಹ ಕೂಡಾ ಒಕ್ಕೊರಲಿನಿಂದ ದಯವಿಟ್ಟು ಮುಂದುವರೆಸಿ ಪ್ರಭು ಎಂದು ಕೂಗಿ ಹೇಳಿತು.

**ಪ್ರಭು :** ಹಾಗೆಯೇ ಆಗಲಿ.

ಚೆನ್ನಬಸವಣ್ಣನವರೆ ಪ್ರಾರಂಭದಲ್ಲಿ ನೀವೇ ''ಗುರುದೇವ''ನ ವಿಷಯವನ್ನು ಮುಂದುವರೆಸಿ.

**ಚೆನ್ನಬಸವಣ್ಣ :** ವ್ಯಕ್ತಿಯನ್ನು ''ಗುರುದೇವ''ನೆಂದು ತಿಳಿದುಕೊಂಡದ್ದು ತಪ್ಪಾಗಿದೆಯೆಂದು ತಾವು ಹೇಳಿದಿರಿ ಶರಣರೆ . ಅದು ಹಾಗಲ್ಲ. ಪ್ರತಿ ವ್ಯಕ್ತಿಯಲ್ಲೂ 'ಗುರುದೇವ' ಸಂಗಮವಾದದ್ದು ವ್ಯಕ್ತಿಗೆ ಗೊತ್ತಾದ ಮೇಲೆ ಕಾಯದೊಳಗಿದ್ದ ಆ 'ಗುರುದೇವ'ನನ್ನು ಕುರಿತು ಕಾಯಕ್ಕೆ 'ಗುರುದೇವ' ಎಂದು ಸಂಬೋಧಿಸಿದರೆ ತಪ್ಪಲ್ಲ, ಆದರೆ ಪ್ರತಿ ತನುವಿನಲ್ಲಿ ಅರಿವೆಂಬ ಗುರುದೇವ ತನ್ಮಯವಾದದ್ದು ತನ್ನ ಸ್ವಾನುಭಾವಕ್ಕೆ ಬಂದ ನಂತರವೇ ಆ ವ್ಯಕ್ತಿ ಪ್ರತಿ ವ್ಯಕ್ತಿಯಲ್ಲಿ ಗುರುದೇವನನ್ನೇ ಕಾಣುತ್ತಾನೆ. ಆ ಗುರುದೇವನಿಗೆ ಶರಣು ಶರಣಾರ್ಥಿ ಎಂದು ತಲೆಬಾಗುತ್ತಾನೆ.

**ಪ್ರಭು :** ''ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ'' ಎನ್ನುವ

ನಿನ್ನೆ ಹೇಳಲಾದ ಸೂತ್ರವನ್ನು ತಾವೆಲ್ಲಾ ಸದಾ ಬಳಸಿಕೊಳ್ಳಬಹುದಾಗಿದೆ.

**ಶರಣ :** ತಾವು ನಿನ್ನೆ ಹೇಳಿದ ಸೂತ್ರ ಎಲ್ಲದಕ್ಕೂ ಹೇಗೆ ಬಳಕೆಯಾಗುತ್ತದೆ ಎಂಬುದನ್ನು

ವಿವರಿಸಿ ಹೇಳಿ ಒಡೆಯಾ.

**ಪ್ರಭು** : ಈ ಭೂಮಿಯ ಮೇಲಿರುವ ಸಕಲ ಪ್ರಾಣಿಗಳಲ್ಲಿ ಮನುಷ್ಯನೊಬ್ಬನಿಗೆ ಮಾತ್ರ ಆಲೋಚನೆ ಮಾಡುವ ಶಕ್ತಿಯಿದೆ. ಅರಿವು ಇದೆ. ದೇಹದಲ್ಲಿರುವ ಆ ಅರಿವೇ ಗುರುದೇವನಾಗಿ ದೇಹದೊಂದಿಗೆ ಮತ್ತು ಮನದೊಂದಿಗೆ ಮಾತನಾಡುತ್ತಾನೆ.

ದೇಹವನ್ನು ಆವರಿಸಿದ ಮನ , ಗುರುದೇವನ ಮಾತುಗಳನ್ನು ತಾನು ಸಂಗ್ರಹ ಮಾಡಿಕೊಂಡು ದೇಹದೊಂದಿಗೆ ನುಡಿಯುತ್ತದೆ.

ಬಸವಣ್ಣ ಜಾಣ ; ಜಾಣರ ಜಾಣ. ಈತ ತನುವನ್ನು ಆವರಿಸಿದ ಮನವನ್ನು ಹಿಡಿದು, ತನುವಿನಲ್ಲಿಯೇ ತನ್ಮಯವಾದ ಅರಿವು ಎನ್ನುವ ಗುರುದೇವನಿಗೆ ಭಕ್ತನನ್ನಾಗಿ ಮಾಡಿದ್ದಾನೆ.

ಈ ಭಕ್ತನಿಗೆ ಸಕಲ ತನುಗಳಲ್ಲಿ ತನ್ಮಯವಾದ ಗುರುದೇವ ಮಾತ್ರ ಕಾಣುತ್ತಾನೆ. ಹೀಗಾಗಿ ಸಕಲ ತನುಗಳಿಗೂ ತಲೆಬಾಗಿ ಶರಣು ಶರಣಾರ್ಥಿ ಶರಣರೆ ಎಂದು ನಮಿಸುತ್ತಾನೆ. ಶರಣರನ್ನು ಕೂಡಲ ಸಂಗನ ಶರಣರು ಎಂದು ಸಂಬೋಧಿಸುತ್ತಾನೆ. ಹೀಗಾಗಿ ಬಸವಣ್ಣ 'ಭಕ್ತಿ ಭಂಡಾರಿ'.

**ಶರಣ** : ತಮ್ಮ ವಚನ ಸೂತ್ರದ ಕೊನೆಯಲ್ಲಿ ' ಕೂಡಲಸಂಗಮದೇವಾ ' ಎನ್ನುವುದನ್ನು ನಮಗೆ ವಿವರಿಸಿ ಬಸವರಸ !

**ಬಸವಣ್ಣ** : ಆಗಲಿ . ಹರಿಯುವ ನದಿಗೆ ಜನ ಆಯಾ ಹೆಸರುಗಳನ್ನು ಇಟ್ಟಿದ್ದಾರೆ. ಕೃಷ್ಣೆ, ಘಟಪ್ರಭಾ, ಮಲಪ್ರಭಾ ಎಂಬ ಹೆಸರಿನ ನದಿಗಳು ಹರಿಯುತ್ತಲಿವೆ. ಜನ ಕೃಷ್ಣೆಯನ್ನು ಮಲಪ್ರಭಾ ಎಂದು ಕರೆಯುವುದಿಲ್ಲ, ಮಲಪ್ರಭೆಯನ್ನು ಘಟಪ್ರಭಾ ಎಂದು ಕರೆಯುವುದಿಲ್ಲ. ಹೀಗೆ ಕರೆಯದಿರಲು ಮನವೇ ಕಾರಣ.

ಈ ಮೂರು ನದಿಗಳು ಹರಿಯುತ್ತಾ ಹರಿಯುತ್ತಾ ಒಂದೇ ಜಾಗದಲ್ಲಿ ಕೂಡಿದಾಗ ಕೂಡಿದ ಆ ಜಲರಾಶಿಯನ್ನು ಜನ 'ಸಂಗಮ' ಎಂದು ಕರೆಯುತ್ತಾರೆ. ಆ ಮೂರು ನದಿಗಳು ಸಂಗಮವಾಗಿ ಸಂಗಮದಲ್ಲಿ ಕಳೆದುಹೋಗಿವೆ. ಕೃಷ್ಣೆ, ಮಲಪ್ರಭಾ, ಘಟಪ್ರಭಾ ಈ ಮೂರು ಹೆಸರಿನ ನದಿಗಳು 'ಸಂಗಮ'ದಲ್ಲಿ ಸಿಕ್ಕುವುದಿಲ್ಲ.

'ಅರಿವು ' ಎನ್ನುವ ಗುರುದೇವ, 'ಮನ ' ಎನ್ನುವ ಭಕ್ತ , 'ಅಂಗ ' ಎನ್ನುವ ಆಲಯದಲ್ಲಿ ಸಂಗಮವಾಗಿದ್ದಾರೆ. ಹೀಗಾಗಿ ಅಂಗವೇ ಲಿಂಗಾಂಗವಾಗಿದೆ , ತ್ರಿಕೂಟ ಸಂಗಮವಾಗಿದೆ. ಶರಣರಿಂದ ಶರಣ ಸತಿ ಲಿಂಗ ಪತಿ ಎಂದು ಕರೆಯಿಸಿಕೊಂಡಿದೆ.

**ಶರಣ** : 'ಶರಣ ಸತಿ ಲಿಂಗಪತಿ ' ಎಂಬುದನ್ನು ವಿವರಿಸಿ ಹೇಳಿ ಬಸವಣ್ಣಾ.

**ಬಸವಣ್ಣ** : ಪ್ರಭುದೇವರ ಅಪ್ಪಣೆಯಾದಾಗ ಮುಂದೆ ಎಂದಾದರೂ ಹೇಳುವೆ (ಎಂದು ಹೇಳುತ್ತಾ ಆಸೀನರಾದರು).

**ಪ್ರಭು** : ಇಡೀ ಬ್ರಹ್ಮಾಂಡದಲ್ಲಿರುವ ಸರ್ವ ಅಂಗಗಳೆಲ್ಲ 'ಅರಿವಿನ ಲಿಂಗ 'ಗಳೇ ಆಗಿವೆ. 'ಅರಿವು' ಎನ್ನುವ 'ಗುರುದೇವ ' ಮನದ ಗಮನಕ್ಕೆ ಬಾರದೇ ಇರುವುದರಿಂದ 'ಮನ ' ದೇಹವನ್ನು ತನ್ನ ಸ್ವತ್ತಿನಂತೆ ಬಳಕೆ ಮಾಡುತ್ತಲಿದೆ . ದೇಹ ಮನದ ಸ್ವತ್ತಲ್ಲ ;

ದೇಹ ಅರಿವಿನ ಸ್ವತ್ತು. ದೇಹ ಅರಿವು ಎನ್ನುವ ಗುರುದೇವ ವಾಸ ಮಾಡಿದ ಮನೆ.

ದೇಹ ಮತ್ತು ಮನ ಅರಿವೆಂಬ 'ಗುರುದೇವ 'ನಿಗೆ ಶರಣು ಹೋಗಿ ಶರಣಾಗತನಾಗಬೇಕಿತ್ತು . ಆದರೆ ದೇಹ ಮನಕ್ಕೆ ದಾಸನಾಗಿದೆ. ಗುರುದೇವ ಹೇಳಿದಂತೆ ಕೇಳಬೇಕಾದ ದೇಹ ಮನ ಹೇಳಿದಂತೆ ಕೇಳುತ್ತದೆ.

ಒಡಲೊಡೆಯನನ್ನು ಮರೆತ ದೇಹ , ಒಡೆಯನಿಗೆ ದಾಸಿಯಾಗಬೇಕಾದ ಮನವನ್ನೇ ಒಡೆಯನನ್ನಾಗಿ ಸ್ವೀಕರಿಸಿದೆ. ಹೀಗಾಗಿ ದೇಹದ ತಾಳ ತಪ್ಪಿದೆ.

ಅಂಗದ ಐದು ಜ್ಞಾನೇಂದ್ರಿಯಗಳಲ್ಲಿ 'ಮನ ' ತನ್ನ ಕತ್ತಲೆಯ ಸಾಮ್ರಾಜ್ಯವನ್ನು ಕಟ್ಟಿಕೊಂಡು ರಾಜ್ಯಭಾರ ಮಾಡುತ್ತಲಿದೆ. ಜ್ಞಾನೇಂದ್ರಿಯಗಳನ್ನೇ ಇಂದ್ರಿಯಗಳನ್ನಾಗಿಸಿಕೊಂಡಿದೆ. ಹೀಗಾಗಿ ವಸ್ತುವಿನ ಸತ್ಯ ಕಣ್ಣಿಗೆ ಕಾಣದೆ ಮಿಥ್ಯ ಮಾತ್ರ ಕಾಣುತ್ತದೆ. ಮಿಥ್ಯದ ಆರಾಧನೆ ಎಲ್ಲೆಡೆಯೂ ನಡೆದಿದೆ. ಇಡೀ ಬ್ರಹ್ಮಾಂಡದಲ್ಲಿ ಮಿಥ್ಯದ ಪೂಜೆಯೇ ನಡೆದಿದೆ.

ಸತ್ಯಕ್ಕೆ ಪೂಜೆಯ ಅವಶ್ಯಕತೆಯಿಲ್ಲ. ಏಕೆಂದರೆ ವಸ್ತುವೂ ಸತ್ಯ ; ವಸ್ತುವನ್ನು ನೋಡುವ ತಾನು ಕೂಡಾ ಸತ್ಯ .

ಶರಣ ಸಮೂಹ ತಮ್ಮ ತಮ್ಮಲ್ಲಿಯೇ ಗುಸು ಗುಸು ಮಾತನಾಡಿಕೊಳ್ಳುತ್ತಾ ಪ್ರಭುಗಳ ಮಾತು ಅರಗಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ ಎನ್ನುವಂತೆ ನೋಡತೊಡಗಿದರು.

ಅಷ್ಟರಲ್ಲಿಯೇ ಒಬ್ಬ ಶರಣ ಎದ್ದು ನಿಂತು.

**ಶರಣ :** ಪ್ರಭುಗಳನ್ನು ಕುರಿತು , ತಾವು ಹೇಳಿದ ಮಾತು ಬಹಳ ರಹಸ್ಯಮಯವಾದುದು ಹಾಗೂ ಗಂಭೀರವಾದುದು ಆಗಿದೆ. ದಯವಿಟ್ಟು ಉದಾಹರಣೆಯೊಂದಿಗೆ ನಮಗೆ ತಿಳಿಯುವಂತೆ ವಿವರಿಸಿ ಹೇಳಿ ಎನ್ನೊಡೆಯಾ.

**ಪ್ರಭು :** ಕಾಣುವ ಕಣ್ಣುಗಳು ಎರಡಾದರೂ ನೋಡುವ ದೃಶ್ಯ ಒಂದೇ ಆಗಿದೆ.

ದೃಶ್ಯದಲ್ಲಿ ಸತ್ಯದೃಶ್ಯ ಒಂದು, ಮಿಥ್ಯ ದೃಶ್ಯ ಒಂದು ಎಂದು ಎರಡಾಗಿದೆ.

ಅರಿವು ಎನ್ನುವ ಗುರುದೇವನ ಸತ್ಯ ದೃಶ್ಯ ಒಂದರಲ್ಲಿ

ಮನವೆಂಬ ಮಿಥ್ಯ ದೃಶ್ಯ ತನ್ನ ಸುಳ್ಳು ಸಾಮ್ರಾಜ್ಯವನ್ನು ಸ್ಥಾಪಿಸಿ ರಾಜ್ಯಭಾರ ಮಾಡುತ್ತಲಿದೆ.

**ಶರಣ :** ಅದು ಹೇಗೆ ಪ್ರಭು ? ತಾವು ಹೇಳುವ ಮಾತು ವಿಚಿತ್ರವಾಗಿದೆಯಲ್ಲಾ! ದೃಶ್ಯ ಒಂದೇ ಆದರೂ ತಾವು ಎರಡೆಂದು ಹೇಳುವಿರಿ ; ಅದು ಹೇಗೆ ?

**ಪ್ರಭು :** ಇದೇ ಕಣ್ಣಿನಲ್ಲಿರುವ ರಹಸ್ಯ!

ನಿಧಾನವಾಗಿ ಆಲಿಸಿ.

(**ಶರಣ ಸಮೂಹ :** ಹಾಗೇ ಆಗಲಿ ಪ್ರಭು ಎಂದು ಮೈತುಂಬಾ ಕಣ್ಣಾಗಿಸಿಕೊಂಡು ನೆಟ್ಟಗೆ ಅಲುಗಾಡದಂತೆ ಪ್ರಭುಗಳು ಹೇಳುವುದನ್ನೇ ಕೇಳುತ್ತಾ ಕುಳಿತರು.)

**ಪ್ರಭು :** ಒಂದು ಕಲ್ಲಿನ ತುಂಡನ್ನು ಶರಣ ಸಮೂಹಕ್ಕೆ ತೋರಿಸುತ್ತಾ (ಇದೇನೆಂದು ಕೇಳಿದರು.)

**ಶರಣ ಸಮೂಹ :** ಒಕ್ಕೊರಲಿನಿಂದ 'ಕಲ್ಲು 'ಎಂದು ಹೇಳಿತು .

**ಪ್ರಭು :** ಕಲ್ಲಲ್ಲಿ ಕೆತ್ತಿದ ಶಿವನ ಮೂರ್ತಿಯನ್ನು ತೋರಿಸುತ್ತಾ ಇದೇನೆಂದು ಕೇಳಿದರು.

**ಶರಣ ಸಮೂಹ :** 'ಶಿವ 'ಎಂದು ಶರಣ ಸಮೂಹ ಒಕ್ಕೊರಲಿನಿಂದ ಹೇಳಿತು.

**ಪ್ರಭು :** ಕಲ್ಲಲ್ಲಿ ಕೆತ್ತಿದ 'ಬ್ರಹ್ಮನ 'ಮೂರ್ತಿಯನ್ನು ತೋರಿಸುತ್ತಾ ಇದೇನೆಂದು ಕೇಳಿದರು.

**ಶರಣ ಸಮೂಹ :** 'ಬ್ರಹ್ಮ 'ಎಂದು ಒಂದೇ ಧ್ವನಿಯಲ್ಲಿ ಕೂಗಿ ಹೇಳಿತು.

**ಪ್ರಭು :** ಕಲ್ಲಲ್ಲಿ ಕೆತ್ತಿದ 'ವಿಷ್ಣು 'ಮೂರ್ತಿಯನ್ನು ತೋರಿಸುತ್ತಾ ಇದೇನೆಂದು ಕೇಳಿದರು.

**ಶರಣ ಸಮೂಹ :** 'ವಿಷ್ಣು ' ಎಂದು ಶರಣ ಸಮೂಹ ಕೂಗಿ ಹೇಳಿತು.

**ಪ್ರಭು :** ಪುನಃ ಕಲ್ಲಿನ ತುಂಡೊಂದನ್ನು
ಶಿವನ ಮೂರ್ತಿಯೊಂದನ್ನು ತೋರಿಸುತ್ತಾ
ಇದೇನೆಂದು ಕೇಳಿದರು.

**ಶರಣ ಸಮೂಹ :** ಒಂದು 'ಕಲ್ಲು ' ಮತ್ತೊಂದು 'ಶಿವ ' ಎಂದು ಶರಣ ಸಮೂಹ ಕೂಗಿ ಹೇಳಿತು.

**ಪ್ರಭು :** ಪುನಃ ಕಲ್ಲಿನ ತುಂಡೊಂದನ್ನು ಬ್ರಹ್ಮನ ಮೂರ್ತಿಯೊಂದನ್ನು ಹಿಡಿದು ಶರಣ ಸಮೂಹವನ್ನು ಕೇಳಿದಾಗ.

**ಶರಣ ಸಮೂಹ :** 'ಕಲ್ಲಿನ ತುಂಡು 'ಮತ್ತು 'ಬ್ರಹ್ಮ ' ಎಂದು ಕೂಗಿ ಹೇಳಿತು.

**ಪ್ರಭು :** ಪುನಃ ಕಲ್ಲಿನ ತುಂಡು ಮತ್ತು ವಿಷ್ಣುವಿನ ಮೂರ್ತಿ ಎರಡೂ ತೋರಿಸುತ್ತಾ ಇದೇನು ಎಂದು ಕೇಳಿದಾಗ.

**ಶರಣ ಸಮೂಹ :** ಒಂದು ಕಲ್ಲಿನ ತುಂಡು , ಮತ್ತೊಂದು ವಿಷ್ಣು ಎಂದು ಕೂಗಿ ಹೇಳಿತು.

**ಪ್ರಭು :** 'ಅರಿವು' ಎನ್ನುವ ಸತ್ಯ ದೃಶ್ಯದಲ್ಲಿ 'ಮನ ' ಎಂಬ ಮಿಥ್ಯ ದೃಶ್ಯ ತನ್ನ ಸಾಮ್ರಾಜ್ಯವನ್ನು ಕಟ್ಟಿಕೊಂಡು ಸತ್ಯ ದೃಶ್ಯವನ್ನು ಕಾಣದಂತೆ ಮಾಡಿದೆ ಎಂದು ಪ್ರಭು ಹೇಳಿದಾಗ

**ಶರಣ ಸಮೂಹ :** ಅದು ಹೇಗೆ ಎಂದು ಪುನಃ ಕೇಳಿತು.

**ಪ್ರಭು :** ಪುನಃ ಕಲ್ಲಿನ ತುಂಡೊಂದನ್ನು ಶರಣ ಸಮೂಹಕ್ಕೆ ತೋರಿ ಇದೇನು ಎಂದು ಕೇಳಿದರು.

**ಶರಣ ಸಮೂಹ :** ಆಗಲೇ ಹೇಳಿದೆವಲ್ಲ ಎನ್ನೊಡೆಯಾ ಕಲ್ಲೆಂದು.

ಪುನಃ ಪುನಃ ಕೇಳಿದ್ದನ್ನೇ ಕೇಳುವಿರಿ ಎಂದು ಕೂಗಿ ಹೇಳಿತು ಶರಣ ಸಮೂಹ.

**ಪ್ರಭು :** ಶಿವನ ಮೂರ್ತಿಯನ್ನು ಪುನಃ ತೋರಿ ಇದೇನೆಂದು ಕೇಳಿದರು.

**ಶರಣ ಸಮೂಹ :** ಬೇಸರ ಮಾಡಿಕೊಂಡು 'ಶಿವ ' ಎಂದು ಕೂಗಿ ಹೇಳಿದರು.

**ಪ್ರಭು :** ಬೇಸರ ಮಾಡಿಕೊಳ್ಳಬೇಡಿ ; ಸ್ವಲ್ಪ ಆಲೋಚನೆ ಮಾಡಿ. ಸ್ವಾನುಭಾವದಿಂದ ನೋಡಿ ಹೇಳಿ ಎಂದು ಪುನಃ ಕಲ್ಲಿನ ತುಂಡು ತೋರಿದರು.

**ಶರಣ ಸಮೂಹ** : ಕಲ್ಲನ್ನು ಕಲ್ಲು ಎಂದು ಕೂಡಲೇ ಹೇಳಿತು.

**ಪ್ರಭು** : ಶಿವನ ಮೂರ್ತಿಯನ್ನು ತೋರಿಸುತ್ತಾ, ಪುನಃ ಕಲ್ಲನ್ನು ತೋರಿಸುತ್ತಾ, ಕಲಾವಿದ ಶಿವನ ಮೂರ್ತಿಯನ್ನು ಯಾವ ಪದಾರ್ಥದಲ್ಲಿ ಕೆತ್ತಿದ್ದಾನೆ ಎಂದು ಶರಣ ಸಮೂಹವನ್ನು ಕೇಳಿದರು.

**ಶರಣ ಸಮೂಹ** : ಕಲ್ಲಲ್ಲಿ ಎಂದು ಶರಣ ಸಮೂಹ ಒಕ್ಕೊರಲಿನಿಂದ ಹೇಳಿತು.

**ಪ್ರಭು** : ಕಲ್ಲನ್ನು ತೋರಿದಾಗ ತಾವು 'ಕಲ್ಲು 'ಎಂದು ಕೂಡಲೇ ಹೇಳಿದಿರಿ. ಹಾಗಾದರೆ ಕಲ್ಲಲ್ಲಿ ಕೆತ್ತಿದ ಮೂರ್ತಿ 'ಶಿವ 'ಹೇಗೆ ಆಗುತ್ತದೆ? ಅದು ಕೂಡಾ ಕಲ್ಲಲ್ಲವೆ ? ಎಂದು ಶರಣ ಸಮೂಹವನ್ನು ಕೇಳಿದಾಗ.

**ಶರಣ ಸಮೂಹ** : ಹೌದಲ್ಲವೇ ಎಂದು ಅವುಡುಕಚ್ಚಿ ಮೂಕವಿಸ್ಮಿತರಾಗಿ, ಗೊಣಗಿಕೊಂಡರು.

**ಪ್ರಭು** : ಕಲ್ಲನ್ನು ನೋಡಿ ಕಲ್ಲು ಎಂದು ಹೇಳಿದ ಕಣ್ಣು ಅರಿವಿನ ದೃಶ್ಯಕ್ಕೆ ಬಳಕೆಯಾದ ಕಣ್ಣು. ಕಲ್ಲನ್ನೇ ಕೆತ್ತಿ ಶಿವನ ಮೂರ್ತಿಯನ್ನಾಗಿಸಿದ ಕಲ್ಲನ್ನು 'ಶಿವ ' ಎಂದು ಹೇಳಿದ ಕಣ್ಣು ಮನೋಮಯವಾದ ಮಿಥ್ಯ ದೃಶ್ಯಕ್ಕೆ ಬಳಕೆಯಾಯಿತು.

ಕಣ್ಣಲ್ಲಿರುವ 'ಸತ್ಯ ದೃಶ್ಯ'ವನ್ನು ಮನ ಪಕ್ಕಕ್ಕೆ ತಳ್ಳಿ

'ಮನ ' ತನ್ನ 'ಮಿಥ್ಯ ದೃಶ್ಯ'ದ ಸಾಮ್ರಾಜ್ಯವನ್ನು ಕಣ್ಣಲ್ಲಿಯೇ ಸ್ಥಾಪನೆ ಮಾಡಿತು.

'ಮಿಥ್ಯ ದೃಶ್ಯ' ಲೋಕಾನುಭವವಾದರೆ,

ಸತ್ಯದೃಶ್ಯ 'ಸ್ವಾನುಭಾವ '

ಒಂದೇ ಒಂದು ಕಲ್ಲಲ್ಲಿ ಸಾವಿರಾರು ಮೂರ್ತಿಗಳನ್ನು ಕೆತ್ತಿದರೆ ಆ ಎಲ್ಲಾ ಮೂರ್ತಿಗಳನ್ನು ಆಯಾ ದೇವರುಗಳ ಹೆಸರಿನ ಮೂಲಕ ನೋಡುವ ದೃಶ್ಯವೇ 'ಮಿಥ್ಯ ದೃಶ್ಯ'. ಈ ದೃಶ್ಯ ಕಣ್ಣಿಗೆ ಲೋಕಾನುಭವದಿಂದ ಬಂದಿದೆ.

ಕಲ್ಲಲ್ಲಿ ಸಾವಿರಾರು ಮೂರ್ತಿಗಳನ್ನು ಕೆತ್ತಿದರೂ ಕೂಡಾ ಕಲ್ಲನ್ನು ಕಲ್ಲೆಂದೇ ನೋಡುವ ದೃಶ್ಯ 'ಅರಿವಿನ ದೃಶ್ಯ'; 'ಗುರುದೇವನ ದೃಶ್ಯ ' ; ಇದು 'ಸ್ವಾನುಭಾವದ ದೃಶ್ಯ'.

'ಸ್ವಾನುಭಾವದ ದೃಶ್ಯ' ; ನೋಡಬೇಕಾದುದನ್ನೇ ನೋಡುತ್ತದೆ. ಅರಿವಿನ ದೃಶ್ಯಕ್ಕೆ 'ಸತ್ಯ' ಮಾತ್ರ ಕಾಣುತ್ತದೆ ; 'ಮಿಥ್ಯ' ಕಾಣುವುದೇ ಇಲ್ಲ.

''ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ,

ನೋಡುವುದ ನೋಡುವುಡೆ ಕೂಡಲಿಲ್ಲ ಅಗಲಲಿಲ್ಲ.

ಕೂಡದ ಅಗಲದ ಕೂಟದ ಸುಖವನು ಗುಹೇಶ್ವರಾ

ನಿಮ್ಮ ಶರಣ ಮಾತ್ರ ಬಲ್ಲ''

ಕಲ್ಲಾದರೇನು, ಕೆತ್ತಿದ ಕಲ್ಲಾದರೇನು? ಕಲ್ಲು ಕಲ್ಲೇ. ಕಲ್ಲನ್ನು ಕಲ್ಲೆಂದು ತಿಳಿಯುವ ಶಕ್ತಿ ಅರಿವಿಗೆ ಮಾತ್ರ ಇದೆ. ಕೆತ್ತಿದ ಕಲ್ಲನ್ನು ದೇವರೆಂದು ತಿಳಿಯುವ ಸುಳ್ಳು ಶಕ್ತಿ 'ಮನಕ್ಕೆ' ಮಾತ್ರ ಇದೆ .

ಕಲ್ಲನ್ನು ಹಿಡಿದು ತನಗೆ ಬೇಕಾದ ದೇವರನ್ನು ಕೆತ್ತಿ, ಅದಕ್ಕೆ ಕಲ್ಲಲ್ಲೇ ಆಲಯ, ಗೋಪುರ ನಿರ್ಮಾಣ ಮಾಡಿ, ರಥ ಉತ್ಸವಗಳನ್ನು ಮಾಡುತ್ತಾ, ಪ್ರದಕ್ಷಿಣೆ ಹಾಕಿ, ಉರುಳು ಸೇವೆ, ದೀಡ ನಮಸ್ಕಾರ ಮಾಡುತ್ತಾ, ದೀಪ, ಧೂಪ ಬೆಳಗಿ ನೈವೇದ್ಯ ಅರ್ಪಣೆ ಮಾಡುವ ಹುಚ್ಚು ಕೆಲಸದಲ್ಲಿ ಮನ ದೇಹವನ್ನು ತೊಡಗಿಸುತ್ತದೆ.

ದೇಹದಲ್ಲಿಯೇ ಇದ್ದ 'ಸತ್ಯ ' ಮನದ ಹುಚ್ಚು ಕೆಲಸವನ್ನು ನೋಡಿ ಗಹಗಹಿಸಿ ನಗುತ್ತದೆ. ಅರಿವಿನ ಈ ನಗು ಕೇಳಿದ ಮನವೇ ಜಾಣ ಮನ. ಘನ ಮನ!

**ಶರಣ** : ಮನದ ಈ ಹುಚ್ಚುತನ ನಾಶ ಮಾಡಿಕೊಳ್ಳುವ ಬಗೆ ಹೇಗೆ ಎಂಬುದನ್ನು ಹೇಳಿ ಪ್ರಭು.

**ಪ್ರಭು** : ಕಲ್ಲನ್ನು ಕಲ್ಲೆಂದು ನೋಡಿದರೆ ಕಲ್ಲನ್ನು ಪೂಜಿಸಲಿಲ್ಲ, ಆರಾಧಿಸಲಿಲ್ಲ. ಆಲಯ ಕಟ್ಟಲಿಲ್ಲ ; ಗೋಪುರ ಕಟ್ಟಿ ಕಳಶಾರೋಹಣ ಮಾಡಲಿಲ್ಲ. ಎಡೆ ಮಾಡಲಿಲ್ಲ ; ಛತ್ರ ಚಾಮರ ಬೀಸಲಿಲ್ಲ. ನಂದಿಕೋಲು , ಪಲ್ಲಕ್ಕಿ ಸೇವೆಯ ಗೊಡವೆಗೆ ಹೋಗಲಿಲ್ಲ. ಪುಣ್ಯ ಕ್ಷೇತ್ರಗಳಿಗೆ ಪಯಣಿಸಲಿಲ್ಲ. ಕಲ್ಲನ್ನು ಕಲ್ಲೆಂದು ತಿಳಿದ ಸುಖ ಪರಮ ಸುಖ.

ದೇವರೆಂದು ಕೂಡಲಿಲ್ಲ, ಅನ್ಯದೇವರೆಂದು ಕಲ್ಲಲ್ಲಿ ಹೊಡೆದು ಅಗಲಲಿಲ್ಲ. ಕೂಡದ ಅಗಲದ ಕೂಟದ ಸುಖ ; ಅರಿವಿನ ಸುಖ.

ಅರಿವು ಎನ್ನುವ ಗುರುದೇವನನ್ನು ಮನ ಅರಿತರಿತು, ಆ ಅರಿವೇ ಆದ ಮನವೇ ಘನ ಮನ. ಅರಿವೆಂಬ ಗುರುದೇವನಿಗೆ ಶರಣು ಹೋಗಿ ಶರಣಾಗತನಾದ ಮನವೇ ಶರಣ ! ಈತ ಮಾತ್ರ ಅರಿವಿನ ಸುಖವನ್ನು ಬಲ್ಲಾತ. ನೋಡುವ ಸತ್ಯವನ್ನೇ ನೋಡುವ ಅರಿವುಳ್ಳಾತ. ಅಜ್ಞಾನಕ್ಕೆ ಎಂದೆಂದೂ ಬಲಿಯಾಗದ ಸ್ವಾನುಭಾವಿ ಎಂದು ಪ್ರಭುದೇವರು ಸಕಲ ಶರಣರಿಗೂ ಶರಣೆನ್ನುತ್ತಾ ಸಭೆಗೆ ಮಂಗಲ ಹಾಡಿದರು.

ಶರಣರು ಮಾತಾಡದೆ ತೂರ್ಯಾವಸ್ಥೆಯಲ್ಲಿ ತೇಲಾಡುತ್ತಾ ಪರಮಾನಂದದಿಂದ ತಮ್ಮ ತಮ್ಮ ಮನೆಗೆ ತೆರಳಿದರು.

## ಅರಿವೇಗುರು - ಮನವೇ ಶಿಷ್ಯ - ಕಾಯವೇ ಕೈಲಾಸ

ಇನ್ನೂ ಅರುಣೋದಯವಾಗಿಲ್ಲ . ಸತ್ಸಂಗಕ್ಕಾಗಿ ಶರಣರು ಮಹಾ ಮನೆಯತ್ತ ಧಾವಿಸುತ್ತಿದ್ದಾರೆ . ಬಸವಣ್ಣ, ಚೆನ್ನಬಸವಣ್ಣ ಬಂದು ಶರಣ ಸಮೂಹಕ್ಕೆ ಶರಣು ಶರಣೆಂದು ವೇದಿಕೆಯ ಮೇಲೆ ಕುಳಿತರು. ಅಲ್ಲಮ ಪ್ರಭುಗಳು ಕೂಡಾ ವೇದಿಕೆಗೆ ಬಂದು ಶರಣ ಸಮೂಹಕ್ಕೆ ತಲೆಬಾಗಿ ಶರಣು ಶರಣಾರ್ಥಿ ಎಂದು ಹೇಳುತ್ತಾ ಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಂಡರು .

**ಪ್ರಭು :** ನಿನ್ನೆಯ ಬೆಳಗಿನ ಸತ್ಸಂಗದಲ್ಲಿ ಮನ ಹೇಗೆ ಅರಿವಿನ ಸಾಮ್ರಾಜ್ಯವನ್ನು ಆಕ್ರಮಿಸಿಕೊಂಡಿದೆ ಎಂಬ ರಹಸ್ಯವನ್ನು ಬಸವಣ್ಣ, ಚೆನ್ನಬಸವಣ್ಣನವರು ಎಳೆ ಎಳೆಯಾಗಿ ಬಿಡಿಸಿ ಬಿಡಿಸಿ ತಮಗೆಲ್ಲಾ ಹೇಳಿದರು.

'ಅರಿವು ಗುರುವಾಗಿ ದೇಹದಲ್ಲಿ ಹೇಗೆ ಕೆಲಸ ಮಾಡುತ್ತಾನೆ ' .

'ಮನ ' ಗುರುದೇವನ ಕೆಲಸವನ್ನು ಅಡ್ಡಿಪಡಿಸಿ ಆತನ ದೇಹವನ್ನು ' ಮನ ' ಹೇಗೆ ಕಬಳಿಸಿದ್ದಾನೆ ಎನ್ನುವುದನ್ನು ತಿಳಿದುಕೊಂಡೆವು. ಈ ಸಭೆಯಲ್ಲಿ ಆ ವಿಷಯವನ್ನೇ ಮುಂದುವರಿಸುವಿರಾ ಎಂದು ಪ್ರಭುದೇವರು ಬಸವಣ್ಣನನ್ನು ಬಿನ್ನವಿಸಿಕೊಂಡರು.

**ಬಸವಣ್ಣ :** ಅಪ್ಪಣೆ ಪ್ರಭು ಎಂದು ಕೈ ಮುಗಿದು ಮುಂದುವರೆಸಿದರು.

ಅರಿವು ಎನ್ನುವ ಗುರುದೇವ ಜಗದಗಲ ಮುಗಿಲಗಲ ವ್ಯಾಪಿಸಿಕೊಂಡಿದ್ದಾನೆ.

ಆತನ ಶ್ರೀ ಚರಣ ಪಾತಾಳದಿಂದಲೂ ಅತ್ತತ್ತ ವ್ಯಾಪಿಸಿಕೊಂಡಿವೆ.

ಆತನ ಶ್ರೀ ಮುಕುಟ ಬ್ರಹ್ಮಾಂಡದಿಂದಲೂ ಅತ್ತತ್ತ ವ್ಯಾಪಿಸಿಕೊಂಡಿದೆ .

ಶ್ರೀ ಗುರುದೇವ ಅಗಮ್ಯ, ಅಪ್ರಮಾಣ, ಅಪ್ರತಿಮ ಲಿಂಗವಾಗಿ ಸರ್ವಾಂಗದ ಕಣಕಣದಲ್ಲಿಯೂ ಸಂಗಮವಾಗಿದ್ದಾನೆ.

**ಶರಣ :** ''ಬಸವಣ್ಣ ತಾವು''

ತಂದೆ ನೀನು ತಾಯಿ ನೀನು,

ಬಂಧು ನೀನು ಬಳಗ ನೀನು

ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ''

ಎಂದು ಹಾಡಿದ್ದು ಈ ಗುರುದೇವನನ್ನು ಕುರಿತು ಅಲ್ಲವೆ?

**ಬಸವಣ್ಣ :** ಹೌದು ಶರಣರೆ, ತಾವು ಸರಿಯಾಗಿಯೇ ಊಹಿಸಿರುವಿರಿ.

ಗುರುದೇವ ಇಡೀ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿ, ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ಪರಮಾನಂದದಿಂದ ನೋಡಲು ಅಂಗವನ್ನು ಸೃಷ್ಟಿ ಮಾಡಿ. ಆ 'ಸರ್ವಾಂಗ 'ದಲ್ಲೂ ತಾನು 'ಲಿಂಗವಾಗಿ'ಸಂಗಮವಾದ.

**ಶರಣ :** ಹಾಗಾದರೆ ಅಂಗದ ಮೇಲೆ ಧರಿಸಿದ ಲಿಂಗ ಲಿಂಗವಲ್ಲವೇ ಬಸವಣ್ಣ?

**ಬಸವಣ್ಣ :** ಯಾವುದೇ ಜಡವಸ್ತು ತನ್ನನ್ನು ತಿಳಿಯಲು ಸಾಧ್ಯವೇ?

ತಿಳಿದು ಅದು ನನಗೆ ಏನಾದರೂ ಹೇಳಲು ಸಾಧ್ಯವೆ ಎಂಬುದನ್ನು ತಾವೇ 'ಸ್ವಾನುಭಾವ' ದಿಂದ ತಿಳಿದು ನೋಡಿ.

**ಪ್ರಭು :** '' ತನ್ನ ಕಾಲು ತೊಳೆದ ಬಳಿಕ ಲಿಂಗಕ್ಕೆ ಮಜ್ಜನವ ಮಾಡುವರು ''. ಅಂದಮೇಲೆ ''ತಾನು ಲಿಂಗವೋ, ಲಿಂಗ ಲಿಂಗವೋ ಬಲ್ಲಡೆ ನೀವು ಹೇಳಿರೆ ಗುಹೇಶ್ವರ ಲಿಂಗವನು'' .

ಅಂಗದ ಮೇಲೆ ನೀರು ಸುರಿದುಕೊಂಡರೆ ಅಂಗ ಆನಂದದಿಂದ ಪುಳಕಿತಗೊಳ್ಳುತ್ತದೆ. ಏಕೆಂದರೆ ಸರ್ವಾಂಗದಲ್ಲಿ ಅರಿವಿನ ಲಿಂಗಯ್ಯನೇ ಇದ್ದಾನೆ. ನಂತರ ಅಂಗದ ಮೇಲೆ ಕಟ್ಟಿಕೊಂಡ 'ಲಿಂಗ ' ಕ್ಕೆ ಮಜ್ಜನ ಮಾಡಿದರೆ ಅದು ನೆನೆಯುವುದಿಲ್ಲ ; ಬಿಟ್ಟರೆ ಬಾಡುವುದಿಲ್ಲ.

'ಅಂಗ' ಕ್ಕೆ ಜನ್ಮ ಕೊಟ್ಟು, ಅಂಗದಲ್ಲಿಯೇ ಇದ್ದು, ಅಂಗದ ಕೈ ಹಿಡಿದು ಮುನ್ನಡೆಸುವ 'ಲಿಂಗ ' ಲಿಂಗವೋ ? ಏನು ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಲಿಂಗವೋ?

**ಶರಣ :** ಅಂಗದಲ್ಲಿದ್ದು , ಅಂಗಕ್ಕೆ ದ್ರೋಹ ಬಗೆಯುವ ಸದಾ ಅಂಗದ ದಾರಿತಪ್ಪಿಸುವ 'ಮನ ' ಅಂಗದಲ್ಲಿ ಹೇಗೆ ಸೃಷ್ಟಿಯಾಯಿತು ಪ್ರಭು?

**ಪ್ರಭು :** ಮುಗುಳ್ನಗುತ್ತಾ ಬಸವಣ್ಣ, ತಾವೇ ವಿವರಿಸಿ ಹೇಳಿ.

**ಬಸವಣ್ಣ :** ಅಪ್ಪಣೆ ಪ್ರಭು.

'ಅರಿವು ' ಎನ್ನುವ ಗುರುದೇವನೆ 'ಲಿಂಗಯ್ಯ 'ನಾಗಿ ಅಂಗಕ್ಕೆ ಜನ್ಮ ಕೊಟ್ಟ.

ತನ್ನನ್ನು ತಿಳಿಯಲು ಅಂಗದಲ್ಲಿಯೇ ಮನಕ್ಕೆ ಜನ್ಮ ಕೊಟ್ಟ.

ಮನ ಲಿಂಗಯ್ಯನಿಗೆ ಶರಣು ಹೋಗುವುದನ್ನು ಬಿಟ್ಟು ಅಂಗದ ಸಂಗ ಮಾಡಿತು.

ಅಂಗದ ಮೂಲಕ ಸುಖ ದುಃಖಗಳನ್ನು ಅನುಭವಿಸುತ್ತಾ. ಅಂಗದೊಂದಿಗೆ ವಿಲಿವಿಲಿ ಒದ್ದಾಡುತ್ತಾ ತನ್ನ ಸುಖಕ್ಕಾಗಿ ಲಿಂಗಯ್ಯನ ಅಂಗವನ್ನು ಮನ ಬಳಸಿಕೊಳ್ಳುತ್ತಲಿದೆ. ಸುಖ ಹುಡುಕುತ್ತಾ ಹೋಗುತ್ತದೆ ; ಸಿಕ್ಕದಿದ್ದರೆ ಅಂಗವನ್ನು ದುಃಖಕ್ಕೆ ಈಡು ಮಾಡುತ್ತದೆ. ಇದೇ ಮನದ ಕೆಲಸ.

**ಶರಣ :** ಅಂಗದ ಸುಖ ದುಃಖಗಳಿಗೆ ಮನ ಕಾರಣವೇ ಬಸವಣ್ಣ ?

**ಬಸವಣ್ಣ :** ಹೌದು ಶರಣರೆ, ಸರಿಯಾಗಿ ಹೇಳಿದಿರಿ. ಅರಿವು ಎನ್ನುವ ಗುರುದೇವ ಸರ್ವಾಂಗವನ್ನು ಲಿಂಗಾಂಗವನ್ನಾಗಿ ಮಾಡಿದ್ದಾನೆ. ಆತ ಅಂಗದಲ್ಲಿಯೇ ಇದ್ದು ಅವ್ಯಕ್ತ ಅರಿವಿನ ಅಂಗವಾಗಿ ಅಂಗಕ್ಕೂ ಮನಕ್ಕೂ ಸದಾ ಪಾಠ ಮಾಡುತ್ತಿದ್ದಾನೆ. ಗುರುದೇವ ಮಾಡುವ ಪಾಠವನ್ನು ತನು ಮತ್ತು ಮನ ಕೇಳುವುದೇ ಇಲ್ಲ. ಹೀಗಾಗಿ ತನುವಿಗೆ ಸದಾ ದುಃಖ.

**ಶರಣ :** ಅದು ಹೇಗೆ ಬಸವಣ್ಣ ? ವಿವರಿಸಿ ಹೇಳುವಿರಾ.

**ಬಸವಣ್ಣ :** ಆಗಲಿ ಶರಣರೆ ,

ಮನ ತನುವಿನೊಂದಿಗೆ ಸುಖಿಸುವುದಕ್ಕಾಗಿ

ತನುವಿನಲ್ಲಿ ಕಾಮ , ಕ್ರೋಧ , ಲೋಭ , ಮೋಹ , ಮದ , ಮತ್ಸರಗಳನ್ನು

ಸೃಷ್ಟಿ ಮಾಡಿದೆ. ಸಪ್ತ ವ್ಯಸನಗಳನ್ನು, ಅಷ್ಟ ಮದಗಳನ್ನು ಸೃಷ್ಟಿ ಮಾಡಿದೆ .

ಭಾವ-ದುರ್ಭಾವಗಳನ್ನು ಸೃಷ್ಟಿ ಮಾಡಿದೆ . ಇವುಗಳ ಮೂಲಕ ಮನ ಸುಖ ಮತ್ತು ದುಃಖದ ಸುಖವನ್ನು ಸದಾ ತನು ಅನುಭವಿಸುತ್ತದೆ.

ತನು ಮನಕ್ಕೆ ಉಪಕರಣವಾಗಿ ಮಾರ್ಪಟ್ಟಿದೆ .

**ಶರಣ :** ತನುವಿಗೆ ಆಗುವ ದುಃಖ ಕೂಡಾ ಮನಕ್ಕೆ ಸುಖವಾಗುತ್ತದೆಯೇ ಹೇಗೆ?

**ಬಸವಣ್ಣ :** ಹೌದು ಶರಣರೆ .

ವಿಷಯ ಸುಖಕ್ಕಾಗಿ ತನುವನ್ನು ಮನ ಹಾದರ ಮಾಡಲು ಪ್ರೇರೇಪಿಸುತ್ತದೆ. ಹಾದರ ಮಾಡುವಾಗ ಸಿಕ್ಕಿ ಹಾಕಿಕೊಂಡರೆ ತನುವಿನ ಮರ್ಯಾದೆ ಹಾಳಾಯಿತು ; ಇನ್ನು ನೀನು ಬದುಕಿ ಲಾಭವಿಲ್ಲ ಎಂದು ಮನವೇ ತನುವನ್ನು ಆತ್ಮಹತ್ಯೆಗೆ ಕರೆದುಕೊಂಡು ಹೋಗುತ್ತದೆ.

ತನುವನ್ನು ಹಾದರ ಮಾಡಲು ಹಚ್ಚಿದಾಗಲೂ ಮನಕ್ಕೆ ಸುಖ. ಪುನಃ ತನುವನ್ನು ಸಾಯಲು ಕರೆದುಕೊಂಡು ಹೋಗುವಾಗಲೂ ಮನಕ್ಕೆ ಸುಖ.

ತನುವಿನಲ್ಲಿಯೇ ತನ್ಮಯವಾದ ಗುರುದೇವ ತನು ಮತ್ತು ಮನದ ತಪ್ಪನ್ನು ಮನ್ನಿಸಿ ಮೈದಡವಿ ಹೇಳುವ ಅರಿವಿನ ಮಾತು ತನು ಮತ್ತು ಮನಕ್ಕೆ ಅರ್ಥವಾಗುವುದೇ ಇಲ್ಲ.

ತನು ಮತ್ತು ಮನದ ಅಜ್ಞಾನ ತನುವಿನಲ್ಲಿಯೇ ನಡೆದಿದೆ ; ತನು ಮತ್ತು ಮನಕ್ಕೆ ಮಾಡುವ ಗುರುದೇವನ ( ಉಪದೇಶ )ಅರಿವಿನ ಪಾಠ ಕೂಡಾ ತನುವಿನಲ್ಲಿಯೇ ನಡೆದಿದೆ. ಈ ತ್ರಿಗಲ ಬಂದಿಯನ್ನು ತನಗೆ ತಾನೇ ತಿಳಿದುಕೊಂಡ ತನುವೇ ಧನ್ಯ.

**ಪ್ರಭು :** ಸಾಕು . ಸಭೆಯನ್ನು ಇಲ್ಲಿಗೆ ಮುಕ್ತಾಯ ಮಾಡೋಣ . ಸರ್ವರಿಗೂ ಶರಣು ಶರಣಾರ್ಥಿ. ಸಕಲ ಶರಣರು ಮನೆಗೆ ತೆರಳುವರು.

## ‘ಅರಿವು’ ಎನ್ನುವ ಗುರುದೇವನ ಹೊರತಾಗಿ ಗುರು ಎನ್ನುವವನು ಯಾರೂ ಇಲ್ಲ

ಪ್ರಾತಃಕಾಲದ ಸಮಯ. ಕಲ್ಯಾಣದ ಜನ ಪ್ರಾತಃಕಾಲದ ತಮ್ಮ ತಮ್ಮ ಕೆಲಸದಲ್ಲಿ ತೊಡಗಿದೆ. ಶರಣರು ಅವಸರವಸರವಾಗಿ ಮಹಾಮನೆಯತ್ತ ನಡೆದಿದ್ದಾರೆ. ಲೋಕದ ಚಿಂತೆ ಶರಣರಿಗಿಲ್ಲ. ಶರಣರಿಗಿರುವ ಚಿಂತೆ ಲೋಕಕ್ಕಿಲ್ಲ.

ಬಸವಣ್ಣ, ಚೆನ್ನಬಸವಣ್ಣ ವೇದಿಕೆಯ ಮೇಲೆ ಕುಳಿತಿದ್ದಾರೆ. ಅಲ್ಲಮಪ್ರಭುದೇವರು ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದಾರೆ. ಸಕಲ ಶರಣರನ್ನೂ ಪ್ರಭುದೇವರು ಸ್ವಾಗತಿಸುತ್ತಾ , ಶರಣು ಶರಣಾರ್ಥಿ ಸಕಲ ಶರಣರಿಗೆ ಎನ್ನುತ್ತಾ ಕೈ ಮುಗಿದು.

**ಅಲ್ಲಮಪ್ರಭು :** ನಿನ್ನೆ ಸಭೆಯಲ್ಲಿ , ಮನ ತನುವಿನೊಂದಿಗೆ ಸದಾ ಸುಖಿಸುತ್ತಾ, ತನುವನ್ನು ದುಃಖಕ್ಕೆ ತಳ್ಳುವ ಬಗೆಯನ್ನು ಬಸವಣ್ಣನವರು ತಮಗೆ ವಿವರಿಸಿ ಹೇಳಿದರು. ಇಂದು ಕೂಡಾ ಆ ವಿಷಯವನ್ನೇ ಮುಂದುವರಿಸಲು ಬಸವಣ್ಣನವರಿಗೆ ಕೈ ಮುಗಿದು ಸೂಚಿಸಿದರು.

**ಬಸವಣ್ಣ :** ಪ್ರಭುದೇವರಿಗೆ, ಚೆನ್ನಬಸವಣ್ಣನವರಿಗೆ, ಸಭೆಯಲ್ಲಿ ಸೇರಿದ ಸಕಲ ಶರಣರಿಗೆ ಶರಣು ಶರಣಾರ್ಥಿ ಎಂದು ಕೈ ಮುಗಿದರು.

‘ ಮನ ’ ಎಂದರೆ ಅದು ಕೆಟ್ಟದ್ದು ಎಂದು ತಿಳಿದುಕೊಳ್ಳುವ ಅವಶ್ಯಕತೆಯೂ ಇಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವು ಎನ್ನುವ ಗುರುದೇವನು ತನ್ನನ್ನು ತಾನು ತಿಳಿದು ಘನಮನವಾಗಲು ಮನವನ್ನು ಸೃಷ್ಟಿ ಮಾಡಿದ . ಹಾಗೆಯೇ ಮನಕ್ಕೆ ಸದಾ ತಿಳಿಹೇಳುವ ಕಾಯಕದಲ್ಲಿ ಅರಿವೆಂಬ ಗುರುದೇವ ನಿರತನಾದ . ಆದರೂ ಮನ ಗುರುದೇವನನ್ನು ತಿಳಿಯದೇ, ಗುರುದೇವನಿಗೆ ಅರಿವೆಂಬ ಗುರುದೇವನೆಂದು ಕರೆದು , ಆ ಗುರುದೇವನಿಗೆ ಶರಣು ಹೋಗದೆ, ತನ್ನಂತೆಯೇ ಇರುವ ತನುವನ್ನೆ ಗುರುದೇವನೆಂದು ತಿಳಿದು ಆ ಗುರುದೇವನಿಗೆ ಶರಣು ಹೋಯಿತು.

**ಶರಣ :** ತನ್ನಂತೆಯೇ ಇರುವ ತನುವನ್ನು ಗುರುದೇವನೆಂದು ತಿಳಿದು ಆ ತನುವಿಗೆ ಶರಣೆನ್ನುವುದು ತಪ್ಪೆ ಬಸವಣ್ಣ?

**ಬಸವಣ್ಣ :** ಪ್ರತಿ ತನುವಿನಲ್ಲಿಯೂ ಗುರುದೇವನಿದ್ದಾನೆ. ಗುರುದೇವನಿಲ್ಲದ ತನುವೇ ಇಲ್ಲ ಈ ಭೂಮಿಯ ಮೇಲೆ. ಅಂದ ಮೇಲೆ ಅಂಗದಲ್ಲಿಯೇ ಸಂಗಮವಾದ ಗುರು ದೇವನಿಗೆ ಅಂಗವುಳ್ಳ ಗುರುದೇವ ದೀಕ್ಷೆ ಕೊಡಲು ಬರುವುದಿಲ್ಲ. ಗುರು ದೇವನನ್ನು ಗುರುದೇವ ಶಿಷ್ಯನಾಗಿಸಿಕೊಳ್ಳಲು ಬರುವುದಿಲ್ಲ. ಇದು ಮನದ ಕೆಲಸ. ಮನ ತನುವಿಗೆ ರುದ್ರಾಕ್ಷಿ ಹಾಕಿ, ಕಾವಿ ಹೊದಿಸಿ, ಅಂಗದ ಮೇಲೆ ಲಿಂಗ ಧರಿಸಿ ಗುರುವಿನ ವೇಷ ಹಾಕಿದರೆ ತನು ಗುರು ತನು ಆಗುವುದಿಲ್ಲ.

**ಶರಣ** : ಹಾಗಾದರೆ ಏನು ಮಾಡಬೇಕು ಬಸವಣ್ಣ?

**ಬಸವಣ್ಣ** : ತನುವಿನಲ್ಲಿಯೆ ತನ್ಮಯವಾದ 'ಅರಿವು' ಎನ್ನುವ 'ಗುರುದೇವನ' ಹೊರತಾಗಿ 'ಗುರು ' ಎನ್ನುವವನು ಯಾರೂ ಇಲ್ಲ ಈ ಬ್ರಹ್ಮಾಂಡದಲ್ಲಿ.

ಗುರುರ್‌ಬ್ರಹ್ಮ, ಗುರುರ್ ವಿಷ್ಣು , ಗುರುದೇವೊ ಮಹೇಶ್ವರಃ

ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ

ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಸಾಕ್ಷಾತ್ಕಾರವಾದ ಮೇಲೆ, ಆ ಗುರುದೇವನ ದರುಶನ ಮನಕ್ಕೆ ಆದಮೇಲೆ, ಮನದ ಭ್ರಮೆ ತೊಲಗಿ ಆ ಮನವೇ ಬ್ರಹ್ಮನಾಗುತ್ತದೆ. ತನುವಿನ ಅಜ್ಞಾನ ನಿರ್ನಾಮವಾಗಿ ಆ ತನುವೇ ವಿಷ್ಣುವಾಗುತ್ತದೆ. ತನುವಿನಲ್ಲಿ ತನ್ಮಯವಾದ ಅರಿವೇ ಮಹೇಶ್ವರನಾಗಿ ಮನಕ್ಕೆ ದರುಶನ ನೀಡುತ್ತಾನೆ. ಹೀಗಾಗಿ ತನು ಮನ ಅರಿವು ತ್ರಿಕೂಟ ಸಂಗಮವಾಗುತ್ತದೆ.

**ಶರಣ** : ಬ್ರಹ್ಮಲೋಕ, ವೈಕುಂಠ, ಕೈಲಾಸ ಎಂದು ಕರೆದಿದ್ದಾರಲ್ಲ ಇಂತಹ ಲೋಕಗಳು ಇಲ್ಲವೇ ಬಸವಣ್ಣ?

**ಬಸವಣ್ಣ** : ನಮ್ಮ ಪುರಾತನರು ಬಹಳ ಜಾಣರು. ಜಾಣರ ಜಾಣರು. ಅರಿವು ಇದ್ದ ಕಾಯವನ್ನೇ ಕೈಲಾಸವನ್ನಾಗಿಸಿ ಮಹೇಶ್ವರನ ಉಪಾಸನೆಯ ಮೂಲಕ ಸತ್ಯದರ್ಶನ ಮಾಡಿಕೊಂಡರು ಕೆಲಬರು.

ಬ್ರಹ್ಮನಿದ್ದ ಕಾಯವನ್ನೇ ಬ್ರಹ್ಮಲೋಕವನ್ನಾಗಿಸಿ ಬ್ರಹ್ಮೋಪಾಸನೆಯಲ್ಲಿ ತೊಡಗಿ ಅಹಂ ಬ್ರಹ್ಮಾಸ್ಮಿ ಎಂದರು ಕೆಲಬರು.

ವಿಷ್ಣುವಿದ್ದ ಕಾಯವನ್ನೇ ವೈಕುಂಠವನ್ನಾಗಿಸಿ ವಿಷ್ಣುವಿನ ಸತ್ಯದರ್ಶನದ ಮೂಲಕ ವೈಷ್ಣವೋಪಾಸನೆಯಲ್ಲಿ ತೊಡಗಿದರು ಕೆಲಬರು.

ಬರುಬರುತ್ತಾ ಮನದ ಸ್ಥಿಮಿತ ತಪ್ಪಿ ಆಯಾ ಉಪಾಸನೆಗಳೇ ಶ್ರೇಷ್ಠವಾಗಿ ಗೋಚರದ ಆಚರಣೆಯೇ ಮುಖ್ಯವಾಯಿತು ಮನಕ್ಕೆ.

ಬ್ರಹ್ಮಲೋಕ, ವೈಕುಂಠ ಲೋಕ , ಕೈಲಾಸ ಎಂಬ ಮೂರು ಲೋಕಗಳನ್ನು ಕಟ್ಟಿ ಆಯಾ ಲೋಕದ ಆಯಾ ಒಡೆಯರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ , ಮನ ತನ್ನದೇ ಆದ ರಕ್ಕಸ ಲೋಕವನ್ನು ಕಾಯದಲ್ಲಿಯೇ ಕಟ್ಟಿಕೊಂಡು ಕಾಯವನ್ನು ಆಳತೊಡಗಿತು. ಅರಿವೇ ಇದ್ದ ಗುರುದೇವನ ಕಾಯಕ್ಕೆ ರಕ್ಕಸನ ವೇಷ ಹಾಕಿತು.

**ಶರಣ** : ಹಾಗಾದರೆ ಆಯಾ ಉಪಾಸನೆಗಳ ಮೂಲಕ ತೋರಿ ಬರುವ ಕಾಯಗಳೆಲ್ಲ ವೇಷದ ಕಾಯಗಳೆ?

**ಬಸವಣ್ಣ** : ಕಾಯಕ್ಕೆ ಯಾವ ವೇಷದ ಅವಶ್ಯಕತೆಯೂ ಇಲ್ಲ. ಏಕೆಂದರೆ ಸ್ವತಃ ಅರಿವು ಎನ್ನುವ ಗುರುದೇವನು ಕಾಯದ ವೇಷ ಧರಿಸಿದ್ದಾನೆ. ಕಾಯದಲ್ಲಿದ್ದು ಕಾಯವೇ ತಾನಾಗಿದ್ದಾನೆ.

ಹೀಗಿದ್ದೂ ಮನ , ತನುವಿಗೆ ಕಾವಿ , ರುದ್ರಾಕ್ಷಿ , ಲಿಂಗ ಧರಿಸಿ ಗುರುವಿದ್ದ ತನುವಿಗೆ ಗುರುವಿನ ವೇಷ ಹಾಕಿ ತಾನು ರಕ್ಕಸನಾಗಿದೆ.

ತನುವಿಗೆ ವೈಷ್ಣವ ವೇಷ ಹಾಕಿದ ಮನ ರಕ್ಕಸನಾಗಿದೆ. ತನುವನ್ನು ಬ್ರಹ್ಮ ಪೀಠದ ಸಿಂಹಾಸನದ ಮೇಲೆ ಕೂಡಿಸಿ ತಾನು ತನುವಿನಲ್ಲಿ ರಕ್ಕಸನಾಗಿ ಮೆರೆಯುತ್ತದೆ. ತನುವೇ ಬ್ರಹ್ಮನಿದ್ದ ಪೀಠ ಎನ್ನುವುದನ್ನೇ ಮನ ಮರೆತು ಹೋಗಿದೆ.

(**ಶರಣ ಸಮೂಹ** : ತಮ್ಮ ತಮ್ಮಲ್ಲಿಯೇ ಗುಸುಗುಸು ಮಾತನಾಡಿಕೊಳ್ಳುತ್ತಾ)

**ಶರಣ** : ಎದ್ದು ನಿಂತು , ತನುವಿನಲ್ಲಿ ಎಂತಹ ಅದ್ಭುತವಾದ ರಹಸ್ಯವು ಅಡಗಿದೆಯಲ್ಲ ಬಸವಣ್ಣ! ತಮ್ಮಿಂದ ತನುವಿನಲ್ಲಿರುವ ಈ ರಹಸ್ಯವನ್ನು ತಿಳಿದು ನಾವು ಧನ್ಯರಾದೆವು ಬಸವಣ್ಣ. ತಮಗೆ ಶರಣು ಶರಣಾರ್ಥಿ.

ತನುವಿನಲ್ಲಿ ತನ್ಮಯವಾದ ಆ ಶಿವನೇ ಬಸವಣ್ಣನಾಗಿ ನಮ್ಮೆಲ್ಲರನ್ನು ಉದ್ಧರಿಸಲು ಬಂದಂತಿದೆ ಪ್ರಭು ಎಂದು ನಮಸ್ಕರಿಸಿದನು.

**ಪ್ರಭು** : ಸರಿಯಾದ ಮಾತನ್ನೇ ಆಡಿದಿರಿ ಶರಣರೆ. ಶಿವ ಬೇರಲ್ಲ ಬಸವಣ್ಣ ಬೇರಲ್ಲ. ಶಿವ ಬೇರಲ್ಲ ಚೆನ್ನಬಸವಣ್ಣ ಬೇರಲ್ಲ. ಹಾಗೆಯೇ ತಾವೆಲ್ಲರೂ ಕೂಡಾ ಸಾಕ್ಷಾತ್ ಶಿವ ಶರಣರೇ ಆಗಿರುವಿರಿ.

ತಮ್ಮನ್ನು ತಾವು ತಿಳಿಯುವ ಕುತೂಹಲ ಸಕಲ ಶರಣರ ಹೃದಯದಲ್ಲಿ ಜನ್ಮ ತಳೆದದ್ದು ನಮ್ಮೆಲ್ಲರ ಪುಣ್ಯ. ತಮ್ಮೆಲ್ಲರಿಗೂ ಶರಣು ಶರಣಾರ್ಥಿ ಎಂದು ಪ್ರಭುದೇವರು ಸಕಲ ಶರಣರಿಗೆ ಕೈ ಮುಗಿದರು.

ಸಕಲ ಶರಣರು ಎದ್ದು ನಿಂತು ಪ್ರಭುದೇವರಿಗೆ ಬಸವಣ್ಣ , ಚೆನ್ನಬಸವಣ್ಣರಿಗೆ ಕೈ ಮುಗಿದು ಮನೆಗೆ ಮರಳಿದರು.

## ಅರಿವು ಎಂಬ ಗುರುದೇವನಿಗೆ ಶರಣುಹೋದ ಮನವೇ ಭಕ್ತ

ಇನ್ನೂ ಬೆಳಗಾಗಿಲ್ಲ , ಮುಖ ಮಜ್ಜನ ಮಾಡಿ ಶರಣರು ಮಹಾಮನೆಗೆ ನಡೆದರು. ಮುಖದ ಮೇಲೆ ಉಲ್ಲಾಸದ ನಗೆ , ಕೆಲಸ ಮಾಡಿದ ದಣಿವು ಎಳ್ಳಷ್ಟೂ ಇಲ್ಲ, ಸತ್ಸಂಗದ ಪ್ರಭಾವವೇ ಹಾಗೆ.

ಶರಣರು ತಮ ತಮಗೆ ಶರಣೆನ್ನುತ್ತಾ, ವೇದಿಕೆಯ ಮೇಲೆ ಕುಳಿತ ಚೆನ್ನಬಸವಣ್ಣ, ಬಸವಣ್ಣ ಹಾಗೂ ಅಧ್ಯಕ್ಷತೆಯನ್ನು ವಹಿಸಿದ ಪ್ರಭುಗಳಿಗೆ ಶರಣು ಶರಣಾರ್ಥಿ ಎಂದು ಕೈ ಮುಗಿದು ಕುಳಿತರು.

**ಶರಣ :** ನಿನ್ನೆಯ ಸತ್ಸಂಗದಲ್ಲಿ ಅದ್ಭುತವಾದ ಸೂತ್ರ ಹೇಳಿದಿರಿ ಬಸವಣ್ಣಾ. ಕೇಳಿದ ನಾವು ಪಾವನರಾದೆವು. ಗುರುದೇವನಿಗೆ ವೇಷ ಸಲ್ಲದು. ಆತನಿಗೆ ಯಾವ ವೇಷದ ಅವಶ್ಯಕತೆಯೂ ಇಲ್ಲ. ಏಕೆಂದರೆ ಆತ ಸ್ವತಃ ಕಾಯದ ವೇಷಧಾರಿ ! ಸಕಲ ಕಾಯಗಳಲ್ಲಿಯೂ ಗುರುದೇವನೆ ಇರುವುದರಿಂದ ಪ್ರತಿ ಕಾಯವೂ ಗುರುಸ್ವರೂಪ ! ವ್ಹಾ ವ್ಹಾ.

**ಬಸವಣ್ಣ :** ಹೌದು ಶರಣರೆ.

ಕಾಯದಲ್ಲಿ ಸಂಗಮವಾದ ಗುರುದೇವನ ಇರುವಿಕೆಯನ್ನು ಕಾಯದಲ್ಲಿದ್ದ ಮನಕ್ಕೆ ತಿಳಿಯಬೇಕು.

ತಿಳಿದ ಆ ಮನವೇ ಗುರು ದೇವನಿಗೆ ಶಿಷ್ಯನಾಗಬೇಕು.

ಆಗ ಅರಿವೆಂಬ ಗುರುದೇವ ಕಾಯದಲ್ಲಿಯೇ ಇದ್ದ ಮನವೆಂಬ ಶಿಷ್ಯನೊಂದಿಗೆ ಮಾತನಾಡುತ್ತಾನೆ .

ಶಿಷ್ಯ ಗುರುದೇವನೊಂದಿಗೆ ಮಾತನಾಡುತ್ತಾನೆ.

ಕಾಯದಲ್ಲಿ ಈ ಕಾಯಕ ಎಲ್ಲಿಯವರೆಗೆ ನಡೆಯುವುದಿಲ್ಲವೊ, ಅಲ್ಲಿಯವರೆಗೆ ಕಾಯ ಅನ್ಯ ಕಾಯದೊಂದಿಗೆ ಸಂಗ ( ಗೆಳೆತನ ) ಮಾಡಲು ಬರುವುದಿಲ್ಲ. ಒಂದು ವೇಳೆ ಗೆಳೆತನ ಮಾಡಿದರೂ ಆ ಗೆಳೆತನ ಬಹಳ ದಿನಗಳವರೆಗೆ ಉಳಿಯುವುದಿಲ್ಲ. ದ್ವೇಶ ಅಸೂಯೆಗಳಿಂದಾಗಿ , ಕಾಯ ಕಾಯದೊಂದಿಗೆ ವೈರತ್ವ ಬೆಳೆಸಿಕೊಳ್ಳುತ್ತದೆ.

**ಶರಣ :** ಕಾಯ ಕಾಯದೊಂದಿಗೆ ಮಾಡುವ ಸಂಗವನ್ನೆ ಕಾಯಕವೆಂದು ಕರೆದಿರುವಿರಾ ಹೇಗೆ ಬಸವಣ್ಣ?

**ಬಸವಣ್ಣ :** ಹೌದು ಶರಣರೆ, ಸರಿಯಾಗಿ ಹೇಳಿದಿರಿ, ಕಾಯದಲ್ಲಿ ಸಂಗಮವಾದ ಅರಿವಿನ ಕಾಯವೇ ಗುರುದೇವನ ಕಾಯ. ಕಾಯವನ್ನು ಆವರಿಸಿದ ಮನೋಕಾಯ , ಗುರುದೇವನ ಕಾಯಕ್ಕೆ ಶರಣು ಹೋಗಿ ಶರಣಾಗತನಾಗುವುದೇ ಶಿಷ್ಯಕಾಯ.

ಹೀಗೆ ಗುರು ಶಿಷ್ಯರು ಸ್ಥೂಲ ಕಾಯದಲ್ಲಿಯೇ ಒಂದಾಗಿ , ತಮಗೆ ತಾವೇ ಮಾತನಾಡಿಕೊಳ್ಳುವುದೇ ನಿಜವಾದ ಸತ್ಸಂಗ. ಆ ಸತ್ಯದ ಜೊತೆಗೆ ಒಂದಾಗಿ ಆ ಸತ್ಯವೇ

ತಾನಾಗುವುದು ನಿಜವಾದ ಸತ್ಸಂಗ.

**ಶರಣ** : ಇಂತಹ ಸತ್ಸಂಗವನ್ನೇ ನಿಸ್ಸಂಗವೆಂದು ಕರೆದರೆ ಪುರಾತನರು ಬಸವಣ್ಣ?

**ಬಸವಣ್ಣ** : ಹೌದು ಶರಣರೆ ,

ನಿಸ್ಸಂಗದ ಸಂಗ ಮಾಡುವುದಕ್ಕಾಗಿಯೇ ನಾವು ನೀವು ಎಲ್ಲರೂ ಇಲ್ಲಿ ಸೇರಿದ್ದೇವೆ.

ಪ್ರಭುದೇವರು ಈ ಸಭೆಯನ್ನು ಅಲಂಕರಿಸಿದ್ದಾರೆ.

ಚೆನ್ನಬಸವಣ್ಣನವರು ಹಗಲಿರುಳು ಎನ್ನದೇ ನಿಸ್ಸಂಗಕ್ಕಾಗಿ ಈ ಸತ್ಸಂಗದ ಕಾಯಕದಲ್ಲಿ ತೊಡಗಿದ್ದಾರೆ.

**ಪ್ರಭುದೇವರು** : ಅದ್ಭುತವಾದ ರಹಸ್ಯವನ್ನೇ ಭೇದಿಸಿದಿರಿ ಬಸವಣ್ಣ, ನಾವೆಲ್ಲರೂ ನಿಮಗೆ ಕೃತಜ್ಞರಾಗಿದ್ದೇವೆ.

'' ಒಡಲೊಳಗಿದ್ದು ಒಡಲು ಸೋಂಕದೆ , ಒಡಲನ್ನು ಬೆಳಗುವ '' ಗುರುದೇವನ ಪರಿಚಯವನ್ನು; ಒಡಲ ಸಂಗ ಮಾಡಿ ,ಒಡಲನ್ನೇ ಕೆಡಿಸುವ, ಮನೋಮಯ ಕಾಯಕ್ಕೆ ಮನವರಿಕೆಯಾಗುವಂತೆ ಹೇಳಿದ ಮಾತು ಅದ್ಭುತ, ಅದ್ಭುತ ಬಸವಣ್ಣ!

**ಚೆನ್ನಬಸವಣ್ಣ** : ಕಾಯದಲ್ಲಿಯೇ ಇರುವ ಅರಿವೆಂಬ ಗುರುದೇವನ ಕಾಯವು ಕಾಣುವುದಿಲ್ಲ; ಮನವೆಂಬ ಶಿಷ್ಯನ ಕಾಯವೂ ಕಾಣುವುದಿಲ್ಲ.

ಕಾಣಬಾರದ ಶಿಷ್ಯ, ಕಾಣಬಾರದ ಗುರುವಿಗೆ ಶರಣು ಹೋಗಿ ಸಂಪೂರ್ಣ ಶರಣಾಗತನಾಗಿ ಭಕ್ತಿ ಮಾಡುವುದೆಂದರೇನು? ಈ ಮಾತನ್ನು ಇದುವರೆಗೂ ಯಾರೂ ಹೇಳಲಿಲ್ಲ.

ಭಕ್ತನಾಗಿ ಗುರುದೇವನಿಗೆ ಭಕ್ತಿ ಮಾಡುವ ಈ ಸೂತ್ರವನ್ನು ಮನುಕುಲಕ್ಕೆ ನೀಡಿದ ಶಿವಸ್ವರೂಪಿಗಳು ತಾವು ಬಸವರಸ ಎಂದು ಕೈ ಮುಗಿದು ಶರಣು ಶರಣಾರ್ಥಿ ಎಂದರು.

**ಪ್ರಭು** : ಒಡಲು ಸೋಂಕದೆ ಒಡಲೊಳಗಿರುವ ಒಡಲ ಒಡೆಯನಿಗೆ , ಮನವೆಂಬ ಒಡಲು ಭಕ್ತಿ ಮಾಡಿ ಭಕ್ತನಾಗುವ ಸೂತ್ರವನ್ನು ಸರಳೀಕರಿಸಿದಿರಿ ಬಸವಣ್ಣ. ಇನ್ನು ಮುಂದೆ ನಾವು ತಮ್ಮನ್ನು ' ಭಕ್ತಿ ಭಂಡಾರಿ ಬಸವಣ್ಣ 'ಎಂದು ಕರೆಯುತ್ತೇವೆ.

**ಬಸವಣ್ಣ** : ತಮ್ಮ ಇಚ್ಛೆ ಪ್ರಭು . ತಮ್ಮಿಂದ , ಶರಣರಿಂದ , ಅಷ್ಟೇ ಏಕೆ ಇಡೀ ಲೋಕದಿಂದ ಭಕ್ತನೆಂದು ಕರೆಸಿಕೊಳ್ಳುವ ಆಸೆ ನನಗೆ .

ಹೀಗೆ ತಾವು ಕರೆಯುವುದರಿಂದ ನನಗೆ ಪರಮಾನಂದವಾಗುತ್ತದೆ.

**ಶರಣ** : ಇಡೀ ಲೋಕದಲ್ಲಿ 'ಗುರು ' ಎಂದು ಕರೆಯಿಸಿಕೊಳ್ಳುವ ಬಯಕೆ ಸಾಕಷ್ಟು ಜನರಿಗಿದೆ. ಆದರೆ ತಾವು ಭಕ್ತ ಎಂದು ಕರೆಯಿಸಿಕೊಳ್ಳುವದರಲ್ಲಿ ಪರಮಾನಂದವಿದೆ ಎಂದು ಹೇಳಿದಿರಿ, ಅದು ಹೇಗೆ ಬಸವಣ್ಣ?

**ಪ್ರಭು** : ಬಸವಣ್ಣ ಇದಕ್ಕೆ ಉತ್ತರಿಸುವಂತಿಲ್ಲ .

ಶರಣರ ಈ ಪ್ರಶ್ನೆಗೆ ನಾನೆ ಉತ್ತರಿಸುವೆ.

ಬಿಜ್ಜಳ ರಾಜರು ಈ ಸಭೆಗೆ ಬಂದರೆ ತಾವೆಲ್ಲ ಎದ್ದು ನಿಂತು ಗೌರವಿಸುವಿರಿ. ಏಕೆಂದರೆ

ಆತ ಈ ರಾಜ್ಯದ ಒಡೆಯ.

ಬಸವಣ್ಣ ಪ್ರತಿ ಒಡಲಲ್ಲಿ ಒಡಲ ಒಡೆಯನನ್ನು ನೋಡಿ ಎದ್ದು ನಿಂತು ಆತನಿಗೆ ಶರಣು ಶರಣಾರ್ಥಿ ಎಂದು ಭಕ್ತಿ ಮಾಡುತ್ತಾನೆ! ಅಂದ ಮೇಲೆ ಬಸವಣ್ಣನ ಕಣ್ಣಿನಲ್ಲಿ ಅಜ್ಞಾನದ ಪೊರೆ ಕಳಚಿಕೊಂಡಿದೆ . ಹೀಗಾಗಿ ನೋಡಬೇಕಾದ ಸತ್ಯವನ್ನು ನೋಡಿ , ಒಡಲ ಒಡೆಯನಿಗೆ ಭಕ್ತನಾಗಿದ್ದಾನೆ.

**ಶರಣ :** ಎಂತಹ ಅದ್ಭುತವಾದ ಸೂತ್ರವು ಇದು ಪ್ರಭು! ಬಸವಣ್ಣ ನೋಡಬೇಕಾದ ಸತ್ಯವನ್ನೆ ನೋಡಿ , ಆ ಸತ್ಯಕ್ಕೆ ಹಣೆ ಮಣಿದು ಭಕ್ತನಾದ .

ಈ ಕೆಲಸ ನಮ್ಮೆಲ್ಲಾ ಶರಣರಿಗೆ ಬರಲು ಸಾಧ್ಯವೇ ಪ್ರಭು?

**ಪ್ರಭು :** ಏಕೆ ಸಾಧ್ಯವಿಲ್ಲ ?

' ಕಣ್ಣಲ್ಲಿರುವ ಕತ್ತಲೆ ' ಕಣ್ಣು ಕತ್ತಲನ್ನೆ ನೋಡುತ್ತದೆ. ಅದಕ್ಕೆ ಒಡಲು ಕಾಣುತ್ತದೆ ಹೊರತು ಒಡಲಲ್ಲಿರುವ ಅರಿವಿನ ಒಡಲು ಕಾಣುವುದಿಲ್ಲ.

ಕಣ್ಣಲ್ಲಿರುವ ಕತ್ತಲೆ ಕಣ್ಣು ನಿಜವಲ್ಲ,

ಆ ಕಣ್ಣಲ್ಲೆ ಇರುವ ಅರಿವಿನ ಬೆಳಕಿನ ಕಣ್ಣೆ ನಿಜ ಕಣ್ಣು. ಇದನ್ನು ಕಣ್ಣಿನ ಕಣ್ಣು ಎಂದು ಕರೆಯಬಹುದು,

ಕತ್ತಲೆ ಕಣ್ಣನ್ನು ಬೆಳಗುವ ಕಣ್ಣೆ ಅರಿವಿನ ಕಣ್ಣು . ಇದು ಸೂರ್ಯನನ್ನು ಕೂಡಾ ಬೆಳಗುವ ಕಣ್ಣು. ಹೀಗಾಗಿ ಪೂರ್ವಜರು ''ಕೋಟಿ ಸೂರ್ಯಂ ಸಮಪ್ರಭ '' ಕೋಟಿ ಸೂರ್ಯರನ್ನು ಬೆಳಗುವ ಬೆಳಕಿನ ಕಣ್ಣು ಎಂದಿದ್ದಾರೆ.

**ಶರಣ :** ಅದು ಹೇಗೆ ಪ್ರಭು ?

ದಯವಿಟ್ಟು ಅರಿವಿನ ಕಣ್ಣಿನ ಬಗ್ಗೆ ಶರಣ ಸಮೂಹಕ್ಕೆ ಮತ್ತಷ್ಟು ವಿವರವನ್ನು ನೀಡಿ.

**ಚೆನ್ನಬಸವಣ್ಣ :** ಸಭೆ ಇಲ್ಲಿಗೆ ಮುಕ್ತಾಯ ಮಾಡೋಣ . ಹೊತ್ತಾಯಿತು . ತಾವೆಲ್ಲ ತಮ್ಮ ಬೆಳಗಿನ ಕಾಯಕ ಪೂರೈಸಲು ತಮ್ಮ ತಮ್ಮ ಮನೆಗೆ ಹೋಗಿ.

(ಶರಣರು ತಮ್ಮ ತಮ್ಮಲ್ಲಿಯೇ ಮಾತನಾಡುತ್ತಾ ಶರಣರು ತಮಗೆ ಆಗಾಧವಾದ ಅರಿವಿನ ಸಂಪತ್ತನ್ನು ದಯಪಾಲಿಸಿದರೆಂದು ಸಂತೋಷ ವ್ಯಕ್ತಪಡಿಸಿಕೊಳ್ಳುತ್ತ ಮನೆಗೆ ನಡೆದರು).

## ಅಜ್ಞಾನದ ಕತ್ತಲೆ ದೃಶ್ಯವೂ ಇದೆ ಅರಿವಿನ ಬೆಳಕಿನ ದೃಶ್ಯವೂ ಇದೆ

ಸೂರ್ಯೋದಯವಾಗುತ್ತಲಿದೆ , ಶರಣ ಸಮೂಹ ಅತ್ಯಂತ ಆನಂದದಿಂದ ಮಹಾಮನೆಗೆ ತೆರಳುತ್ತಿದ್ದಾರೆ. ಹಕ್ಕಿಗಳು ತಮ್ಮ ದಿನದ ಕಾರ್ಯಕ್ಕೆ ಚಿಲಿಪಿಲಿ ಶಬ್ದ ಮಾಡುತ್ತ ಗೂಡಿನಿಂದ ಹೊರ ಬೀಳುತ್ತಲಿವೆ, ವೇದಿಕೆ ಮೇಲೆ ಬಸವಣ್ಣ ಚೆನ್ನಬಸವಣ್ಣ ಉಪಸ್ಥಿತರಿದ್ದಾರೆ, ಅಲ್ಲಮಪ್ರಭು ಅಧ್ಯಕ್ಷತೆ ವಹಿಸಿದ್ದಾರೆ.

ಶರಣರು ವೇದಿಕೆ ಮೇಲೆ ಇರುವ ಶರಣರಿಗೆ ಶರಣಾರ್ಥಿ ಎಂದು ತಲೆಬಾಗಿ ಆಸೀನರಾಗುವರು.

**ಪ್ರಭು :** ನಿನ್ನೆ ಸಭೆಯಲ್ಲಿ ಕಣ್ಣಲ್ಲಿರುವ ಅರಿವಿನ ಬಗ್ಗೆ ಪ್ರಸ್ತಾಪವಾಯಿತು . ಅರಿವು ಎಂದರೆ ಸಾಮಾನ್ಯವಲ್ಲ, ಗುರುದೇವನೆ ಅರಿವಾಗಿ ಕಣ್ಣಲ್ಲಿ ತನ್ನ ಅರಿವಿನ ಸಾಮ್ರಾಜ್ಯವನ್ನು ಸ್ಥಾಪಿಸಿಕೊಂಡಿದ್ದಾನೆ.

ಇಡೀ ಬ್ರಹ್ಮಾಂಡದಲ್ಲಿರುವ ಸಕಲ ವಸ್ತುಗಳನ್ನು ಸೃಷ್ಟಿ ಮಾಡಿದಾತ ಶ್ರೀಗುರು ದೇವನೆ ಆಗಿದ್ದಾನೆ. ಆತನಿಗಿಂತ ದೊಡ್ಡವರು ಯಾರೂ ಇಲ್ಲ . ಆದರೆ ಗುರುದೇವನ ಬೆಳಕಿನ ದೃಶ್ಯದಿಂದ ಮನವೆಂಬ ಕತ್ತಲು ಎನ್ನುವ ದೃಶ್ಯ ಕಣ್ಣಲ್ಲಿಯೇ ಸೃಷ್ಟಿಯಾಗಿ , ಗುರುದೇವನನ್ನೆ ಪಕ್ಕಕ್ಕೆ ತಳ್ಳಿ, ತನ್ನ ಕತ್ತಲೆ ಸಾಮ್ರಾಜ್ಯವನ್ನು ಕಣ್ಣಲ್ಲಿಯೇ ನಿರ್ಮಾಣ ಮಾಡಿಕೊಂಡಿದೆ . ಅದಕ್ಕಾಗಿ ನೋಡುವ ಸತ್ಯವನ್ನು ನೋಡಲು ಯಾರಿಗೂ ಸಾಧ್ಯವಾಗುತ್ತಿಲ್ಲ, ಕತ್ತಲೆ ಕಣ್ಣಿಗೆ ಕತ್ತಲೆ ಕಾಣುತ್ತದೆ ಹೊರತು , ಬೆಳಕು ಕಾಣುವುದಿಲ್ಲ.

**ಶರಣ :** ಅದು ಹೇಗೆ ಪ್ರಭು? ಇಡೀ ಪ್ರಪಂಚದಲ್ಲಿರುವ ಕಣ್ಣುಗಳೆಲ್ಲ ಕತ್ತಲೆಯೆ ಹೇಗೆ? ಪ್ರಭು: ಹೌದು ನೋಡುವ ಸತ್ಯವನ್ನು ನೋಡಲು ಸಾಧ್ಯವಾಗದ ಕಣ್ಣುಗಳೆಲ್ಲ ಕತ್ತಲೆ ಕಣ್ಣುಗಳೆ, ಕತ್ತಲನ್ನು ಕತ್ತಲು ಎಂದು ನಿರ್ಧರಿಸಲು ಕತ್ತಲು ಕಣ್ಣಿಗೆ ಸಾಧ್ಯವಾಗುದಿಲ್ಲ.

**ಶರಣ :** ಅದು ಹೇಗೆ ಪ್ರಭು? ಉದಾರಣೆಯೊಂದಿಗೆ ನಮಗೆ ತಿಳಿಯಪಡಿಸಿ ಎಂದು ಬಿನ್ನವಿಸಿಕೊಂಡ .

**ಪ್ರಭು :** ಆಗಲಿ.

ಆಭರಣ ಹಾಕಿಕೊಂಡ ದೇಹ, ದೇಹದ ಸೌಂದರ್ಯವನ್ನು ನೋಡಿದರೆ, ಮಗದೊಂದು ದೇಹ, ಧಾರಣೆ ಮಾಡಿಕೊಂಡ ಆಭರಣವನ್ನು ನೋಡುತ್ತದೆ. ಆಭರಣವನ್ನು ಕದಿಯಲು ಹೋದಾಗ ಪ್ರಾಣ ಹೋದರೂ ಚಿಂತೆ ಇಲ್ಲ, ಆಭರಣ ಕೊಡಬಾರದೆಂದು ನಿರ್ಧರಿಸಿ ದೇಹ ಭರಣವನ್ನು ಹಿಡಿದುಕೊಳ್ಳುತ್ತದೆ. ಕದಿಯಲು ಬಂದ ದೇಹ ಕೊಂದಾದರೂ ಆಭರಣ ಪಡೆಯಲು ಹೇಸುವುದಿಲ್ಲ.

ಆಭರಣ ಧರಿಸಿದವರಿಗೂ ಕದಿಯಲು ಬಂದವನಿಗೂ ಆಭರಣ ದೊಡ್ಡದಾಗುತ್ತದೆ ಹೊರತು ಪ್ರಾಣ ಶ್ರೇಷ್ಠ ಆಗುವುದೇ ಇಲ್ಲ.

ಅವರಿಬ್ಬರನ್ನು ನಿಲ್ಲಿಸಿ ಪ್ರಾಣ ದೊಡ್ಡದೊ, ಆಭರಣ ದೊಡ್ಡದೊ ಎಂದು ಕೇಳಿದಾಗ ಅವರಿಬ್ಬರಿಗೂ ಅವರಲ್ಲಿರುವ ಅರಿವು ಕೆಲಸ ಮಾಡುತ್ತದೆ. ಕೂಡಲೆ ಅವರಿಬ್ಬರೂ ಪ್ರಾಣ ದೊಡ್ಡದೆಂದು ಹೇಳುತ್ತಾರೆ.

**ಶರಣ** : ಪ್ರಭು ತಮ್ಮ ದೃಷ್ಟಿಯಲ್ಲಿ ಇಬ್ಬರೂ ಕತ್ತಲೆ ಕಣ್ಣು ಉಳ್ಳವರೆ ಆಗಿದ್ದಾರೆ. ಹೀಗಾಗಿ ಅವರಿಬ್ಬರೂ ತಪ್ಪಿತಸ್ಥರೆ ಆಗಿದ್ದಾರೆ . ಅವರಿಬ್ಬರಿಗೂ ಅರಿವಿನ ಶಿಕ್ಷಣದ ಶಿಕ್ಷೆಯ ಅವಶ್ಯಕತೆ ಇದೆ ಎಂದಂತಾಯಿತಲ್ಲವೆ ?

**ಪ್ರಭು** : ಹೌದು ಶರಣರೆ, ಸರಿಯಾಗಿ ಯೋಚಿಸಿದಿರಿ .

ರಾಜನಾದರೆ ಆಭರಣ ಕದಿಯಲು ಬಂದ ಕಳ್ಳನಿಗೆ ಶಿಕ್ಷೆ ಕೊಡುತ್ತಾನೆ, ಲೋಕ ಕೂಡಾ ಇದನ್ನು ಒಪ್ಪುತ್ತದೆ. ಏಕೆಂದರೆ ಶಿಕ್ಷೆ ಕೊಡುವ ರಾಜ ಅದನ್ನು ಒಪ್ಪುವ ಲೋಕ ಕತ್ತಲೆ ಕಣ್ಣುವುಳ್ಳವರೆ ಆಗಿದ್ದಾರೆ.

ಜ್ಞಾನಿ ಇಡೀ ಲೋಕಕ್ಕೆ ಅರಿವಿನ ಶಿಕ್ಷಣದ ಶಿಕ್ಷೆಯನ್ನು ಕೊಡುತ್ತಾನೆ. ಆದರೆ ಲೋಕಕ್ಕೆ ಇದನ್ನು ಸ್ವೀಕರಿಸುವ ಶಕ್ತಿ ಇಲ್ಲ.

**ಶರಣ** : ಅದು ಹೇಗೆ ಪ್ರಭು ?

ನಮಗೆಲ್ಲ ತಿಳಿಯುತ್ತದೆಯಲ್ಲ ?

**ಪ್ರಭು** : ಸಕಲರಲ್ಲಿಯೂ ಅರಿವು ಇರುವುದರಿಂದ ಜ್ಞಾನಿ ಹೇಳುವ ಅರಿವಿನ ಮಾತು ಕೂಡಲೆ ತಿಳಿಯುತ್ತದೆ .

ಆದರೆ ಲೋಕಕ್ಕೆ ಅರಿವಿನಿಂದ ತಿಳಿದ ಮಾತನ್ನು ಪಾಲಿಸಲು ಸಾಧ್ಯವಾಗುವುದಿಲ್ಲ.

**ಶರಣ** : ಅದು ಹೇಗೆ ಪ್ರಭು?

**ಪ್ರಭು** : ನಿಧಾನವಾಗಿ ಆಲಿಸಿ .

ಆಭರಣ ಅದರ ಮೂಲ ಚಿನ್ನ . ಚಿನ್ನವೆಂದರೆ ಹಳದಿ ಬಣ್ಣದ ಲೋಹ, ಲೋಹದ ಕಣಕಣದಲ್ಲಿ ಹಳದಿ ಬಣ್ಣ ಭರಿತವಾಗಿದೆ. ಕಪ್ಪು ಲೋಹವಾದರೇನು, ಹಳದಿ ಲೋಹವಾದರೇನು , ಬಿಳಿ ಲೋಹವಾದರೇನು ಲೋಹ ಲೋಹವೆ ಆಗಿದೆ.

ಕಪ್ಪು ಲೋಹವನ್ನು ಲೋಕ ಸಹಜವಾಗಿಯೆ ನೋಡುತ್ತದೆ. ಏಕೆಂದರೆ ಅದಕ್ಕೆ ಬೆಲೆ ಇಲ್ಲ. ಹಳದಿ ಲೋಹಕ್ಕೆ ಬೆಲೆ ಇದೆ. ಬೆಲೆ ಕಟ್ಟಿದಾತ ಮನುಷ್ಯನೆ ಆಗಿದ್ದಾನೆ. ಅದನ್ನು ಮರೆತ ಮನುಷ್ಯ ಹಳದಿ ಲೋಹಕ್ಕಾಗಿ ತನ್ನ ಕಣ್ಣಲ್ಲಿರುವ ಅರಿವಿನ ಬೆಳಕನ್ನು ದೂರ ತಳ್ಳಿ ಕತ್ತಲೆಯನ್ನು ಸ್ಥಾಪಿಸಿಕೊಂಡಿದ್ದಾನೆ.

ಹೀಗಾಗಿ ಚಿನ್ನಕ್ಕಾಗಿ ಮನುಷ್ಯ ಕದ್ದು ಕಳ್ಳನಾದ.

ಚಿನ್ನಕ್ಕಾಗಿ ಹಗಲಿರುಳು ದುಡಿದು ಶ್ರೀಮಂತನಾದ .

ಯುದ್ಧ ಮಾಡಿ ಚಿನ್ನದ ಕಿರೀಟ ಧರಿಸಿ ರಾಜನಾದ .

ಚಿನ್ನಕ್ಕಾಗಿ ಯುದ್ಧ, ಮಣ್ಣಿಗಾಗಿ ಯುದ್ಧ, ಕಾಮಿನಿಗಾಗಿ ಯುದ್ಧ ಮಾಡಿದ. ಇವೆಲ್ಲ ಕಣ್ಣ ಕತ್ತಲೆಯ ಸಾಮ್ರಾಜ್ಯದ ಬೇಡಿಕೆಗಳು.

**ಶರಣ :** ಈ ಕತ್ತಲೆ ಸಾಮ್ರಾಜ್ಯವನ್ನು ವಿವರಿಸಿ ಹೇಳಿ ಪ್ರಭು.

**ಪ್ರಭು :** ಕತ್ತಲೆ ಸಾಮ್ರಾಜ್ಯ ಸ್ಥಾಪಿಸುವುದಕ್ಕಾಗಿ ಹಗಲಿರುಳು ನಿದ್ರೆ ಇಲ್ಲದೆ ದುಡಿಯುತ್ತಾನೆ . ಬೆಳಕಿನ ಸಾಮ್ರಾಜ್ಯದತ್ತ ಮನುಷ್ಯ ಒಂದಿಷ್ಟು ಹೊರಳಿ ನೋಡುವುದೇ ಇಲ್ಲ.

ಕತ್ತಲೆ ಸಾಮ್ರಾಜ್ಯ ಸ್ಥಾಪನೆ ಮಾಡಲು ಶ್ರಮ ಬಹಳ ವ್ಯಯವಾಗುತ್ತದೆ.

ಬೆಳಕಿನ ಸಾಮ್ರಾಜ್ಯ ಸ್ಥಾಪಿಸಲು , ಮನುಷ್ಯ ಹೊರಗೆ ದುಡಿಯುವ ಅವಶ್ಯಕತೆಯಿಲ್ಲ; ತನುವಿನಲ್ಲಿ ತನ್ಮಯನಾದ ಅರಿವಿನ ಬೆಳಕಿನ ಸಾಮ್ರಾಜ್ಯವನ್ನು ತನು ಮತ್ತು ಮನ ಕೂಡಿಯೇ ಪಡೆಯಬೇಕು.

**ಶರಣ :** ತನುವಿನಲ್ಲಿಯೇ ತನ್ಮಯವಾದ ಅರಿವಿನ ಬೆಳಕನ್ನು , ತನು ಮತ್ತು ಮನ ಕೂಡಿ ಪಡೆಯುವ ಬಗೆ ಹೇಗೆ ಪ್ರಭು?

**ಪ್ರಭು :** ಅರಿವಿನ ಬೆಳಕು ಗುರುವಾಗಿ ತನು ಮತ್ತು ಮನಕ್ಕೆ ಸದಾ ಪಾಠ ಮಾಡುತ್ತಾನೆ. ತನು ಮತ್ತು ಮನಗಳೆರಡೂ ಅಜ್ಞಾನದತ್ತ ವಾಲಿದಾಗ ಅವೆರಡೂ ತನುವಿನಲ್ಲಿಯೆ ತನ್ಮಯವಾಗಿ ತಮಗೆ ಪಾಠ ಮಾಡುವ ಗುರುದೇವನನ್ನು ನೋಡುವುದೆ ಇಲ್ಲ ಕತ್ತಲೆಯ ರುಚಿಯಲ್ಲಿ ತನು ಮನಗಳೆರಡೂ ಸಂಪೂರ್ಣ ಮುಳುಗಿ ಹೋಗಿವೆ . ಹೀಗಾಗಿ ಗುರುದೇವನ ಪಾಠ ಆಲಿಸಲು ತನು ಮತ್ತು ಮನಗಳೆರಡಕ್ಕೂ ಸಾಧ್ಯವಾಗುತ್ತಿಲ್ಲ.

**ಶರಣ :** ಹಾಗಾದರೆ ನಾವು ಏನು ಮಾಡಿದರೆ ಒಳಿತು ಪ್ರಭು ?

ತನು ಮನಗಳೆರಡಕ್ಕೂ ಮುಸುಕಿದ ಮಾಯಾ ಮೃಗದಿಂದ ಪಾರಾಗುವ ಬಗೆ ಹೇಗೆ?

**ಪ್ರಭು :** ಬಸವಣ್ಣ ಈ ಕುರಿತು ಶರಣರಿಗೆ ತಾವೆ ವಿವರಿಸಿ ಹೇಳಿ.

**ಬಸವಣ್ಣ :** ಕೈ ಮುಗಿದು , ಆಗಲಿ ಪ್ರಭು ತಮ್ಮ ಅಪ್ಪಣೆ .

ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಈ ಐದು ಜ್ಞಾನೇಂದ್ರಿಯಗಳಲ್ಲಿ ಗುರುದೇವ ಸಂಗಮವಾಗಿದ್ದಾನೆ.

ಹೀಗೆ ಸಂಗಮವಾದ ತನುವಿನ ಐದು ಅರಿವಿನ ಮಹಾಕ್ಷೇತ್ರಗಳಲ್ಲಿ ಮನವೆಂಬ ಮಾಯಾ ಮೃಗ ತನ್ನದೆ ಆದ ಅಜ್ಞಾನದ ಕತ್ತಲೆಯ ಸಾಮ್ರಾಜ್ಯವನ್ನು ಸ್ಥಾಪನೆ ಮಾಡಿಕೊಂಡಿದೆ. ಕಣ್ಣನ್ನು ಬಳಕೆ ಮಾಡಿ ತನ್ನ ಕತ್ತಲೆ ದೃಶ್ಯದಿಂದ ನೋಡುವ ಮನ ಗುರುದೇವನ ಅರಿವಿನ ದೃಶ್ಯದಿಂದ ನೋಡಿದರೆ ವಸ್ತುವಿನ ಸತ್ಯ ಕಾಣುತ್ತದೆ. ಆಗ ಕತ್ತಲೆ ತನಗೆ ತಾನೆ ದೂರ ಸರಿಯುತ್ತದೆ.

**ಶರಣ :** ಅದು ಹೇಗೆ ಬಸವಣ್ಣ?

**ಬಸವಣ್ಣ :** ತನುವಿನಲ್ಲಿಯೇ ತನ್ಮಯವಾದ ಅರಿವಿನ ಬೆಳಕು ತನುವಿಗೆ ಗುರುವಾಗಿ ಕೆಲಸ ಮಾಡುತ್ತದೆ. ಆ ಗುರುದೇವ ನೋಡುವ ನೋಟಕ್ಕೆ ಸತ್ಯ ಕಾಣುತ್ತದೆ ಮಿಥ್ಯ ಕಾಣುವುದಿಲ್ಲ.

ಲೋಕ, ಕಲ್ಲಲ್ಲಿ ಮಾಡಿದ ಮೂರ್ತಿಯನ್ನು ದೇವರೆಂದು ಆರಾಧಿಸಿದರೆ , ಕಣ್ಣಲ್ಲಿರುವ ಗುರುದೇವನ ದೃಶ್ಯಕ್ಕೆ ಕಲ್ಲು ಮಾತ್ರ ಕಾಣುತ್ತದೆ. ದೇವರು ಕಾಣುವುದೇ ಇಲ್ಲ . ಏಕೆಂದರೆ ಗುರುದೇವನೆ ಮಹಾದೇವನಾಗಿರುವುದರಿಂದ ಆ ಮಹಾದೇವನೆ ಸದಾಶಿವನಾಗಿರುವುದರಿಂದ,

ಆ ಸದಾಶಿವನೆ ಸಾಕ್ಷಾತ್ ಪರ ಬ್ರಹ್ಮನಾಗಿರುವುದರಿಂದ , ತನಗಿಂತ ಅನ್ಯ ದೇವರು ತನಗೆ ಕಾಣುವುದೇ ಇಲ್ಲ. ಹೀಗಾಗಿ ಲೋಕ ಮಾಡಿದ ದೇವರು ದೇವರಲ್ಲವೆಂದು ತನುವಿಗು ಮತ್ತು ಮನಕ್ಕೂ ಅರಿವೆಂಬ ಗುರುವಿನಿಂದಲೆ ಗೊತ್ತಾಗಿ ಮನ ಘನ ಮನವಾಗುತ್ತದೆ.

**ಪ್ರಭು** : ಅದ್ಭುತವಾದ ಸೂತ್ರವನ್ನು ಹೇಳಿದಿರಿ ಬಸವಣ್ಣ, ಶರಣರೊಂದಿಗೆ ನಾವು ಕೂಡಾ ಕೇಳಿ ಧನ್ಯರಾದೆವು.

**ಶರಣ** : ಹೌದು ಪ್ರಭು, ಬಸವಣ್ಣ, ಚೆನ್ನಬಸವಣ್ಣ ಮತ್ತು ತಮ್ಮಿಂದ ನಾವೆಲ್ಲ ಧನ್ಯರಾದೆವು . ನಮ್ಮಲ್ಲಿದ್ದ ಗುರುದೇವನನ್ನು ನಾವೆ ಕಂಡುಕೊಳ್ಳಲು ತಮ್ಮಿಂದ ನಮಗೆ ಸಾಧ್ಯವಾಗುತ್ತಲಿದೆ . ಇದು ನಮ್ಮ ಗೋಚರಕ್ಕೂ ಬರುತ್ತಲೆ ಇದೆ ; ಎಂದು ಶರಣರ ಪರವಾಗಿ ಮಾತಾಡಿ ಕುಳಿತರು.

**ಚೆನ್ನಬಸವಣ್ಣ** : ಎದ್ದು ನಿಂತು , ಸಕಲ ಶರಣರಿಗೂ ಸಭೆಯ ಅಧ್ಯಕ್ಷತೆಯನ್ನು ವಹಿಸಿದ ಅಲ್ಲಮಪ್ರಭುಗಳಿಗೂ ಬಸವಣ್ಣನವರಿಗೂ ಕೈ ಮುಗಿದು ಶರಣು ಶರಣಾರ್ಥಿ ಎನ್ನುತ್ತ ಸಭೆಗೆ ಮಂಗಲ ಹಾಡಿದರು.

ಸತ್ಸಂಗದ ಅಮಲಿನಲ್ಲಿ ತೇಲಾಡುತ್ತಾ ಶರಣರು ಮನೆಗೆ ನಡೆದರು

# ತನುವಿನ ಜ್ಞಾನ ತನುವೇ ಬಳಕೆ ಮಾಡದ ಕಾರಣ ಇಡೀ ಮನು ಕುಲ ಅಪಾಯದಲ್ಲಿದೆ

ಭುವಿಯನ್ನು ಆವರಿಸಿದ ಕತ್ತಲು , ಸೂರ್ಯನ ಬೆಳಕಿನ ಗರ್ಭದಲ್ಲಿ ಸೇರಿ ಬೆಳಕೆ ಆಗುವ ಕಾಲ ಸನ್ನಿಹಿತವಾಗಿದೆ. ಕಲ್ಯಾಣದಲ್ಲಿ ಜನ ತಮ್ಮ ತಮ್ಮ ಪ್ರಾತಃ ಕಾಲದ ಕೆಲಸದಲ್ಲಿ ನಿರತರಾಗಿದ್ದಾರೆ. ಶರಣರು ಮಾತ್ರ ಪ್ರಾತಃ ಕಾಲದ ಎಲ್ಲಾ ಕೆಲಸಗಳನ್ನು ಮುಗಿಸಿ ಮಹಾಮನೆಯತ್ತ ಲಗು ಬಗೆಯಿಂದ ಧಾವಿಸುತ್ತಿದ್ದಾರೆ . ವೇದಿಕೆ ಮೇಲಿದ್ದ ಚೆನ್ನಬಸವಣ್ಣರಿಗೂ ಬಸವಣ್ಣನವರಿಗೂ ಸಭೆಯ ಅಧ್ಯಕ್ಷತೆಯನ್ನು ವಹಿಸಿದ ಪ್ರಭುದೇವರಿಗೂ ಕೈ ಮುಗಿದು ತಲೆಬಾಗಿ ಶರಣು ಶರಣಾರ್ಥಿ ಎಂದು ಕುಳಿತುಕೊಳ್ಳುವರು.

**ಚೆನ್ನಬಸವಣ್ಣ :** ಸತ್ಸಂಗಕ್ಕೆ ಆಗಮಿಸಿದ ಸಕಲ ಶರಣರಿಗೂ ಸ್ವಾಗತ ಕೋರಿ , ಶರಣು ಶರಣಾರ್ಥಿ ಎಂದು ಹೇಳುತ್ತಾ , ಬಸವಣ್ಣ ಮತ್ತು ಪ್ರಭುದೇವರಿಗೆ ಕೈ ಮುಗಿದು ಬಸವಣ್ಣ ದಯವಿಟ್ಟು ನಿನ್ನೆ ಸಭೆಯಲ್ಲಿ ಪ್ರಸ್ತಾಪಿಸಿದ ವಿಷಯವನ್ನೇ ಮುಂದುವರಿಸಿ ಎಂದು ಬಿನ್ನವಿಸಿಕೊಳ್ಳುತ್ತಾರೆ.

**ಶರಣ :** ಚನ್ನಬಸವಣ್ಣನವರ ಮಾತಿಗೆ ಧ್ವನಿಗೂಡಿಸುತ್ತಾ ಹೌದು ಬಸವಣ್ಣ ಆ ವಿಷಯವನ್ನೆ ಮುಂದುವರಿಸಿ ಎಂದು ಬಿನ್ನವಿಸಿಕೊಳ್ಳುತ್ತಾರೆ.

**ಬಸವಣ್ಣ :** ಆಗಲಿ ಶರಣರೆ , ತಮ್ಮ ಅಪ್ಪಣೆ . ಎಂದು ತಾವು ಬಯಸಿದ ವಿಷಯದ ಬಗ್ಗೆ ಗುರುದೇವ ನುಡಿಸಿದಂತೆ ತಮ್ಮ ಮುಂದೆ ನುಡಿಯುವೆ.

ಹೇಗೆ ಕಣ್ಣಿನಲ್ಲಿ ಅರಿವಿನ ಬೆಳಕು ಇದೆಯೊ ಆ ಬೆಳಕನ್ನು ಸರಿಸಿ ಹ್ಯಾಗೆ ಕತ್ತಲು ಆವರಿಸಿದೆಯೊ ಹಾಗೆಯೇ ಕಿವಿಯಲ್ಲಿಯೂ ಕೂಡ ಶಬ್ದವನ್ನು ಅರಿವಿನಿಂದ ಕೇಳುವ , ಅರಿವಿನ ಬೆಳಕು ಸಂಗಮವಾಗಿದೆ. ಅರಿವಿನಿಂದ ಕೇಳುವ ಕಿವಿಯನ್ನು ಅಜ್ಞಾನದಿಂದ ಕೇಳುವ ಕತ್ತಲೆ ಕಿವಿಯು, ಅರಿವಿನ ಕಿವಿಯನ್ನು ಆವರಿಸಿದೆ . ಹೀಗಾಗಿ ಲೋಕ ಶಬ್ದವನ್ನು ಅರಿವಿನಿಂದ ಕೇಳಲು ಸಾಧ್ಯವಾಗದೆ, ತನು ತನುವಿನೊಂದಿಗೆ ಶಬ್ದಯುದ್ಧದಲ್ಲಿ ಮುಳುಗಿದೆ.

ಶಬ್ದ ಕೇಳಿ ಆತ್ಮಹತ್ಯೆ ಮಾಡಿಕೊಳ್ಳಲೂ ಹೇಸದ ಇಲ್ಲ ಕೊಲೆ ಮಾಡಲು ಹೇಸಿಕೊಳ್ಳದ ತನುಗಳು ಲೋಕದಲ್ಲಿ ಇವೆ.

ಶಬ್ದ ಅರಿವಿನಿಂದ ಕೇಳುವ ಶಕ್ತಿ ತನುವಿಗೆ ಮಾತ್ರ ಇದೆ. ಆದರೂ ಕೂಡಾ ತನು ಶಬ್ದವನ್ನು ಅರಿವಿನಿಂದ ಕೇಳದ ನಿಮಿತ್ಯ , ಕೇಳಿದ ಶಬ್ದವೆ ತನುವಿನಲ್ಲಿ ಸಂಗ್ರಹವಾಗಿ ತನುವನ್ನು ಸೂತಕವಾಗಿ ಕಾಡುತ್ತದೆ . ಕೇಳಿದ ಶಬ್ದ ನೆನಪಾದಾಗವೊಮ್ಮೆ ತನುವನ್ನು ಖಡ್ಗದಿಂದ ಇರಿದಂತೆ ಭಾಸವಾಗುತ್ತದೆ.

ಕೇಳಿ ಸಂಗ್ರಹ ಮಾಡಿಕೊಂಡ ಶಬ್ದ , ತನು ಇರುವವರೆಗೆ ತನುವನ್ನು ಮತ್ತೆ ಮತ್ತೆ ಕೊಂದು ಘಾಸಿಗೊಳಿಸುತ್ತದೆ. ತನು ಇಲ್ಲವಾಗುವವರೆಗೆ ಕೇಳಿದ ಶಬ್ದ ತನುವಿನಲ್ಲಿಯೆ ಇದ್ದು

ತನುವಿನೊಂದಿಗೆ ಇಲ್ಲವಾಗುತ್ತದೆ. ಕೇಳಿದ ಮತ್ತು ನುಡಿದ ಶಬ್ದಗಳನ್ನು ನಷ್ಟ ಮಾಡಿಕೊಳ್ಳಲು ತನುವಿಗೆ ಸಾಧ್ಯವಾಗುವುದೆ ಇಲ್ಲ.

**ಶರಣ** : ಬಸವಣ್ಣ ತಾವು ಹೇಳುವುದನ್ನು ಕೇಳಿದರೆ ಇಡೀ ಮನುಕುಲ ಅಪಾಯದಲ್ಲಿದೆ ಎಂದು ಭಾಸವಾಗುತ್ತದೆಯಲ್ಲ.

**ಬಸವಣ್ಣ** : ಹೌದು ಶರಣರೆ, ತಾವು ಸರಿಯಾಗಿಯೆ ಹೇಳಿದಿರಿ.

ಸತ್ಸಂಗದಲ್ಲಿ ಭಾಗಿಯಾದ ತಾವು ಲೋಕಕ್ಕಾಗಿ ಚಿಂತಿಸಬೇಡಿ , ನಿಮ್ಮ ಕೆಲಸವನ್ನು ನೀವು ಮಾಡಿಕೊಳ್ಳಿ. ಅರಿವಿನ ಕೆಲಸದಲ್ಲಿ ನೀವು ನೈಪುಣ್ಯತೆಯನ್ನು ಸಾಧಿಸಿದರೆ ಸಾಕು , ಲೋಕ ಸರಿಯಾಗಿಯೆ ಇದೆ , ನಾವು ಮಾತ್ರ ತಪ್ಪಿದ್ದೆವು ಎನ್ನುವ ತಪ್ಪು ನಮಗೆ ಮನವರಿಕೆಯಾಗುತ್ತದೆ. ಆಗ ನಮ್ಮ ನಮ್ಮ ಕೆಲಸದಲ್ಲಿ ನಾವು ತೊಡಗಬೇಕು ಎಂದು ನಮಗೆ ಅರಿವಾಗುತ್ತದೆ.

**ಶರಣ** : ಲೋಕಕ್ಕೂ ನಮಗೂ ವ್ಯತ್ಯಾಸವಿದೆಯೇ ಬಸವಣ್ಣ ? ಲೋಕದ ಬಗ್ಗೆ ನಾವು ಚಿಂತಿಸಬಾರದೆ ಹೇಗೆ?

**ಬಸವಣ್ಣ** : ಲೋಕದ ಡೊಂಕು ನಮಗೆ ತಿಳಿಯುತ್ತದೆ. ಆಗ ಲೋಕದ ಡೊಂಕು ಸರಿಪಡಿಸಲು ನಾವು ಟೊಂಕ ಕಟ್ಟಿ ನಿಲ್ಲುತ್ತೇವೆ. ನಮ್ಮ ಡೊಂಕು ನಮಗೆ ಮಾತ್ರ ತಿಳಿ ಯುವುದಿಲ್ಲ ನಮ್ಮ ಡೊಂಕು ನಮ್ಮಲ್ಲಿಯೇ ಉಳಿಯುತ್ತದೆ. ಲೋಕದ ಡೊಂಕು ಕೂಡಾ ಸರಿಹೋಗುವುದಿಲ್ಲ . ಆಗ ತನು ಲೋಕದ ಡೊಂಕು ನೋಡಿ ವಿಲಿ ವಿಲಿ ಒದ್ದಾಡುತ್ತದೆ. ಅದನ್ನು ಸರಿಪಡಿಸಲು ಬರುವುದಿಲ್ಲ, ಶ್ರಮಪಟ್ಟರೆ ನನ್ನಲ್ಲಿರುವ ಡೊಂಕು ನಾನು ಮಾತ್ರ ಸರಿಪಡಿಸಿಕೊಳ್ಳಲು ಬರುತ್ತದೆ. ಅದಕ್ಕೂ ಕೂಡ ಸಾಕಷ್ಟು ಕೆಲಸ ಮಾಡಬೇಕಾಗುತ್ತದೆ.

**ಶರಣ** : '' ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ.
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ,
ನೆರೆಮನೆಯ ದುಖಃಕ್ಕೆ ಅಳುವವರ ಮೆಚ್ಚ
ಕೂಡಲಸಂಗಮದೇವಾ ''

ಎನ್ನುವ ಸೂತ್ರ ತಾವು ಹೇಳಿದ್ದು ಇದಕ್ಕಾಗಿಯೆ ಬಸವಣ್ಣ ಎಂದು ಪ್ರಶ್ನಿಸಿದರು.

**ಬಸವಣ್ಣ** : ಹೌದು ಶರಣರೇ ! ಸರಿಯಾಗಿ ಊಹಿಸಿದಿರಿ .

ಇಡೀ ಲೋಕವನ್ನು ತಾನು ತಿದ್ದಲು ಬರುವುದಿಲ್ಲ, ಲೋಕದಲ್ಲಿರುವ ತನ್ನನ್ನು ಮಾತ್ರ ತಾನು ತಿದ್ದಿಕೊಳ್ಳಲು ಬರುತ್ತದೆ. ಅದೂ ಶ್ರಮ ಪಟ್ಟರೆ ಮಾತ್ರ ಸಾಧ್ಯವಾಗುತ್ತದೆ.

ತನ್ನನ್ನು ತಾನು ತಿದ್ದಿಕೊಳುವ ಕಾಯಕದಲ್ಲಿ ನಮಗೆ ನಾವೇ ಮುಂದುವರಿಯಬೇಕು; ಆಗ ಅರಿವಿನ ಸಾಮ್ರಾಜ್ಯಕ್ಕೆ ಶರಣಕುಲ ನಾಂದಿ ಹಾಡಿದಂತೆ ಆಗುತ್ತದೆ.

**ಶರಣ** : ಕೇಳಿದ ಶಬ್ದ ತನುವಿನಲ್ಲಿ ಉಳಿದು ತನು ಇರುವವರೆಗೆ ತನುವನ್ನು ಮತ್ತೆ ಮತ್ತೆ ಘಾಸಿಗೊಳಿಸುತ್ತದೆ ಎಂದು ಹೇಳಿದಿರಿ ಬಸವಣ್ಣ. ತನುವಿನಲ್ಲಿ ಸಂಗ್ರಹವಾದ ಶಬ್ದಗಳನ್ನು

ಅಳಿಸಿ ಹಾಕಲು ಬರುವುದಿಲ್ಲವೆ ಬಸವಣ್ಣ.

**ಬಸವಣ್ಣ :** ಲೋಕಾನುಭವದಿಂದ ಕೇಳಿದ ಶಬ್ದಗಳನ್ನು ಅಳಿಸಿ ಹಾಕಲು ಬರುವುದಿಲ್ಲ. ತನುವಿನಲ್ಲಿ ಸಂಗ್ರಹವಾದ ಶಬ್ದಗಳನ್ನು ಪುನಃ ಸ್ವಾನುಭಾವದಿಂದ ಕೇಳಿದಾಗ ಶಬ್ದದಲ್ಲಿರುವ ಸತ್ಯ ಅರಿವಿಗೆ ಬಂದು , ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನು ತನುವಿನಲ್ಲಿ ಸಂಗ್ರಹವಾದ ಸಕಲ ಶಬ್ದಗಳನ್ನು ಅಳಿಸಿ ಹಾಕುತ್ತಾನೆ. ಆ ಶಕ್ತಿ ಅರಿವೆಂಬ ಗುರುದೇವನಿಗೆ ಮಾತ್ರ ಇದೆ. ಮನಕ್ಕೆ ಇಲ್ಲ.

**ಶರಣ :** ಅದು ಹೇಗೆ ಬಸವಣ್ಣ? ನಮ್ಮ ಮಾತನ್ನು ಅರ್ಥಮಾಡಿಕೊಳ್ಳಲು ನಮಗೆ ಸಾಧ್ಯವಾಗುತ್ತಿಲ್ಲ , ದಯವಿಟ್ಟು ವಿವರಿಸಿ ಹೇಳಿ.

**ಬಸವಣ್ಣ :** ಪ್ರತಿ ಶಬ್ದದಲ್ಲಿ ಅರಿವು ಇದೆ. ಅರಿವು ಇಲ್ಲದ ಶಬ್ದವೇ ಇಲ್ಲ. ಮರೆವಿನ ಕಿವಿ ಮರೆವಿನಿಂದ ಕೇಳುವುದರಿಂದ ಕೇಳಿದ ತನುವಿಗೆ ಶಬ್ದ ಗಾಯ ಮಾಡುತ್ತದೆ, ಇಲ್ಲ ಸುಖ ಕೊಡುತ್ತದೆ.

**ಶರಣ :** ಅದು ಹೇಗೆ ಬಸವಣ್ಣ?

**ಬಸವಣ್ಣ :** 'ಕತ್ತೆ 'ಎನ್ನುವ ಶಬ್ದ ಕೇಳಿದರೆ ಗಾಯವಾಗುವುದಿಲ್ಲ , ಹಾಗೆಯೆ ಸುಖ ಕೂಡ ಆಗುವುದಿಲ್ಲ. ಅದು ನೀನೇ ಎಂದು ಬೆರಳು ತೋರಿ ನುಡಿದಾಗ ಸುಖವಾಗುತ್ತದೆ ಇಲ್ಲಾ ದುಃಖವಾಗುತ್ತದೆ.

**ಶರಣ :** 'ಕತ್ತೆ ' ಎನ್ನುವ ಶಬ್ದನಾನೇ ಎಂದು ಹಚ್ಚಿಕೊಂಡು ಕೇಳಿದರೆ ದುಃಖವಾಗುವುದು ನಿಜ, ಆದರೆ ತಾವು ಸುಖವೂ ಆಗುತ್ತದೆ ಎಂದು ನುಡಿದಿರಿ ಅದು ಹೇಗೆ ಬಸವಣ್ಣ?

**ಬಸವಣ್ಣ :** ಒಬ್ಬ ಹುಡುಗನನ್ನು ಕುರಿತು ಈ ಹುಡುಗ ಬಹಳ ಬುದ್ದಿವಂತ ಹಗಲಿರುಳೆನ್ನದೆ 'ಕತ್ತೆ ' ದುಡಿದಂತೆ ದುಡಿಯುತ್ತಾನೆ ಎಂದಾಗ ಹುಡುಗನಿಗೆ ಕತ್ತೆ ಎನ್ನುವ ಶಬ್ದ ಸುಖ ಕೊಡುತ್ತದೆ .

**ಶರಣ :** ಶಬ್ದದಲ್ಲಿ ಸುಖವೂ ಇದೆ ದುಃಖವೂ ಇದೆ ಎನ್ನುವುದು ಲೋಕಕ್ಕೂ ಗೊತ್ತು. ಇಲ್ಲಿರುವ ನಮಗೂ ಗೊತ್ತು. ಆದರೆ ತಾವು ಶಬ್ದದಲ್ಲಿ 'ಅರಿವು' ಮಾತ್ರ ಇದೆ ಎಂದು ಹೇಳಿದಿರಿ ಅದು ಹೇಗೆ ಬಸವಣ್ಣ ?

**ಬಸವಣ್ಣ :** ಶಬ್ದ ಅರಿವಿನಿಂದ ಕೇಳಿದರೆ ಸುಖವೂ ಆಗುವುದಿಲ್ಲ, ದುಃಖವೂ ಆಗುವುದಿಲ್ಲ. ಹೇಗೆಂದರೆ ' ಕತ್ತೆ ' ಎನ್ನುವ ಶಬ್ದವನ್ನು ಮನುಷ್ಯ ಒಂದು ಪ್ರಾಣಿಯನ್ನು ಗುರುತಿಸುವುದಕ್ಕಾಗಿ ಆ ಪ್ರಾಣಿಗೆ ಹೆಸರಿಟ್ಟಿದ್ದಾನೆ. ಅದು ಕೂಡಾ 'ಕತ್ತೆ ' ಅಲ್ಲ . ಹಾಗೆಯೇ ಕೇಳುವ ವ್ಯಕ್ತಿ ನಾನು ಕತ್ತೆಯಲ್ಲ ಎನ್ನುವ ಸತ್ಯವನ್ನು ಮರೆತು ಹೋಗಿದ್ದಾನೆ, ಆ ಸಂದರ್ಭದಲ್ಲಿ ನಾನು' ಕತ್ತೆ 'ಎಂದು ಅಂದುಕೊಂಡಿದ್ದಕ್ಕಾಗಿ ತನಗೆ ಸುಖವಾಗುತ್ತದೆ. ಹಾಗೆಯೇ ದುಃಖವಾಗುತ್ತದೆ. ನಾನು ಕತ್ತೆಯಲ್ಲ ಎಂದು ಕೇಳಿದ ಕೂಡಲೇ ತಿಳಿದುಕೊಂಡರೆ ನನಗೆ ದುಃಖವಾಗುವುದಿಲ್ಲ ಮತ್ತು ಸುಖವೂ ಆಗುವುದಿಲ್ಲ.

**ಶರಣ :** ನಿಶಬ್ದಂ ಬ್ರಹ್ಮ ಮುಚ್ಯತೇ ಎಂದು ಪುರಾತನರು ಹೇಳಿದ ಮಾತು ಇದಕ್ಕೆ

ಇರಬಹುದೇ ಬಸವಣ್ಣ .

**ಬಸವಣ್ಣ :** ಹೌದು ಶರಣರೇ ಸರಿಯಾದ ಸೂತ್ರವನ್ನೇ ನೆನಪಿಸಿರುವಿರಿ, ನಿಮಗೆ ಧನ್ಯವಾದಗಳು.

ಶಬ್ದವನ್ನು ಅರಿವಿನಿಂದ ಕೇಳಿದರೆ ಶಬ್ದ ನಿಶಬ್ದವಾಗುತ್ತದೆ . ಕೇಳಿದಾತನು ಶಬ್ದ ಮಾಡುವುದಿಲ್ಲ. ಹಾಗೆಯೇ ಕೇಳಿದ ತನುವಿಗೆ ಗಾಯವಾಗುವುದಿಲ್ಲ. ನುಡಿದ ತನುವಿಗೆ ಗಾಯವಾಗದೇ ಇರುವುದಿಲ್ಲ .

**ಶರಣ :** ಅದ್ಹೇಗೆ ಬಸವಣ್ಣ ನುಡಿದ ತನುವಿಗೆ ಗಾಯವಾಗುತ್ತದೆ ಎಂದಿರಿ ?

**ಬಸವಣ್ಣ :** ಯಾರಿಗಾದರೂ ಬೈಯ್ಯಬೇಕಾದರೆ ಬೈಯ್ಯುವ ತನು ಮೊದಲು ಸುಡುತ್ತದೆ. ನಂತರ ಮರೆವಿನಿಂದ ಕೇಳಿದ ತನು ಸುಡುತ್ತದೆ .

**ಶರಣ :** ಓಹೊ !

'' ತನ್ನ ಮನೆಯ ಕಿಚ್ಚು ತನ್ನ ಸುಟ್ಟಲ್ಲದೆ ನೆರೆ ಮನೆಯ ಸುಡದು ನೋಡಾ '' ಎನ್ನುವ ಸೂತ್ರದ ವಚನವನ್ನು ತಾವು ಇದಕ್ಕಾಗಿಯೇ ಹೇಳಿರುವಿರಾ ಬಸವಣ್ಣ ?

**ಬಸವಣ್ಣ :** ಹೌದು ಶರಣರೇ, ತಾವು ಸರಿಯಾಗಿ ಊಹಿಸಿರುವಿರಿ. ನನ್ನ ಸೂತ್ರ ತಮಗೆ ಸದ್ಬಳಕೆ ಆಯಿತು. ಪ್ರತಿ ನುಡಿಯೂ ಮುತ್ತಿನಂತೆ ಬೆಳಗುತ್ತದೆ . ಸ್ಪಟಿಕದಂತೆ ಹೊಳೆಯುತ್ತದೆ. ಮಾಣಿಕ್ಯದಂತೆ ಪ್ರಕಾಶಿಸುತ್ತದೆ. ನುಡಿ ಮುತ್ತು ಹೌದು ಮಾಣಿಕ್ಯವೂ ಹೌದು, ಸ್ಫಟಿಕವೂ ಹೌದು.

**ಚೆನ್ನಬಸವಣ್ಣ :** ಸಕಲ ಶರಣರಿಗೂ ಶರಣು ಸಮರ್ಪಣೆ ಮಾಡುತ್ತಾ ತಲೆ ಬಾಗಿ ನಮಿಸಿ ಸತ್ಸಂಗಕ್ಕೆ ಮಂಗಳ ಹಾಡಿದರು. ಶರಣರು ಬಸವಣ್ಣನ ಮಾತುಗಳನ್ನು ಮೆಲಕು ಹಾಕುತ್ತಾ ತಮ್ಮ ತಮ್ಮ ಕಾಯಕದಲ್ಲಿ ನಿರತರಾಗಲು ಮನೆ ಕಡೆ ನಡೆದರು.

## ಮರೆವಿನಿಂದ ನುಡಿದ ಶಬ್ದ ಮಾಯಾಮೃಗವಾಗಿ ತನ್ನನ್ನೇ ತಿಂದು ತೇಗುತ್ತದೆ

ಸೂರ್ಯ ತನ್ನ ಪ್ರಕಾಶಮಯವಾದ ಬೆಳಕನ್ನು ತನಗೆ ತಾನೇ ಕತ್ತಲೆ ಗರ್ಭದಲ್ಲಿ ಕೊಂಡೊಯ್ಯುವುದನ್ನು ಸಕಲರು ವೀಕ್ಷಿಸುತ್ತಿದ್ದಾರೆ. ಇದೆಂತಹ ಆಶ್ಚರ್ಯ! ಬೆಳಕು ಕತ್ತಲ ಗರ್ಭದಲ್ಲಿ ಹೋಗಿ ಕಾಣದಂತಾಯಿತೋ ಅಥವಾ ಕತ್ತಲೆಯೇ ತನ್ನ ಹಸಿವನ್ನು ಹಿಂಗಿಸಿಕೊಳ್ಳಲು, ಪ್ರಕಾಶಮಾನವಾದ ಸೂರ್ಯನ ಬೆಳಕನ್ನು ನುಂಗಿ ಹಾಕಿತೋ ಎನ್ನುವಂತೆ ಭಾಸವಾಗುತ್ತದೆ. ಶರಣರು ತಮ್ಮ ದಿನದ ಕಾಯಕವನ್ನು ಮುಗಿಸಿಕೊಂಡು ಮಹಾಮನೆಯಲ್ಲಿ ನಡೆಯುವ ಸತ್ಸಂಗಕ್ಕೆ ತೆರಳುತ್ತಿದ್ದಾರೆ.

ವೇದಿಕೆಯನ್ನು ಅಲಂಕರಿಸಿದ ಅಲ್ಲಮಪ್ರಭು ದೇವರಿಗೆ ಹಾಗೂ ವೇದಿಕೆಯ ಮೇಲೆ ಕುಳಿತ ಬಸವಣ್ಣ, ಚೆನ್ನ ಬಸವಣ್ಣ ಮುಂತಾವದರಿಗೆ ಶರಣು ಶರಣಾರ್ಥಿ ಎಂದು ತಲೆ ಬಾಗುತ್ತಾ ಕೈ ಮುಗಿದು ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಳ್ಳುವರು.

**ಪ್ರಭು :** ಶಬ್ದದ ಬಗ್ಗೆ ನಿನ್ನೆ ಮತ್ತು ಇಂದು ಬೆಳಗಿನ ಸತ್ಸಂಗದಲ್ಲಿ ಸಕಲ ಶರಣರಿಗೆ ಮತ್ತು ನಮಗೆ ತಿಳಿಯುವಂತೆ ಸುವಿವರವಾಗಿ ಹೇಳಿದಿರಿ ಬಸವಣ್ಣ . ತಮಗೆ ಶರಣು ಶರಣಾರ್ಥಿ.

''ಶಬ್ದ ಸೂತಕಿಗಳು ರೌರವ ನರಕಿಗಳು '' ಎನ್ನುವುದು ಸುಳ್ಳಲ್ಲ.

ನನ್ನಿಂದಲೆ ಹೊರಬಂದ ಶಬ್ದ , ನನಗೆ ಅರಿವಾಗದೆ ಮರೆವಿನ ಮಾಯಾ ಮೃಗವಾಗಿ ನನ್ನನ್ನೇ ತಿಂದು ತೇಗುತ್ತದೆ ಎಂದರೆ ನನ್ನ ಮರೆವಿಗೆ ಅದೆಷ್ಟು ಶಕ್ತಿ ಇರಬೇಡಾ? ನನ್ನಲ್ಲಿಯೇ ಹುಟ್ಟಿ ನನ್ನನ್ನೇ ಕೊಂದು ತಿನ್ನುವ ಮರೆವಿನ ಮಾಯಾ ಮೃಗವನ್ನು ನನ್ನ ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಮಾತ್ರ ಅರಿವಿನಿಂದ ಬೇಟೆಯಾಡಿ ಕೊಂದು ಹಾಕಬಲ್ಲ. ಆದರೆ ಮರೆವಿನ ಮಾಯಾ ಮೃಗ ಅರಿವೆಂಬ ಗುರುದೇವನಿಗೆ ಶರಣು ಹೋದಾಗ ಮಾತ್ರ ಸಾಧ್ಯವಾಗುತ್ತದೆ ಇಲ್ಲದಿದ್ದರೆ ಮಾಯಾ ಮೃಗವು ತನುವಿನಲ್ಲಿಯೇ ಇದ್ದು, ತನುವನ್ನು ತಿಂದು ತೇಗುತ್ತದೆ. ಹಾಗೆಯೆ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನೂ ಕೂಡ ತನುವಿನಲ್ಲಿಯೇ ಇದ್ದು, ತನುವನ್ನು ಕಾಪಾಡದೇ ತನುವಿನಲ್ಲಿಯೇ ಉಳಿದು ತನಗೆ ಸಾಕಾದಾಗ ತನು ಬಿಸುಟು ಹೊರ ಹೋಗುತ್ತಾನೆ.

**ಶರಣ :** ಗುರುದೇವ ಹೊರಗೆ ಹೋಗುತ್ತಾನೆ ಎಂದರೆ ಅದು ಹೇಗೆ ಪ್ರಭು? ಪ್ರಾಣ ಇಲ್ಲವಾಗುವುದು ನಮಗೆ ಗೊತ್ತು. ಆದರೆ ತಾವು ಹೇಳಿದುದು ನಮಗೆ ತಿಳಿಯಲಿಲ್ಲ.

**ಪ್ರಭು :** ತನುವಿನಲ್ಲಿಯೇ ತನ್ಮಯವಾಗಿ ಇದ್ದು , ತನುವನ್ನು ತಾಗದೆ , ತನುವನ್ನು ಮನವನ್ನು ಸದಾ ಬೆಳಗುವ ಗುರುದೇವನನ್ನೆ ತನು ಮತ್ತು ಮನ ಮರೆತು ಹೋಗಿವೆ.

**ಶರಣ :** ಅದು ಹೇಗೆ ಪ್ರಭು?

**ಪ್ರಭು :** ಮನ ತನುವಿನ ಸಂಗ ಮಾಡಿ , ತನುವಿಗೆ ಕಾವಿ ಧರಿಸಿ, ರುದ್ರಾಕ್ಷಿ,

ಲಿಂಗಧಾರಣೆ ಮಾಡಿಕೊಂಡು ತನುವನ್ನೇ ಮನ ಗುರುವೆಂದು ಭಾವಿಸಿದೆ . ತನುವಿನಲ್ಲಿಯೇ ತನ್ಮಯವಾಗಿ , ತನು ಮತ್ತು ಮನಕ್ಕೆ ಸದಾ ಪಾಠ ಮಾಡುವ ಅರಿವೆಂಬ ಗುರುದೇವನನ್ನು ತನು ಮನಗಳೆರಡೂ ಮರೆತು ಹೋಗಿವೆ . ತನುವಿನ ಆಯುಷ್ಯ ಮುಗಿಯುವವರೆಗೆ ತನು ಮನಗಳೆರಡೂ ತನುವಿನಲ್ಲಿಯೇ ತನ್ಮಯವಾದ ಗುರುದೇವನಿಗೆ ಶರಣು ಹೋಗದಿದ್ದರೆ, ಗುರುದೇವನಾದರೂ ಏನು ಮಾಡಿಯಾನು? ತನು ಮತ್ತು ಮನಕ್ಕೆ ಅರಿವಿನ ಪಾಠ ಮಾಡಿ ಮಾಡಿ , ತನಗೆ ಸಾಕು ಸಾಕಾಗಿ ತನುವನ್ನು ಬಿಟ್ಟು ಹೋಗುತ್ತಾನೆ. ಆಗ ಶಿವನನ್ನು ಕಳೆದುಕೊಂಡ ತನು ಶವವಾಗುತ್ತದೆ. ಜನ ಶವವನ್ನು ನೋಡಿ 'ಹೋದ 'ಎಂದು ಹೇಳುತ್ತಾರೆ. ಶವವಿದೆ ಆದರೂ ಹೋದವರು ಯಾರು , ಎಂದು ಜನ ತಿಳಿಯದೇ ಹೋಗುತ್ತಾರೆ. ಇವರು ಶಿವ ಇದ್ದಾಗ ಶಿವನನ್ನು ನೋಡದವರು, ಹೋದ ಎನ್ನುವ ಅರ್ಥಗರ್ಭಿತವಾದ ಮಾತು ಮಾತ್ರ ಜನರಲ್ಲಿ ಉಳಿದಿದೆ. ಹೋದವನು ಯಾರು? ಮತ್ತು ಇದ್ದ ಶವ ಅದು ಯಾರದು? ಅದು ಬದುಕಿದ್ದಾಗಲೇ ಅದರಲ್ಲಿದ್ದು 'ಹೋದ ' ಶಿವನನ್ನು ಗುರುತಿಸುವ ತನುವೇ ಜಾಣ ತನು. ಅರಿವಿನ ಶಿವನಿಗೆ ಶರಣಾಗತನಾಗಿ ಶರಣು ಹೋದ ತನುವೇ ಶರಣ ತನು.

**ಶರಣ :** ಮನಸ್ಸು ತನುವನ್ನು ಹಿಡಿದು ಅದಕ್ಕೆ ವೇಷ ಹಾಕಿ ತೋರ್ಪಡುವ ತನುಗಳೆಲ್ಲ ಮನದ ವ್ಯವಹಾರವೇ ಹೇಗೆ?

**ಬಸವಣ್ಣ :** ಸರಿಯಾದ ಪ್ರಶ್ನೆ ಕೇಳಿದಿರಿ ಶರಣರೆ . ಮನ ತನುವನ್ನು ಹಿಡಿದು ಮಾಡುವ ಎಲ್ಲಾ ಕೆಲಸಗಳೂ ಕೂಡಾ ವ್ಯವಹಾರವೇ. ಅಲ್ಲಿ ಲಾಭ ನಷ್ಟದ ಅಳತೆ ಇದೆ. ಮನ ಹೇಳಿದ ಮಾತನ್ನು ತನು ಚಾಚೂ ತಪ್ಪದೇ ಕೇಳುತ್ತದೆ. ಹಗಲಿರುಳೆನ್ನದೆ ಮನ ಹೇಳಿದ ಕಾಯಕದಲ್ಲಿ ಕಾಯ ತೊಡಗುತ್ತದೆ. 'ಕಾಯ' ಶ್ರಮದಿಂದಾಗಿ ತೊಳಲಿ ಬಳಲಿ ಬಾಯಾರಿಕೆಯಿಂದ ವಿಲವಿಲನೆ ಒದ್ದಾಡುತ್ತದೆ. ಆದರೂ ' ತನು 'ಮನ ಹೇಳಿದ ಕೆಲಸವನ್ನು ಪ್ರತಿಭಟಿಸುವುದಿಲ್ಲ. ಒಮ್ಮೆಯೂ 'ತನು'ಆಲೋಚಿಸುವುದಿಲ್ಲ. ನಾನು 'ಮನ 'ಹೇಳಿದಂತೆ ಯಾಕೆ ಕೇಳಬೇಕು ? ಅರಿವು ಹೇಳಿದಂತೆ ಯಾಕೆ ಕೇಳಬಾರದು ಎನ್ನುವ ಸುಳಿವು ಕಾಯಕ್ಕೆ ಹೊಳೆಯುವುದೇ ಇಲ್ಲ. ಅರಿವಿನ ಸುಳಿವು ಕಾಯಕ್ಕೆ ಸಿಕ್ಕರೆ ಸಾಕು ಕಾಯ ಅಜ್ಞಾನದ ಯಾವ ಕಾಯಕದಲ್ಲಿಯೂ ತೊಡಗುವುದಿಲ್ಲ. ಅರಿವು ಹೇಳಿದ ಕಾಯಕವೇ ಕಾಯಕ್ಕೆ ಪ್ರಧಾನವಾಗುತ್ತದೆ. ಆಗ 'ಕಾಯ 'ಅರಿವು ಎನ್ನುವ ಗುರುದೇವನ ಅಕಾಯಕ್ಕೆ ಶರಣು ಹೋಗಿ ಶರಣಾಗತನಾಗುವ ಕಾಯಕವೇ ಪ್ರಧಾನವಾಗುತ್ತದೆ.

**ಶರಣ :** ಬಸವರಸ ಇನ್ನೂ ಸ್ವಲ್ಪ ವಿವರಿಸಿ ಹೇಳಿ ಎನ್ನೊಡೆಯಾ?

**ಬಸವಣ್ಣ :** ಗಿಡ ಮರ ಬಳ್ಳಿ ಪಶು ಪಕ್ಷಿ ಪ್ರಾಣಿ ಯಾವ ಕೆಲಸದಲ್ಲಿಯೂ ತೊಡಗಿಲ್ಲ. ಮನುಷ್ಯ ಮಾತ್ರ ಅವೆಲ್ಲವುಗಳನ್ನು ತನಗಾಗಿ ದುಡಿಯಲು ಹಚ್ಚುತ್ತಾನೆ. ಹಾಗೆಯೇ ತಾನೂ ದುಡಿಯುತ್ತಾನೆ. ತನಗೆ ಅರಿವಾದರೆ ಗಿಡ ಮರದಂತೆ ಪರಮಾನಂದದಿಂದ ಇರುತ್ತಾನೆ. ಅವು ಇದ್ದಲ್ಲಿಯೆ ಇದ್ದು ಹೂವು ಕಾಯಿ ಹಣ್ಣು ಬಿಡುತ್ತವೆ. ಅವುಗಳನ್ನು ಅವು ತಿನ್ನುವುದಿಲ್ಲ ಆ ದರೆ ಮನುಷ್ಯ ಎಲ್ಲವುಗಳನ್ನು ತನಗಾಗಿ ಬಳಕೆ ಮಾಡಿಕೊಳ್ಳುತ್ತಾನೆ.

ಮನುಷ್ಯ ಮನುಷ್ಯನನ್ನೇ ದ್ವೇಷ ಅಸೂಯೆಗಳಿಂದ ಕಿಡಿಕಾರುತ್ತಾನೆ.

ತನುವಿನಲ್ಲಿಯೆ ತನ್ಮಯವಾದ ಅರಿವಿನ ಮಾತು ಕೇಳಿದರೆ ಮರೆವಿನ ಕೆಲಸಗಳನ್ನು ಬಿಡುತ್ತಾನೆ. ತಾನು ಮಾಡುವ ಅಜ್ಞಾನದ ಕೆಲಸಗಳನ್ನು ಬಿಡುವುದೇ ಒಂದು ದೊಡ್ಡ ಕೆಲಸವಾಗುತ್ತದೆ. ಇದು ಸಾಧಕನಿಗೆ ಮಾತ್ರ ಸುಲಭ. ಲೋಕಾನುಭವಿಗೆ ಬಲು ಜಟಿಲ.

**ಚೆನ್ನಬಸವಣ್ಣ :** ಎದ್ದು ನಿಂತು ಹೊತ್ತಾಯಿತು ಸರ್ವರಿಗೂ ಶರಣು ಶರಣಾರ್ಥಿ. ಇಂದಿನ ಸಭೆಯನ್ನು ಇಲ್ಲಿಗೆ ಮುಗಿಸೋಣ ಎಂದು ಸಭೆಗೆ ಮಂಗಳ ಹಾಡಿದರು. ಶರಣರು ಸಕಲ ಶರಣರಿಗೂ ಕೈ ಮುಗಿದು ಶರಣು ಶರಣಾರ್ಥಿ ಎಂದು ಹೇಳಿ ಮನೆಗೆ ನಡೆದರು.

ಸತ್ಯ ಸಂವಾದ - 9

## ಚರ್ಮದೊಳಗಿದ್ದ ಅಜ್ಞಾನ ತನ್ನನ್ನು ಹೆಣ್ಣೆಂದು ಗಂಡೆಂದು ಭಾವಿಸಿದೆ ದೇಹ ದೇವಾಲಯ ಎಂಬುದಕ್ಕೆ ಮರೆತು ಹೋಗಿದೆ

ತಾನೇ ಸೃಷ್ಟಿ ಮಾಡಿದ ಕತ್ತಲನ್ನು ಸೂರ್ಯ ನಿಧಾನವಾಗಿ ನುಂಗುವುದು ಕಾಣುತ್ತಲಿದೆ. ಕಲ್ಯಾಣದಲ್ಲಿ ಜನ ತಮ್ಮ ತಮ್ಮ ಪ್ರಾತಃ ಕಾಲದ ಕೆಲಸದಲ್ಲಿ ತೊಡಗಿದ್ದಾರೆ. ಶರಣರು ಅವಸರವಸರದಿಂದ ಸತ್ಸಂಗಕ್ಕಾಗಿ ಮಹಾ ಮನೆಯೆಡೆಗೆ ನಡೆಯುತ್ತಿದ್ದಾರೆ. ವೇದಿಕೆಯ ಮೇಲೆ ಆಸೀನರಾದ ಚೆನ್ನಬಸವಣ್ಣ, ಬಸವಣ್ಣ ಹಾಗೂ ಪ್ರಭುದೇವರಿಗೆ ಶರಣು ಶರಣಾರ್ಥಿ ಎಂದು ಕೈ ಮುಗಿದು ತಲೆ ಬಾಗಿ ಶರಣರು ತಮ್ಮ ತಮ್ಮ ಆಸನದಲ್ಲಿ ಕುಳಿತುಕೊಳ್ಳುತ್ತಾರೆ.

**ಪ್ರಭು** : ಬಸವಣ್ಣ ತಾವು ಶರಣರಿಗೆ ಕಣ್ಣು ಮತ್ತು ಕಿವಿಯಲ್ಲಿರುವ ಸತ್ಯವನ್ನು ಇದುವರೆಗೆ ವಿವರಿಸಿ ಹೇಳಿದಿರಿ. ಅಂತೆಯೇ ತಮ್ಮ ವಚನ ಒಂದರಲ್ಲಿ '' ಚರ್ಮದೊಳಗೆ ಚರ್ಮವಿದ್ದು ಸ್ಪರ್ಷಿಸಲೇಕರಿಯರಯ್ಯಾ'' ಎಂದು ಹೇಳಿರುವಿರಿ ಅದನ್ನು ಕೂಡಾ ವಿವರಿಸಿ ಸಕಲ ಶರಣರಿಗೆ ಮನದಟ್ಟಾಗುವಂತೆ ಹೇಳುವಿರಾ!

**ಬಸವಣ್ಣ** : ಅಪ್ಪಣೆ ಪ್ರಭು, ಶರಣರಿಗೆ ತಲೆಬಾಗಿ ಕೈ ಮುಗಿದು ಶರಣು ಶರಣಾರ್ಥಿ ಶರಣರೇ ಎಂದು ಹೇಳುತ್ತಾ ವೇದಿಕೆಯ ಕಡೆ ಮುಖ ಮಾಡಿ ಪ್ರಭುದೇವರಿಗೂ ಚೆನ್ನಬಸವಣ್ಣನವರಿಗೂ ಶರಣು ಶರಣಾರ್ಥಿ ಎಂದು ಕೈ ಮುಗಿಯುತ್ತಾರೆ.

'ಚರ್ಮ' ಇಡೀ ತನುವಿನಲ್ಲಿದ್ದ ಪದಾರ್ಥ ಸೋರದಂತೆ ಸುಂದರವಾಗಿ ತನಗೆ ತಾನೇ ಕವಚವಾಗಿ ತನುವನ್ನು ಹೆಣೆದುಕೊಂಡಿದೆ. ತನುವಿಗೆ ಸ್ಪರ್ಶ ಜ್ಞಾನವನ್ನು ನೀಡುತ್ತಾ ಇಡೀ ತನುವನ್ನು ಸೌಂದರ್ಯದಿಂದ ಕಾಣಲು ಕಾರಣವಾಗಿದೆ. ನೋಡಲು 'ಚರ್ಮ 'ಕಾಣುತ್ತದೆ. ಕಾಣುವ ಚರ್ಮ, ನೋಡುವ ಕಣ್ಣಿಗೆ ಹೆಣ್ಣೆಂದು ಗಂಡೆಂದು ಕಾಣಿಸಿಕೊಂಡು , ನೋಡುವ ಕಣ್ಣಿಗೆ ಮೋಸ ಮಾಡುವ ಕಾಯಕದಲ್ಲಿ ತೊಡಗಿದೆ. ನೋಡುವ ಕಣ್ಣು ಮೋಸಕ್ಕೊಳಗಾಯಿತೊ ಅಥವಾ ಕಣ್ಣಿಗೆ ಕಾಣುವ ಚರ್ಮ ನೋಡುವ ಕಣ್ಣನ್ನು ಮೋಸ ಮಾಡಿತೋ ಎಂಬುದನ್ನೂ ಊಹಿಸಲಾಗದ ಅಜ್ಞಾನ, ಕಣ್ಣು ಮತ್ತು ಚರ್ಮದ ಮಧ್ಯೆ ನಾಟ್ಯ ಮಾಡುತ್ತಲಿದೆ.

**ಪ್ರಭು** : ಆಹಾ! ಎಂಥ ಸೂತ್ರವನ್ನು ಹೇಳಿದಿರಿ ಬಸವಣ್ಣ ! ನಿಮ್ಮ ಸೂತ್ರ ಇದುವರೆಗೂ ಯಾರ ಗಮನಕ್ಕೂ ಬಂದಿಲ್ಲ. ಮುಂದುವರೆಸಿ ಎಂದು ಕುತೂಹಲದಿಂದ ಹೇಳಿದರು .

**ಚೆನ್ನ ಬಸವಣ್ಣ** : ಪ್ರಭುದೇವರಿಗೆ ಧ್ವನಿಗೂಡಿಸಿ ಹೌದು ಬಸವಣ್ಣನವರೆ ಇಲ್ಲಿ ಕುಳಿತ ಶರಣ ಕುಲ ಮತ್ತು ನಾವು ಧನ್ಯರಾದೆವು ಎಂದು ಹೇಳುತ್ತಾ ಬಸವಣ್ಣನವರಿಗೆ ಕೈ ಮುಗಿದರು .

**ಶರಣ** : ಅದು ಹೇಗೆ ಬಸವಣ್ಣ? ಸ್ವಲ್ಪ ವಿವರಿಸಿ ಹೇಳಿ, ನಾವು ಇದುವರೆಗೆ ಚರ್ಮ ನೋಡಿಯೇ ಹೆಣ್ಣು, ಗಂಡು ಎಂದು ನಿರ್ಧರಿಸಿದ್ದೇವೆ. ಆದರೆ ಚರ್ಮ ಹೆಣ್ಣು ಅಲ್ಲ, ಗಂಡು ಅಲ್ಲ ಎನ್ನುವ ಅರ್ಥದಲ್ಲಿ ನೀವು ಹೇಳಿದಿರಿ ಕಣ್ಣು ಮೋಸಕ್ಕೊಳಗಾಯಿತೆ? ಅಥವಾ ಚರ್ಮ ಮೋಸಕ್ಕೊಳಗಾಯಿತೆ? ಎನ್ನುವ ತಮ್ಮ ಮಾತು ನಮ್ಮೆಲ್ಲರನ್ನು ಗಾಬರಿಗೊಳಿಸಿದೆ.

**ಬಸವಣ್ಣ** : ಶರಣರೇ, ನಿಧಾನವಾಗಿ ಆಲಿಸಿ ತಮ್ಮ ಚರ್ಮ ಮುಟ್ಟಿಕೊಂಡು ಶರಣರಿಗೆ ತೋರುತ್ತಾ ಇದೇನು ಎಂದು ಕೇಳಿದರು ?

**ಶರಣರು** : (ಒಕ್ಕೊರಲಿನಿಂದ) 'ಚರ್ಮ ' ( ಎಂದು ಹೇಳಿದರು)

**ಬಸವಣ್ಣ** : ಪುನಃ 'ಚರ್ಮ' ಮುಟ್ಟಿಕೊಂಡು ಇದು ಹೆಣ್ಣೊ ಗಂಡೊ ಎಂದು ಕೇಳಿದರು.

**ಶರಣರು** : ಅದು 'ಚರ್ಮ' ಬಸವಣ್ಣ , ಅದು ಹೆಣ್ಣು ಅಲ್ಲ ಗಂಡೂ ಅಲ್ಲ ಎಂದು ಹೇಳಿದರು.

**ಬಸವಣ್ಣ** : ಹಾಗಾದರೆ 'ಚರ್ಮ' ವನ್ನು ನೋಡುವ 'ಕಣ್ಣು ' ಹೆಣ್ಣೋ ಗಂಡೋ!

**ಶರಣರು** : 'ಕಣ್ಣು ' ಕೂಡ ಹೆಣ್ಣು ಅಲ್ಲ ಗಂಡೂ ಅಲ್ಲ ಎಂದು ಶರಣರು ಕೂಗಿ ಹೇಳಿದರು.

**ಬಸವಣ್ಣ** : ಶರಣರೇ , ಹಾಗಾದರೆ ಏನು ನೋಡಿ ಹೆಣ್ಣು ಎಂದಿರಿ? ಏನು ನೋಡಿ ಗಂಡು ಎಂದಿರಿ?

ನೋಡುವ 'ಕಣ್ಣು ' ಸ್ಪರ್ಶಿಸುವ ಚರ್ಮ ಹೆಣ್ಣು ಅಲ್ಲ ಗಂಡು ಅಲ್ಲವೆಂದು ತಾವು ಹೇಳಿದ ಮೇಲೆ ದೇಹದೊಳಗೆ ಹರಿಯುವ ರಕ್ತ ಮಾಂಸ ಮೂಳೆ ಮಜ್ಜೆ ಮೇದಸ್ಸು ಕೂಡ ಗಂಡೂ ಅಲ್ಲ ಹೆಣ್ಣು ಅಲ್ಲ. ದೇಹದ ಮೇಲೆ ಬೆಳೆದ ನಖ ರೋಮ ಕೂಡ ಹೆಣ್ಣು ಅಲ್ಲ ಗಂಡೂ ಅಲ್ಲ. ತನುವಿನಲ್ಲಿ ತನ್ಮಯವಾದ ಆತ್ಮ ಕೂಡ ಹೆಣ್ಣು ಅಲ್ಲ ಗಂಡೂ ಅಲ್ಲ. ತನುವನ್ನು ಆವರಿಸಿದ ಮನ ಮಾತ್ರ ಹೆಣ್ಣು.

**ಶರಣ** : ಬಸವಣ್ಣ ಹಾಗಾದರೆ ಲೋಕ ತನುವನ್ನು ಹೆಣ್ಣು ಎಂದು ಗಂಡು ಎಂದು ಭಾವಿಸಿದೆಯಲ್ಲ. ಇದು ತಪ್ಪೇ!

**ಬಸವಣ್ಣ** : ತಾವು ಹೇಳಿದುದು ಲೋಕಾನುಭವದ ಮಾತು. ತಮಗೆ ಈ ಹಿಂದೆ ಅನುಭವಕ್ಕೆ ಬಂದ ಮಾತು ಸ್ವಾನುಭಾವದ ಮಾತು. ಸ್ವಾನುಭಾವದಿಂದ ತನುವನ್ನು ನೋಡಿದಾಗ ಅದು ಹೆಣ್ಣು ಅಲ್ಲ ಗಂಡೂ ಅಲ್ಲ ಎಂದು ತಾವೇ ಈ ಹಿಂದೆ ನಿರ್ಧರಿಸಿರುವಿರಿ.

**ಶರಣರು** : ಹೌದು ಬಸವಣ್ಣ .

ಹಾಗಾದರೆ ನಾವು ಲೋಕಾನುಭಾವದ ಮಾತು ಮರೆತು ಸ್ವಾನುಭಾವದ ಮಾತು ಮಾತ್ರ ಆಡಬೇಕು . ಈ ಸ್ವಾನುಭಾವ ನಮಗೆ ರೂಢಿಯಾಗಬೇಕು. ನಾವು ಧನ್ಯರಾದೆವು ಬಸವಣ್ಣ .

**ಬಸವಣ್ಣ :** ಕಣ್ಣು ಮನವೆಂಬ ಅಜ್ಞಾನದ ದೃಶ್ಯದಿಂದ ಚರ್ಮವನ್ನು ನೋಡಿ , ತನಗೆ ತಾನೆ ಮೋಸ ಹೋಗಿದೆ. ಈ ಮೋಸದ ದೃಶ್ಯವನ್ನೆ ಮನ ಚರ್ಮಕ್ಕೆ ಕಳಿಸಿದ್ದರಿಂದ 'ಚರ್ಮ' ಕೂಡ ಮನದ ಅಜ್ಞಾನದ ದೃಶ್ಯದಿಂದಾಗಿ ಮೋಸಕ್ಕೆ ಒಳಗಾಗಿ 'ಚರ್ಮ' ವಿಕೃತ ಭಾವನೆಗೆ ಒಳಗಾಗುತ್ತದೆ. ಹೀಗಾಗಿ ಕಾಯದ ಕಣಕಣದಲ್ಲಿ ಭರಿತವಾದ ಪರಮಾತ್ಮ ದ್ರವ್ಯ ಬೀಜಗಳು ಕಾಯದಿಂದ ತನಗೆ ತಾನೇ ಹೊರಬಂದು ಕಾಯ ಪುನಃ ತನ್ನ ವಿಕೃತ ಭಾವನೆಯನ್ನು ಕಳೆದುಕೊಳ್ಳುತ್ತದೆ.

**ಶರಣ :** ಗಂಡು ಹೆಣ್ಣು ಕೂಡುವ ಕೂಟವನ್ನು ಲೋಕ ಸುಖವೆಂದು ಭಾವಿಸಿದೆಯಲ್ಲ ಬಸವಣ್ಣ.

**ಬಸವಣ್ಣ :** ಸುಖ ಎಂದರೆ ಒಮ್ಮೆ ಬಂದು ಒಮ್ಮೆ ಇಲ್ಲವಾಗುವುದಲ್ಲ. ಸುಖ ಎಂದರೆ ನಿರಂತರ ಸುಖ; ಅದನ್ನು ಪರಮಸುಖ ಎಂದು ಕರೆಯಬಹುದು.

**ಶರಣ :** ಹಾಗಾದರೆ ಗಂಡು ಹೆಣ್ಣು ಕೂಡುವುದರಿಂದ ಸುಖವಾಗುತ್ತದೆಯಲ್ಲ ಬಸವಣ್ಣ.

**ಬಸವಣ್ಣ :** ಅದು ಸುಖವಲ್ಲ ; ಕಾಯದ ಕಣ ಕಣದಲ್ಲಿ ಸಂಗಮವಾದ ಪರಮಾತ್ಮನ ಬೀಜ ಕಣಗಳು ದ್ರವ್ಯರೂಪದಲ್ಲಿ ಹೊರಗೆ ಬರುವದರಿಂದ ಕಾಯಕ್ಕೆ ನೋವಾಗುತ್ತದೆ. ಒಂದು ರೀತಿಯ ದಣಿವಾಗುತ್ತದೆ. ಈ ದಣಿವಿಕೆಯನ್ನೇ ಕಾಯ, ಕಾಯವನ್ನು ಅವರಿಸಿದ ಮನ ಸುಖವೆಂದು ತಪ್ಪಾಗಿ ತಿಳಿದಿದೆ.

**ಶರಣ :** ಇದನ್ನು ಮತ್ತೊಮ್ಮೆ ವಿವರಿಸಿ ಹೇಳಿ ಬಸವರಸ.

**ಬಸವಣ್ಣ :** ಕಾಯದ ಯಾವುದೇ ಭಾಗಕ್ಕೆ ಸಿಬುರು ಚುಚ್ಚಿದಾಗ ಒಳಗೆ ಹುಣ್ಣಾಗಿ ಕೀವಾಗುತ್ತದೆ. ಅದು ಗುರುಳೆಯಾಗಿ ಒಡೆದು ಹೊರ ಸೋರಿದಾಗ ಕಾಯಕ್ಕೆ ಸುಖವಾದಂತೆ ಭಾಸವಾಗುತ್ತದೆ. ಅದು ನೋವೋ ಅಥವಾ ಸುಖವೊ ಎಂಬುದನ್ನು ತಾವೆ ಸ್ವಾನುಭಾವದಿಂದ ಆಲೋಚನೆ ಮಾಡಿ ಶರಣರೆ.

**ಶರಣ :** ಕಾಯ ಸ್ಪರ್ಶ ಸುಖ ಬಯಸುವುದು ತಪ್ಪೆ ಬಸವಣ್ಣ?

**ಬಸವಣ್ಣ :** ತಪ್ಪಲ್ಲ.

ಕಾಯದಲ್ಲಿ ಅರಿವು ಎಂಬ ಗುರುದೇವ ತನ್ಮಯವಾಗಿರುವುದರಿಂದ ಕಾಯಕ್ಕೆ ಅರಿವಿದೆ.

ಅರಿವು ಕಾಯಕ್ಕೆ ಬಳಕೆಯಾಗದಿದ್ದರೆ ತನ್ನಂತೆ ಇರುವ ಅರಿವೆಂಬ ಮತ್ತೊಬ್ಬ ಗುರುದೇವನನ್ನು ಪಡೆಯುವ ಬಯಕೆ ಕಾಯಕ್ಕೆ ಆಗುತ್ತದೆ.

ಆಗ ತನಗೆ ತಾನೆ ಎರಡೂ ಕಾಯಗಳು ಅರಿವೆಂಬ ಗುರುದೇವನನ್ನು ಪಡೆಯಲು ಉತ್ಸುಕವಾಗುತ್ತವೆ . ಆಗ ಎರಡೂ ಕಾಯಗಳ ಮೂಲಕ ಅರಿವೆಂಬ ಗುರುದೇವನ ಬೀಜಗಳು ದ್ರವ್ಯರೂಪದಿಂದ ಕಾಯದ ಗರ್ಭದಲ್ಲಿ ಹೊಕ್ಕು ಬೀಜ ಬೀಜದಲ್ಲಿ ಸಂಗಮವಾಗಿ ಪಿಂಡವಾಗುತ್ತದೆ. ಆ ಪಿಂಡವೆ ಬ್ರಹ್ಮಾಂಡವಾಗಿ ಗರ್ಭದಲ್ಲಿ ಬೆಳೆದು, ಕಾಯ ಗುರುದೇವನ ರೂಪ ಧರಿಸಿ ಗರ್ಭದಿಂದ ಹೊರಗೆ ಬರುತ್ತದೆ.

**ಪ್ರಭು :** ಬಸವಣ್ಣ ಸೃಷ್ಟಿಯ ಅದ್ಭುತವಾದ ರಹಸ್ಯವನ್ನೆ ನಮಗೆಲ್ಲಾ ತಿಳಿಯಪಡಿಸಿದಿರಿ.

ನಾವೆಲ್ಲ ಧನ್ಯರಾದೆವು ಬಸವಣ್ಣ .

ಹೀಗಾಗಿಯೆ ತಾವು ತ್ವಕ್ಕಿನೊಳಗೆ ತ್ವಕ್ಕಿದ್ದು ಸ್ಪರ್ಶಿಸಲು ಏಕೆ ಅರಿಯರಯ್ಯ ಎಂದು ತನು ಕುಲವನ್ನು ಪ್ರಶ್ನಿಸಿರುವಿರಿ.

ಚೆನ್ನಬಸವಣ್ಣ ಈ ಕುರಿತು ತಾವು ಏನಾದರೂ ಹೇಳುವಿರಾ?

**ಚೆನ್ನ ಬಸವಣ್ಣ :** ತ್ವಙ್ಮಯವಾಗಿಹುದು 'ಓಂ' ಕಾರ,

ರುದಿರಮಯವಾಗಿಹುದು 'ನ' ಕಾರ,

ಮಾಂಸಮಯವಾಗಿಹುದು 'ಮ' ಕಾರ,

ಅಸ್ತಿಮಯವಾಗಿಹುದು 'ಶಿ'ಕಾರ,

ಮಜ್ಜಾಮಯವಾಗಿಹುದು 'ವ 'ಕಾರ,

ಮೇದೋಮಯವಾಗಿಹುದು 'ಯ'ಕಾರ .

ಹೀಗೆ ಪ್ರತಿ ಕಾಯವು ಓಂಕಾರವೇ ಆಗಿದೆ. 'ಓಂನಮಃ ಶಿವಾಯ' ಎಂಬ ಷಡಕ್ಷರ ಮಂತ್ರದ ಕಾಯ , ಮತ್ತೊಂದು ಮಂತ್ರರೂಪದ ಕಾಯದೊಂದಿಗೆ ಕೂಡಿದಾಗ 'ಓಂ ನಮಃ ಶಿವಾಯ ' ಎಂಬ ಪೂರ್ಣಪ್ರಮಾಣದ ಕಾಯವೇ ಕಾಯದ ಗರ್ಭದಿಂದ ಹೊರಬರುವುದು.

ಬಸವಣ್ಣನವರು ಬಹಳ ಅರ್ಥಗರ್ಭಿತವಾಗಿ ತ್ವಕ್ಕನ್ನು ತ್ವಙ್ಮಯ ವೆಂಬ ಓಂಕಾರದಿಂದ ಪರಿಚಯಿಸಿದ್ದಾರೆ.

**ಪ್ರಭು** : ಬಸವಣ್ಣನವರ ಮಾತನ್ನು ಅತ್ಯಂತ ವಿಶೇಷವಾಗಿ ಮನದಟ್ಟಾಗುವಂತೆ ಹೇಳಿದಿರಿ ಚನ್ನಬಸವಣ್ಣ.

ತಾವು ಇಡೀ ಬ್ರಹ್ಮಾಂಡದಲ್ಲಿರುವ ಕಾಯಗಳ ಕವಚಕ್ಕೆ ಓಂಕಾರವೆಂದು ಹೆಸರು ಕೊಟ್ಟಿರಿ , ತ್ವಕ್ಕಿನ ಅಜ್ಞಾನ ಕಳೆದುಕೊಳ್ಳುವ ಅರಿವಿನ ಸೂತ್ರ ತ್ವಕ್ಕಿನಲ್ಲಿಯೇ (ಚರ್ಮ) ಇದೆ ಎಂದು ತೋರಿಸಿಕೊಟ್ಟು, ಪ್ರಪಂಚದಲ್ಲಿರುವ ಕಾಯಗಳಿಗೆ ಅನುಕೂಲ ಮಾಡಿದಿರಿ. ಧನ್ಯ ಧನ್ಯ ಚೆನ್ನಬಸವಣ್ಣ, ನಾನು ಧನ್ಯ. ನನ್ನಂತೆ ಇರುವ ಸಕಲ ಕಾಯಗಳೂ ಧನ್ಯ ಚನ್ನಬಸವಣ್ಣ .

ಎಂದು ಹೇಳುತ್ತಾ ಸಭೆಗೆ ಮಂಗಳ ಹಾಡಿದರು .

# ಮೂಗಿಗೆ ಸುಗಂಧ ದುರ್ಗಂಧ ಮಾತ್ರ ಗೊತ್ತು ಅರಿವಿನ ಪರಿಮಳ ಗೊತ್ತಾಗುತ್ತಿಲ್ಲ

ಸೂರ್ಯಾಸ್ತವಾಗುತ್ತಲಿದೆ . ಶರಣರು ಮಹಾ ಮನೆಯತ್ತಾ ಲಗು ಬಗೆಯಿಂದ ಹೊರಡುತ್ತಲಿದ್ದಾರೆ. ವೇದಿಕೆಯ ಮೇಲೆ ಚೆನ್ನಬಸವಣ್ಣ ಬಸವಣ್ಣ ಪ್ರಭುದೇವರು ಕುಳಿತಿದ್ದಾರೆ. ಅವರೆಲ್ಲರಿಗೂ ಶರಣೆನ್ನುತ್ತಾ ಕೈ ಮುಗಿದು ಶರಣರೆಲ್ಲರೂ ಆಸೀನರಾದರು.

**ಪ್ರಭುದೇವರು :** ಶರಣರಿಗೆ ಬಸವಣ್ಣ ಚನ್ನಬಸವಣ್ಣನವರಿಗೆ ಕೈ ಮುಗಿದು ಶರಣು ಶರಣಾರ್ಥಿ ಎಂದು ಹೇಳುತ್ತಾ .

ಬಸವಣ್ಣ ,ತಾವು ದೇಹದಲ್ಲಿರುವ ಪದಾರ್ಥಗಳು ಸೋರದಂತೆ ಸುಂದರವಾಗಿ ಹೆಣೆದುಕೊಂಡ ಚರ್ಮದ ಬಗ್ಗೆ ಸವಿವರವಾಗಿ ಹೇಳಿದ್ದು, ನಮ್ಮೆಲ್ಲರಿಗೂ ಅತ್ಯಂತ ಪರಮಾನಂದವಾಯಿತು.

ಎಂತಹ ಅಧ್ಭುತವಾದ ರಹಸ್ಯ ಪ್ರತಿ ದೇಹದಲ್ಲಿಯೂ ಬಚ್ಚಿಟ್ಟುಕೊಂಡಿದೆಯಲ್ಲ ಎಂದು ಆಶ್ಚರ್ಯವೂ ಆಯಿತು. ತಮಗೆ ಧನ್ಯವಾದಗಳು.

ಇಂದು ತಾವು ಘ್ರಾಣದೊಳಗೆ ಘ್ರಾಣವಿದ್ದು ಮೂಸಿಸಲೇಕೆ ಅರಿಯರಯ್ಯ ಎಂದು ತಮ್ಮ ವಚನದೊಳಗೆ ಪ್ರಾಸ್ತಾಪಿಸಿದ್ದೀರಿ. ಮೂಗಿನ ಬಗ್ಗೆ ತಾವು ಸವಿವರವಾಗಿ ಹೇಳಿ ಬಸವಣ್ಣ ಎಂದು ಕೈ ಮುಗಿದು ಬೇಡಿಕೊಂಡರು.

**ಬಸವಣ್ಣ:** ಅಪ್ಪಣೆ ಪ್ರಭು ಎಂದು ಎದ್ದು ನಿಂತು ಸಕಲ ಶರಣರಿಗೆ ಪ್ರಭುದೇವರಿಗೂ ಚನ್ನಬಸವಣ್ಣನವರಿಗೂ ಕೈ ಮುಗಿದರು.

''ಘ್ರಾಣದೊಳಗೆ ಘ್ರಾಣವಿದ್ದು, ಮೂಸಿಸಲೇಕರಿಯರಯ್ಯ''

ಇದನ್ನು ನಾನೇ ಹೇಳಬೇಕೆಂದೇನೂ ಇಲ್ಲ. ಮೂಗನ್ನು ಮೂಗಿನ ಮೂಲಕ ಆಲಿಸಿದರೆ, ಮೂಗಿಗೆ ಸತ್ಯ ಹೊಳೆಯುತ್ತದೆ. ಏಕೆಂದರೆ ಮೂಗಿನಲ್ಲಿ ಅರಿವೆಂಬ ಗುರುದೇವನ ಮೂಗೊಂದಿದೆ.

ಹಾಗೆಯೇ ಮನವೆಂಬ ನನ್ನದೇ ಆದ ಅಜ್ಞಾನದ ಮೂಗೊಂದಿದೆ.

ಸ್ಥೂಲ ಮೂಗು ಈ ಎರಡೂ ಮೂಗುಗಳಿಗೆ ಉಪಕರಣವಾಗಿದೆ.

**ಶರಣ :** ಇದೇನಿದು ಆಶ್ಚರ್ಯ!

ಈ ರಹಸ್ಯ ನಮಗಷ್ಟೆ ಅಲ್ಲ ಇಡೀ ಜಗತ್ತಿಗೆ ಕೂಡಾ ಗೊತ್ತಿಲ್ಲದ ವಿಷಯವನ್ನು ತಾವು ಹೇಳುತ್ತಿರುವಿರಲ್ಲ ಬಸವಣ್ಣ !

ಮನುಷ್ಯನಿಗಿರುವ ಈ ಮೂರು ಮೂಗುಗಳ ಪರಿಚಯವನ್ನು ನಮಗೆ ಮಾಡಿಕೊಡಿ ಬಸವಣ್ಣ.

ಹಾಗೆಯೇ ಅವುಗಳ ಕಾರ್ಯವನ್ನು ತಿಳಿ ಹೇಳಿ.

**ಬಸವಣ್ಣ :** ಕಾಣುವ ಸ್ಥೂಲ ಮೂಗನ್ನು ಮನೋಮಯವಾದ ಮೂಗು ಆವರಿಸಿದೆ.

ಈ ಮೂಗು ಸ್ಥೂಲ ಮೂಗಿನೊಂದಿಗೆ ಸಂಗ ಮಾಡಿದೆ.

ಹೀಗಾಗಿ ಪ್ರಪಂಚದಲ್ಲಿರುವ ಕಾಯಗಳು ಹೊಂದಿದ ಮೂಗುಗಳಿಗೆ ಸುಗಂಧ ಮತ್ತು ದುರ್ಗಂಧ ಮಾತ್ರ ಗೊತ್ತಿದೆ.

ಪರಿಮಳ ಗೊತ್ತಿಲ್ಲ.

**ಶರಣ :** ಹಾಗಾದರೆ ಪರಿಮಳ ಯಾರಿಗೆ ಗೊತ್ತಿದೆ ?

ಯಾವ ಮೂಗಿಗೆ ಗೊತ್ತಿದೆ ಬಸವಣ್ಣ !

ಪರಿಮಳ ಎನ್ನುವುದು ಸುಗಂಧವಲ್ಲವೇ ಹೇಗೆ ?

**ಬಸವಣ್ಣ:** ಸುಗಂಧ ದುರ್ಗಂಧ ಹೊರತಾದುದೆ ಪರಿಮಳ.

ಸಾಕಷ್ಟು ಪ್ರಾಣಿಗಳಿಗೆ ಮೂಗು ಸಹಜವಾಗಿಯೆ ಇದೆ .

ಮನುಷ್ಯನಿಗೊಂದೆ ಮೂಗು ವಿಕೃತಗೊಂಡಿದೆ .

ಸಹಜವಾಗಿರುವ ಮೂಗಿನ ಪರಿಚಯ ಮನೋಮಯವಾದ ಮೂಗಿಗೆ ಗೊತ್ತಿಲ್ಲ,

ಹೀಗಾಗಿ ಅದು ಸದಾ ಸುಗಂಧವನ್ನೆ ಬಯಸುತ್ತದೆ.

**ಶರಣ :** ಇದರಲ್ಲಿ ತಪ್ಪೇನಿದೆ ಬಸವಣ್ಣ !

**ಬಸವಣ್ಣ:** ಸುಗಂಧ ದುರ್ಗಂಧ ಎನ್ನುವುದು ಇಲ್ಲ , ಸುಗಂಧ ದುರ್ಗಂಧ ವನ್ನು ಮೂಸಿಸುವ ಮೂಗಿಗೆ ವಸ್ತುವಿನ ಸತ್ಯ ತಿಳಿಯದ್ದಕ್ಕಾಗಿ ಮೂಗು ಮೋಸಕ್ಕೆ ಒಳಗಾಗಿದೆ.

**ಶರಣ :** ಎಂತಹ ಆಶ್ಚರ್ಯದ ಮತ್ತು ರಹಸ್ಯದ ಮಾತು ಹೇಳಿದಿರಿ ಬಸವಸರಸ! ಮೂಗು ಹೇಗೆ ವಸ್ತುವಿನ ಸತ್ಯ ತಿಳಿಯಬೇಕು?

**ಬಸವಣ್ಣ:** ಬೆಳಿಗ್ಗೆ ಊಟ ಮಾಡಿದ ಪದಾರ್ಥ ಮೂಗಿಗೆ ಹಿತವಾಗಿತ್ತು . ಉಂಡ ಪದಾರ್ಥ ಜೀರ್ಣವಾಗಿ ಪುನಹ ಬೆಳಿಗ್ಗೆ ಮತ್ತೊಂದು ಪದಾರ್ಥವಾಗಿ ಹೊರಬಂದಾಗ ಮೂಗು ಆ ಪದಾರ್ಥವನ್ನು ದುರ್ಗಂಧವೆಂದು ಅಸಹ್ಯ ಪಟ್ಟುಕೊಳ್ಳುತ್ತದೆ.

**ಶರಣ :** ಇದು ಸತ್ಯವಲ್ಲವೆ ಬಸವಣ್ಣ, ಬೆಳಗಿನ ಪದಾರ್ಥ ಮೂಗಿಗೆ ಹಿತವೆನಿಸಿತ್ತು. ಜೀರ್ಣವಾಗಿ ಮಲರೂಪದಲ್ಲಿ ಹೊರಬಂದಾಗ ಮೂಗಿಗೆ ದುರ್ಗಂಧವಾಯಿತು.

**ಬಸವಣ್ಣ:** ತಾವು ಹೇಳಿದ ಮಾತು ಸಕಲ ಮೂಗುಗಳಿಗೂ ವೇದ್ಯವಾದರೂ ಅದು ಸತ್ಯವಲ್ಲ ಶರಣರೆ . ನಾವು ಆಲೋಚಿಸುವುದರಲ್ಲಿ ಹಿಂದೆ ಬಿದ್ದಿದೇವೆ.

**ಶರಣ :** ಅದು ಹೇಗೆ ಬಸವಣ್ಣ?

**ಬಸವಣ್ಣ :** ನಾವು ಬೆಳಿಗ್ಗೆ ಸೇವಿಸಿದ ಪದಾರ್ಥವನ್ನು ಹಸು ನಾಯಿ ಹಂದಿಗೆ ಹಾಕಿದರೆ ಇವೆಲ್ಲವೂ ನಾವು ಉಂಡಂತೆಯೇ ಉಣ್ಣುತ್ತವೆ. ಹಾಗೆಯೇ ನಾವು ಉಂಡು ಮಲರೂಪದಲ್ಲಿ ಹೊರ ಚೆಲ್ಲಿದ ಪದಾರ್ಥವನ್ನು ಆ ಪ್ರಾಣಿಗಳು ಇನ್ನೂ ಸುಂದರವಾಗಿ ಉಣ್ಣುವವು .

ಹಸು, ಹಂದಿ, ನಾಯಿಯ ಮೂಗಾದರೇನು ಮನುಷ್ಯರ ಮೂಗಾದರೇನು?

ಮನುಷ್ಯನ ಮೂಗು ವಿಕೃತಗೊಂಡಿದೆ. ಮೂಗು ತನ್ನ ಸಹಜವಾದ ಮೂಗನ್ನು ಮೂಗಿನಲ್ಲಿಯೇ ಬಚ್ಚಿಟ್ಟುಕೊಂಡಿದೆ. ಮನೋಮಯವಾದ ಮೂಗಿಗೆ ಅರಿವೆಂಬ ಗುರುದೇವನ ಸಹಜವಾದ ಮೂಗು ಪರಿಚಯವಾಗುತ್ತಿಲ್ಲ.

**ಶರಣ :** ಇನ್ನೂ ಸವಿವರವಾಗಿ ಸರಳವಾಗಿ ಹೇಳುವಿರಾ ಬಸವಣ್ಣ.

**ಬಸವಣ್ಣ :** ಆಗಲಿ ಶರಣರೆ, ಜಲಕ್ಕೆ ವಾಸನೆ ಇಲ್ಲ ,ರುಚಿಯಿಲ್ಲ , ಬಣ್ಣವಿಲ್ಲ, ಹಾಗೆಯೇ ಸಮತತ್ವದಿಂದ ಕೂಡಿದೆ .

ಜಲ ಹರಿದು ಮಲ್ಲಿಗೆ, ಸಂಪಿಗೆ, ಬಕುಳ , ಚಂಪಕ ನಾನಾ ವಿಧದ ಪುಷ್ಪಗಳ ಸುಗಂಧ ಮೂಗಿಗೆ ಪರಿಚಯವಾಯಿತು. ಅರಳಿದ ಹೂವು ಸುಗಂಧ ಬೀರುವುದು ಮೂಗಿಗೆ ಗೊತ್ತಾಗುತ್ತದೆ.

ಜಲಕ್ಕೆ ವಾಸನೆಯಿಲ್ಲ . ಜಲ ಹರಿದ ಸಸಿಗೂ ವಾಸನೆಯಿಲ್ಲ. ಅದರ ಮೊಗ್ಗಿಗೂ ವಾಸನೆಯಿಲ್ಲ ಹೂವಿಗೆ ಮಾತ್ರ ಸುಗಂಧದ ವಾಸನೆ ಇದೆ. ಹೂ ಬಾಡಿ ಕೊಳೆತಾಗ ದುರ್ಗಂಧ ಸೂಸುತ್ತದೆ .

ಪದಾರ್ಥ ಒಂದೇ , ಆದರೂ ಮೊಗ್ಗು ವಾಸನೆಯಿಲ್ಲ , ಅರಳಿದ ಹೂವು ಸುಗಂಧ ಬೀರುತ್ತದೆ. ಕೊಳೆತಾಗ ದುರ್ಗಂಧ ಬೀರುತ್ತದೆ ಎಂದು ಮನೋಮಯವಾದ ಮೂಗಿಗೆ ಪರಿಚಯವಿದೆ .

ಹೀಗಾಗಿ ಸುಗಂಧ ದುರ್ಗಂಧ ಎನ್ನುವುದು ಸುಳ್ಳು. ಅದು ಮನೋಮಯವಾದ ಮೂಗಿನ ಕಲ್ಪನೆ . ಮೊಗ್ಗಲ್ಲೇ ಬಚಿಟ್ಟುಕೊಂಡ ಅರಿವೆಂಬ ಗುರುದೇವನ ಮೂಗಿಗೆ , ಜಲಕ್ಕೆ ಹೇಗೆ ವಾಸನೆಯಿಲ್ಲವೋ ಜಲದಿಂದಲೇ ಜನ್ಮ ಪಡೆದ ಸಸಿ , ಮೊಗ್ಗು ಹೂವಿಗೂ ವಾಸನೆಯಿಲ್ಲ,.

ಜಲದಿಂದಾದ ಪದಾರ್ಥಗಳ ಸತ್ಯ ಒಂದೇ . ಹೀಗಾಗಿ ಅರಿವೆಂಬ ಗುರುದೇವನ ಮೂಗಿಗೆ ಸುಗಂಧವೂ ಇಲ್ಲ . ದುರ್ಗಂಧವೂ ಇಲ್ಲ . ಬರೀ ಪರಿಮಳ ಮಾತ್ರ.

**ಚನ್ನಬಸವಣ್ಣ :** ಆಹಾ! ಧನ್ಯರಾದೆವು ಬಸವಣ್ಣ , ಮೂಗಿನಲ್ಲಿ ಎಂತಹ ರಹಸ್ಯವು ಅಡಗಿದೆ.

ತಾನು ಅಡಗಿಸಿಟ್ಟುಕೊಂಡ ರಹಸ್ಯವನ್ನು ಮೂಗು ತಾನೇ ತಿಳಿಯಬೇಕಾದ ಕೆಲಸವೊಂದಿದೆ , ಎಂದು ಯಾರೂ ಹೇಳಬೇಕಾಗಿಲ್ಲ.

ಆದರೂ ಕೂಡ ಮೂಗಿನೊಳಗಿರುವ ಮೂಗಿನ ಪರಿಚಯ ಮೂಗೇ ತಿಳಿಯದ ಅಜ್ಞಾನ ಮೂಗನ್ನು ಆವರಿಸಿರವುದರಿಂದ ಮೂಗಿನಿಂದಾಗಿ ಕಾಯವೆಂಬ ಕೈಲಾಸವೇ ಆತಂಕಕ್ಕೆ ಒಳಗಾಗಿದೆ !

**ಪ್ರಭು :** ಮೂಗುಳ್ಳ ಮನುಕುಲಕ್ಕೆ ಮೂಗಿನ ರಹಸ್ಯವನ್ನು ಹೇಳಿದ ಮಹಾಂತರು ನೀವು ಬಸವಣ್ಣ ! ನಾವೆಲ್ಲ ಧನ್ಯರು ! ಇಂದಿನ ಸಭೆಯನ್ನು ಇಲ್ಲಿಗೆ ಮಂಗಲಗೊಳಿಸೋಣ. ಸಕಲ ಶರಣರಿಗೂ ತಮಗೂ ಶರಣು ಶರಣಾರ್ಥಿ ಎಂದು ಶರಣರನ್ನು ಬೀಳ್ಕೊಟ್ಟರು.

# ಅರಿವು ಬಯಲು, ಆ ಬಯಲೇ ಬೀಜವಾಗಿ ತನುವಿಗೆ ಜನ್ಮ ಕೊಟ್ಟಿದೆ

ಬೆಳಕು ನಿಧಾನವಾಗಿ ಕತ್ತಲನ್ನು ನುಂಗುವ ದೃಶ್ಯ ಗೋಚರವಾಗುತ್ತಲಿದೆ. ಶರಣರು ಪ್ರಾತ:ಕಾಲದ ಕೆಲಸಗಳನ್ನು ಮುಗಿಸಿಕೊಂಡು ಮಹಾ ಮನೆಯತ್ತ ಹೊರಡುತಿದ್ದಾರೆ. ಅಲ್ಲಮಪ್ರಭು , ಬಸವಣ್ಣ , ಚನ್ನಬಸವಣ್ಣನವರಿಗೆ ಕೈ ಮುಗಿದು ಶರಣು ಶರಣಾರ್ಥಿ ಎಂದು ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುತ್ತಾರೆ .

**ಪ್ರಭು :** ಸಕಲ ಶರಣರಿಗೂ ಶರಣು ಶರಣಾರ್ಥಿ ಎನ್ನುತ್ತಾ ಸಕಲರನ್ನು ಸ್ವಾಗತಿಸಿ ಬಸವಣ್ಣ ಚನ್ನಬಸವಣ್ಣನವರಿಗೆ ಕೈ ಮುಗಿದು ಶರಣು ಶರಣೆನ್ನುತ್ತಾ,

ಬಸವಣ್ಣ , ನಿನ್ನೆ ಸಭೆಯಲ್ಲಿ ತಾವು ಮಂಡಿಸಿದ ವಿಷಯ ಅದ್ಭುತ !

ಸಕಲ ಶರಣರು ಹಾಗೂ ನಾವು ಕೂಡ ಕೇಳಿ ಆಶ್ಚರ್ಯ ಚಕಿತರಾದೆವು . ಗುರುದೇವ ನಿಮ್ಮಿಂದ ಅದ್ಭುತವಾದ ರಹಸ್ಯವನ್ನು ಹೊರಹಾಕಿದರು . ದಯವಿಟ್ಟು ಇಂದು ಕೂಡ ಮೂಗಿನ ವಿಷಯವನ್ನು ಮುಂದುವರಿಸಲು ಸಾಧ್ಯವೇ ?

**ಬಸವಣ್ಣ :** ತಮ್ಮ ಅಪ್ಪಣೆ ಪ್ರಭು.

ಮನುಷ್ಯನ ಹೊರತಾಗಿ ಮೂಗಿನ ವಿಷಯದಲ್ಲಿ ಸಕಲ ಪ್ರಾಣಿಗಳು ಪದಾರ್ಥದಲ್ಲಿರುವ ಮೂಲ ಸತ್ವವನ್ನು ಆಸ್ವಾದಿಸಿ ಸ್ವೀಕರಿಸುತ್ತವೆ.

ಮನುಷ್ಯ ಮಾತ್ರ ಮೂಗಿನ ವಿಷಯದಲ್ಲಿ ಪದಾರ್ಥದ ಮೂಲ ಪರಿಮಳವನ್ನು ಮರೆತು ಹೋಗಿದ್ದಾನೆ . ಮೂಗಿನ ಮೂಲ ಮತ್ತು ಪದಾರ್ಥದ ಮೂಲ ಒಂದೇ ಆಗಿದೆ.

**ಶರಣ :** ಕ್ಷಮಿಸಿ ಬಸವಣ್ಣ , ಮೂಗಿನ ಮೂಲಕ್ಕೆ ಅರಿವಿದೆ , ಪದಾರ್ಥದ ಮೂಲಕ್ಕೆ ಅರಿವಿಲ್ಲ , ಅಂದ ಮೇಲೆ ಎರಡೂ ಒಂದೇ ಹೇಗಾಗುತ್ತವೆ ? ದಯವಿಟ್ಟು ನಮಗೆ ತಿಳಿಯುವಂತೆ ಹೇಳಿ ಬಸವರಸ.

**ಬಸವಣ್ಣ:** ಆಗಲಿ ಶರಣರೆ.

ತಿನ್ನುವ ಸಕಲ ಪದಾರ್ಥಗಳ ಮೂಲ ಜಲವೇ ಆಗಿದೆ.

ಏಕೆಂದರೆ ಪ್ರತಿಯೊಂದು ಪದಾರ್ಥವು ಜಲ ಹರಿದು , ಜಲವೇ ಸಸಿಯಾಗಿ,ಜಲವೇ ಆ ಸಸಿಯಲ್ಲಿ ಮೊಗ್ಗು ಆಗಿ, ಜಲವೇ ಅರಳಿ ಹೂ ಆಗಿದೆ. ಜಲವೇ ಕಾಳು ಗಟ್ಟಿ ಬೀಜವು ಆಗಿದೆ. ಅಥವಾ ದ್ರವ್ಯ ರೂಪ ಪಡೆದುಕೊಂಡಿದೆ.

ಇದೇ ರೀತಿಯಲ್ಲಿ ಜಲ ಬಿಂದುವೇ ಜೀವಜಲವಾಗಿ ಬೀಜವಾಗಿ ತಾಯಿ ಗರ್ಭಕ್ಕೆ ಹೊಕ್ಕು ಬೀಜದಲ್ಲಿ ಬೆರೆತು ಪಿಂಡವಾಗಿದೆ. ರಕ್ತ , ಮೂಳೆ, ಮಾಂಸ, ಮಜ್ಜೆ ಮೇದಸ್ಸು ಆಗಿ ಅವು ಸೋರದಂತೆ ಜಲದಿಂದಲೇ ಸುಂದರವಾದ ಚರ್ಮದ ಕವಚ ನಿರ್ಮಾಣವಾಗಿದೆ.

ತನು ಆಗಿ ತನುವಿನ ಗರ್ಭದಿಂದ ಹೊರಬಂದಿದೆ . ಹೀಗಾಗಿ ಪದಾರ್ಥದ ಮೂಲ ತನುವಿನ ಮೂಲ ಜಲ ಆಗಿರುವುದರಿಂದ , ಪದಾರ್ಥ ಸುಗಂಧ , ದುರ್ಗಂಧ ಕಳೆದುಕೊಂಡು ಅರಿವಿನ ಪರಿಮಳವಾಗಿ ತನುವಿಗೆ ಸ್ವೀಕೃತಿ ಆಗುತ್ತದೆ.

**ಪ್ರಭು :** ಶರಣರಿಗೆ ಮತ್ತಷ್ಟು ವಿವರದೊಂದಿಗೆ ತಿಳಿಯಪಡಿಸಲು ಸಾಧ್ಯವೇ ಬಸವಣ್ಣ ?

**ಬಸವಣ್ಣ :** ಅಪ್ಪಣೆ ಪ್ರಭು . ತನು ಮತ್ತು ಪದಾರ್ಥದ ಮೂಲ ಜಲವಾದರೂ ಜಲ ಜಲವಲ್ಲ

**ಶರಣ :** ಅದು ಹೇಗೆ ಸಂಗನ ಬಸವಣ್ಣ ? ಜಲವನ್ನೆ ಜಲವಲ್ಲವೆಂದು ಹೇಳುವಿರಲ್ಲ ? ಹಾಗಾದರೆ ಮತ್ತೇನು ಅದು ಬಸವಣ್ಣ ?

ಜಲದಲ್ಲಿ ಜಲಜನಕವೂ ಇದೆ , ಆಮ್ಲಜನಕವೂ ಇದೆ.

ಇವೆರಡೂ ಬಯಲ ಗರ್ಭದಲ್ಲಿ ಇವೆ.

ಜಲಜನಕವೂ ಕಾಣುವುದಿಲ್ಲ, ಆಮ್ಲಜನಕವೂ ಕಾಣುವುದಿಲ್ಲ .

ಹಾಗೆಯೇ ಅವು ವಾಸಕ್ಕೆ ಬಳಕೆ ಮಾಡಿದ ಬಯಲು ಕೂಡ ಕಾಣುವುದಿಲ್ಲ.

ಕಾಣಬಾರದ ಬಯಲು ಕಾಣಬಾರದ ಜಲಜನಕವನ್ನು ಕಾಣಬಾರದ ಆಮ್ಲಜನಕವನ್ನು ಒಂದು ಮಾಡಿ

ತಾನು ಅದರಲ್ಲಿ ಒಳಹೊರಗೆನ್ನದೇ ಬೆರೆತು ಜೀವ ಜಲವಾಗಿದೆ.

ಈ ಜೀವ ಜಲವೇ ಪದಾರ್ಥ ಆಗಿದೆ.

ಪಶು ಪಕ್ಷಿ, ಪ್ರಾಣಿ, ಗಿಡ, ಮರ, ಬಳ್ಳಿ, ಜಲಚರ, ಉರಗ , ಕೀಟವಾಗಿದೆ.

ಹಾಗೆಯೇ ಆ ಬಯಲು ತಾನೇ ಸೃಷ್ಟಿ ಮಾಡಿದ ಈ ಬ್ರಹ್ಮಾಂಡವನ್ನು ನೋಡಿ ಆನಂದ ಪಡುವುದಕ್ಕಾಗಿ ತನುವಿಗೆ ಜನ್ಮ ಕೊಟ್ಟು ಆ ತನುವಿನಲ್ಲಿಯೇ ತನ್ಮಯವಾಗಿದೆ. ತನ್ನನ್ನು ತಿಳಿಯಲು ಮನಕ್ಕೆ ಜನ್ಮ ಕೊಟ್ಟು ಮನವನ್ನು ತಾನಿದ್ದ ತನುವಿನಲ್ಲಿಯೇ ಇಟ್ಟು ಹೊಲಿಗೆ ಹಾಕಿದೆ.

ಅಂದ ಮೇಲೆ ತನುವಿಗೆ ಜನ್ಮ ಕೊಟ್ಟದ್ದು ಹಾಗೆಯೇ ಈ ಬ್ರಹ್ಮಾಂಡಕ್ಕೆ ಜನ್ಮಕೊಟ್ಟದ್ದು ಪದಾರ್ಥಕ್ಕೂ ಜನ್ಮಕೊಟ್ಟದ್ದು ಬಯಲು ಎಂದಂತಾಗಲಿಲ್ಲವೇ?

**ಶರಣರು :** ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳ ತೊಡಗಿದರು . ಅತ್ಯಂತ ಆನಂದದಿಂದಲೇ ತಮ್ಮ ತಮ್ಮಲ್ಲಿಯೇ ಹಿರಿಹಿರಿ ಹಿಗ್ಗಿ ಧನ್ಯರಾದೆವು ಎಂಬ ಪಿಸುಧ್ವನಿ ಹೊರಹೊಮ್ಮಿತು .

**ಚನ್ನಬಸವಣ್ಣ :** ಬಸವರಸ ಎಂತಹ ಅದ್ಭುತವಾದ ರಹಸ್ಯವನ್ನು ಬೇಧಿಸಿ ನಮಗೆ ನಮ್ಮ ಶರಣರಿಗೆ ತಿಳಿಯುವಂತೆ ವಿವಿರ ವಿವಿರವಾಗಿ ಹೇಳಿದಿರಿ . ಎಲ್ಲರೂ ಹೌದೆನ್ನುವಂತೆ ತಲೆದೂಗಿದರು.

ಸ್ವಾನುಭಾವದಿಂದ ತಾವು ಹೇಳಿದ ಮಾತುಗಳನ್ನು ಶರಣರು ಕಿವಿಯೇ ತಾವಾಗಿ

ಕೇಳಿದರು. ಬಸವರಸರಿಗೆ ಕೈ ಮುಗಿಯುತ್ತಾ.

ಪ್ರಭು, ''ಬಯಲು ಬಯಲನ್ನೆ ಬಿತ್ತಿ'' ಎನ್ನುವ ತಮ್ಮ ಸೂತ್ರದ ಒಂದು ವಚನ ನನ್ನ ಗಮನಕ್ಕೆ ಇದೆ. ತಮ್ಮ ವಚನ ಈ ವಿಷಯಕ್ಕೆ ಹೋಲುತ್ತದೆ. ದಯವಿಟ್ಟು ಹೇಳಿ ಎನ್ನೊಡೆಯ.

**ಪ್ರಭು :** ಆಗಲಿ ಚೆನ್ನಬಸವಣ್ಣ .

ಬಯಲು ಬಯಲನೆ ಬಿತ್ತಿ ,
ಬಯಲು ಬಯಲನೆ ಬೆಳೆದು ,
ಬಯಲು ಬಯಲಾಗಿ ಬಯಲಾಯಿತ್ತಯ್ಯ.
ಬಯಲು ಜೀವನ , ಬಯಲು ಭಾವನೆ
ಬಯಲು ಬಯಲಾಗಿ ಬಯಲಾಯಿತ್ತಯ್ಯ
ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು.
ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರ.

**ಶರಣ :** ಪ್ರಭುದೇವರಿಗೆ ಕೈ ಮುಗಿದು ಈ ಸೂತ್ರವನ್ನು ನಮಗೆ ತಿಳಿಯುವಂತೆ ಬಿಡಿಸಿ ಹೇಳಿ ಎನ್ನೊಡೆಯಾ .

**ಪ್ರಭು :** ಆಗಲಿ ಶರಣರೆ .

ಅದೆಷ್ಟು ಕುತೂಹಲ ತಮಗೆ . ನಿಮ್ಮ ಕುತೂಹಲದಿಂದಾಗಿ ನಾವು ಧನ್ಯರಾದೆವು.

ಬಯಲ ಬೀಜದಿಂದಲೇ ಈ ಭೂಮಂಡಲ ನಿರ್ಮಾಣವಾಗಿದೆ. ಬಯಲ ಬೀಜವೆಂದರೆ , ಬಯಲು ತಾನು ಜಲಜನಕವನ್ನು ಆಮ್ಲಜನಕವನ್ನು ಸೃಷ್ಟಿ ಮಾಡಿ ಅವೆರಡನ್ನೂ ತನ್ನ ಗರ್ಭದಲ್ಲಿ ಇಟ್ಟುಕೊಂಡು ತನಗೆ ಇಚ್ಛೆಯಾದಾಗ ತಾನು ಅದರಲ್ಲಿ ಬೆರೆತು ಜೀವ ಜಲವಾಗಿದೆ . ಆ ಜೀವ ಜಲವೇ ಬಯಲಲ್ಲಿ ಗಟ್ಟಿಗೊಂಡು ಭೂಮಿಯಾಗಿದೆ.

ಭೂಮಿಯೊಳಗಿರುವ ಹೇಮವೂ ಆಗಿದೆ. ಆ ಭೂಮಿಯೊಳಗೆ , ಇರುವ ಸಕಲ ಖನಿಜ ಪದಾರ್ಥಗಳು ಆ ಬಯಲ ಬೀಜದಿಂದಲೇ ಜನ್ಮ ತಳೆದಿವೆ .

ಭೂಮಿಯ ಮೇಲೆ ಹರಿಯುವ ಜೀವ ಜಲದಿಂದಲೇ ಜಲಚರಗಳು ಜನ್ಮ ತಳೆದಿವೆ, ಆ ಬೀಜದಿಂದಲೇ ಗಿಡ,ಮರ,ಬಳ್ಳಿ,ಪಶು, ಪಕ್ಷಿ, ಉರಗ ಜನ್ಮ ತೆಳೆದಿವೆ .

ಹಿಂದಿನ ಎಲ್ಲಾ ವಿಷಯಗಳು ಬಸವರಸರು ತಮಗೆ ವಿವರಿಸಿದ್ದಾರೆ. ಇದಕ್ಕೆ ಸಂಭಂದಪಟ್ಟಂತೆ , ಚನ್ನಬಸವಣ್ಣನವರು ಮುಂದಿನ ವಿಷಯವನ್ನು ವಿವರಿಸುವರು .

**ಚೆನ್ನಬಸವಣ್ಣ:** ಆಗಲಿ ಪ್ರಭು .

'' ತಿಳಿನೀರೆಂಬಿ ತಿಳಿನೀರೆಂಬಿ ತಿಳಿ ನೀ ಅಲ್ಲೆ ಎಲೆ ಮಾನವ.
ನೀ ತಿಳಿಯಲು ಹೋದರೆ ತಪ್ಪದೆ ತಿಳಿ ಹೇಳುವ ಕೂಡಲಚನ್ನಸಂಗಮದೇವ ''

ಜಲ ಇಡೀ ಬ್ರಹ್ಮಾಂಡ ರೂಪದಲ್ಲಿ ಜನ್ಮ ತಳೆದು ಅದನ್ನು ತಿಳಿಯುವ ಕುತೂಹಲದಿಂದ ತನು ಆಗಿದೆ. ತನುವಿನಲ್ಲಿಯೇ ತನ್ಮಯವಾದ ಅರಿವಾಗಿದೆ . ತನುವನ್ನು ಆವರಿಸಿದ ಮನವೂ ತಾನೇ ಆಗಿದೆ. ಮನ ಮೂಗಿನಲ್ಲಿ ಮನೋಮಯವಾದ ಮೂಗಾಗಿ ಬೆರೆತು ಸ್ಥೂಲ ಮನೋಮಯ ಮೂಗನ್ನು ತಾನು ಸ್ವಾಧೀನ ಪಡಿಸಿಕೊಂಡಿದೆ .

ಮೂಗು ತನಗೆ ಬೇಕಾದ ಸುಗಂಧವನ್ನು ಸ್ಥೂಲ ಮೂಗಿನ ಮೂಲಕ ಆಸ್ವಾಧಿಸಿ ಆ ಸುಗಂಧಕ್ಕಾಗಿ ಹಗಲಿರುಳು ಎನ್ನದಂತೆ ಪರಿತಪಿಸಿ ಸುಗಂಧದ ಸುಖಕ್ಕಾಗಿ, ಇಡೀ ಅರಿವಿನ ತನುವನ್ನು ಹಗಲಿರುಳೆನ್ನದಂತೆ. ಅಜ್ಞಾನದಿಂದ ದುಡಿಯಲು ಹಚ್ಚಿದೆ.

ಮನೋಮಯವಾದ ಮೂಗು , ಸ್ಥೂಲ ಮೂಗಿನ ಸಂಗ ಬಿಟ್ಟು , ಅರಿವೆಂಬ ಗುರುದೇವನ ಮೂಗಿನ ಸಂಗ ಮಾಡಿದರೆ , ಮನೋಮಯವಾದ ಮೂಗಿಗೆ ಅರಿವೆಂಬ ಗುರುದೇವನು ತನ್ನ ಮೂಗಿನ ಮೂಲಕ ಏನೆಲ್ಲಾ ತಿಳಿ ಹೇಳುತ್ತಾನೆ .

ಕಣ್ಣಿನ ಮೂಲಕ ನೋಡಿ ಮೂಗನ್ನು ತಿಳಿಯಬಹುದು . ಅದು ತನ್ನ ಮೂಗಾದರೇನು? ಇತರ ಪ್ರಾಣಿಗಳ ಮೂಗಾದರೇನು ? ಇತರ ಪದಾರ್ಥಗಳಲ್ಲಿ ಸಂಗಮವಾದ ಮೂಲ ದ್ರವ್ಯವಾದ ಪರಿಮಳವನ್ನೆ ಆಸ್ವಾಧಿಸುತ್ತದೆ .

ಅರಿವಿನ ಮೂಗಿಗೆ ಪರಿಮಳವನ್ನು ಸ್ವೀಕರಿಸುವ ಶಕ್ತಿ ಮಾತ್ರ ಇದೆ .

ಮನೋಮಯವಾದ ಮೂಗಿಗೆ ಸುಗಂಧ , ದುರ್ಗಂಧ , ಘಾಟು ಪದಾರ್ಥಗಳನ್ನು ಸ್ವೀಕರಿಸುವ ಅಜ್ಞಾನದ ಶಕ್ತಿ ಮಾತ್ರಇದೆ .

ಮನೋಮಯವಾದ ಮೂಗು ಅರಿವೆಂಬ ಗುರುದೇವನ ಮೂಗಿನ ಮೂಲಕ ಎಲ್ಲವನ್ನು ತಿಳಿಯಬಹುದಾಗಿದೆ .

**ಪ್ರಭು :** ಭಲೆ , ಚೆನ್ನಬಸವಣ್ಣ . ನಾವು , ಸಕಲ ಶರಣರು ಕೂಡಾ ಧನ್ಯರಾದೆವು.

ಈ ಸಭೆಯನ್ನು ಇಲ್ಲಿಗೆ ಮುಕ್ತಾಯ ಮಾಡೋಣ . ಬೆಳಗಿನ ಪ್ರಸಾದ ಸ್ವೀಕರಿಸಿ ತಮ್ಮ ತಮ್ಮ ಕಾಯಕಕ್ಕೆ ಹೊರಡಿ ಎನ್ನುತ್ತಾ, ಶರಣರಿಗೆ ಶರಣು ಶರಣಾರ್ಥಿ ಎನ್ನುತ್ತಾ ಸಭೆಗೆ ಮಂಗಳ ಹಾಡಿದರು .

## ಜಲಮಯವಾದ ನಾಲಿಗೆಯಲ್ಲಿ ರುಚಿ-ಅರುಚಿ-ಎಂಬ ಅಜ್ಞಾನ ಆವರಿಸಿಕೊಂಡು ; ಜಲಕ್ಕೆ ರುಚಿ ಇಲ್ಲ ಎಂಬುದನ್ನೇ ಮರೆತುಹೋಗಿದೆ

ಇಡೀ ಬ್ರಹ್ಮಾಂಡವನ್ನು ಬೆಳಗುವ ಸೂರ್ಯನನ್ನು ಕತ್ತಲು ನಿಧಾನವಾಗಿ ತನ್ನ ಗರ್ಭದಲ್ಲಿ ಸೆಳೆದುಕೊಳ್ಳುವುದು ಗೋಚರಿಸುತ್ತಲಿದೆ . ಶರಣರು ಧಾಪುಗಾಲು ಹಾಕುತ್ತಾ ಮಹಾ ಮನೆಯೆಡೆಗೆ ನಡೆದಿದ್ದಾರೆ . ಅಲ್ಲಮಪ್ರಭುಗಳಿಗೆ , ಬಸವಣ್ಣ , ಚನ್ನಬಸವಣ್ಣನವರಿಗೆ ಶರಣು ಶರಣಾರ್ಥಿ ಎಂದು ಹೇಳುತ್ತಾ ಶರಣರು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಳ್ಳುತ್ತಾರೆ.

**ಪ್ರಭು :** ಸಕಲ ಶರಣರನ್ನು ಸ್ವಾಗತಿಸುತ್ತಾ, ಶರಣು ಶರಣಾರ್ಥಿ ಎಂದು ಹೇಳಿ, ಬಸವಣ್ಣನೆಡೆಗೆ ಮುಖ ಮಾಡಿ .

ಬಸವಣ್ಣ ಶರಣರು ಮತ್ತು ನಾವು ಇದುವರೆಗೆ ತಾವು ಹೇಳಿದ ಕಣ್ಣು, ಕಿವಿ, ಚರ್ಮ ಮತ್ತು ಮೂಗಿಗೆ ಸಂಬಂಧ ಪಟ್ಟ ನಾಲ್ಕು ಸೂತ್ರಗಳನ್ನು ಕೇಳಿದೆವು . ನಾವೆಲ್ಲಾ ಧನ್ಯರಾದೆವು. ಲೋಕಕ್ಕೆ ಈ ಸೂತ್ರ ಗೊತ್ತಾದರೆ ಇಡೀ ಲೋಕ ಪಾವನವಾಗುವುದರಲ್ಲಿ ಸಂದೇಹವೇ ಇಲ್ಲ .

ಬಸವರಸ ನಾಲಿಗೆ (ಜಿಹ್ವೆ) ಬಗ್ಗೆ ಹೇಳಿ , ನಮ್ಮನ್ನು ಕೃತಾರ್ಥರನ್ನಾಗಿ ಮಾಡಿ ಎಂದು ಪ್ರಭು ಬಿನ್ನವಿಸಿಕೊಂಡರು .

**ಬಸವರಸ :** ನಮ್ಮೆಲ್ಲರ ಪ್ರಭುಗಳು ತಾವು ತಮಗೆ ತಿಳಿಯದ ವಿಷಯವಾವುದೂ ಇಲ್ಲ .ಆದರೂ ತಾವು ಈ ರೀತಿ ಸಂಭೋಧಿಸಬಹುದೇ ಎನ್ನೊಡೆಯ?

ತಾವೇನಿದ್ದರೂ ನನಗೆ ಆದೇಶ ನೀಡಬೇಕೆ ವಿನಹ ಈ ರೀತಿ ಮುಜುಗರಕ್ಕೆ ಒಳಪಡಿಸಬೇಡಿ ತಂದೆ .

ತಮ್ಮ ಆದೇಶವನ್ನು ಶಿರಸಾವಹಿಸಿ ಪಾಲಿಸುವೆ ಎನ್ನುತ್ತಾ , ಸಭೆಗೆ ಜಿಹ್ವೆಯ ಬಗ್ಗೆ ಹೇಳತೊಡಗಿದರು .

ಜಿಹ್ವೆಯೊಳಗೆ ಜಿಹ್ವೆಯಿದ್ದು , ರುಚಿಸಲೇಕರಿಯರಯ್ಯ :

ಇದು ಜಿಹ್ವೆಯ ಸೂತ್ರ . ಜಿಹ್ವೆಯೊಳಗೆ ಜಿಹ್ವೆಯಿದೆ . ಇದು ಅರಿವಿನ ಜಿಹ್ವೆ, ಇದಕ್ಕೆ ರುಚಿ , ಅರುಚಿ ಎನ್ನುವುದು ಗೊತ್ತೇ ಇಲ್ಲ . ಏಕೆಂದರೆ , ಪದಾರ್ಥದಲ್ಲಿರುವ ಸತ್ಯ ಮತ್ತು ನಾಲಿಗೆಯಲ್ಲಿರುವ ಸತ್ಯ ಒಂದೇ ಆಗಿರುವುದರಿಂದ , ಸ್ವೀಕರಿಸಿದ ಪದಾರ್ಥ ನಾಲಗೆಗೆ ಪ್ರಸಾದವಾಗುತ್ತದೆ .

ಇದು ನಾಲಿಗೆ ಒಳಗಿರುವ ಅರಿವಿನ ನಾಲಿಗೆಗೆ ಮಾತ್ರ ಸಾಧ್ಯವಾಗುತ್ತದೆಯೇ ಹೊರತು ನಾಲಿಗೆಗೆ ಸಾಧ್ಯವಾಗುವುದಿಲ್ಲ .

**ಶರಣ :** ಕಣ್ಣು , ಕಿವಿ ,ಮೂಗು , ಚರ್ಮದಂತೆ ನಾಲಿಗೆಯಲ್ಲಿಯೂ ಕೂಡ

ಎರಡು ನಾಲಿಗೆಗಳು ಇವೆಯೇ ಬಸವರಸ .

**ಬಸವಣ್ಣ:** ಹೌದು ಶರಣರೆ, ತಾವು ಸರಿಯಾಗಿಯೇ ಊಹಿಸಿರುವಿರಿ . ಇದು ವರೆಗೂ ಕೇಳಿದ ನಿಮ್ಮ ಶ್ರಮ ಸಾರ್ಥಕವಾಯಿತು . ಪದಾರ್ಥ ರುಚಿಯಾಗಿದ್ದರೆ ತುತ್ತನ್ನು ಬಯಸಿ ನಾಲಿಗೆ ಒಳಗೆ ಕಳುಹಿಸಿ ಸಂತೋಷ ಪಡುತ್ತದೆ.

ಪದಾರ್ಥ ರುಚಿಯಾಗಿರದಿದ್ದರೆ ,ಇಡೀ ಪದಾರ್ಥವನ್ನು ಉಗುಳಿ ತಟ್ಟೆಯನ್ನು ಎಸೆಯುವಂತೆ ತನುವನ್ನು ಆದೇಶಿಸಿ ತನುವಿಗೆ ಸಿಟ್ಟು ಬರಿಸುತ್ತದೆ .

ಪದಾರ್ಥದಲ್ಲಿರುವ ರುಚಿ ಪದಾರ್ಥದ್ದೇ ಹೊರತು , ಅದನ್ನು ಯಾರೂ ಮಾಡುವುದಿಲ್ಲ . ಆದರೆ ತಿಳಿಯುವ ಶಕ್ತಿ ನಾಲಿಗೆಗೆ ಇಲ್ಲ .

**ಶರಣ :** ಪದಾರ್ಥದಲ್ಲಿ ರುಚಿ ಇಲ್ಲವೆಂದು ತಾವು ಹೇಳಿದಿರಿ , ಅದನ್ನು ಕಂಡು ಹಿಡಿಯುವುದು ಹೇಗೆ? ಪದಾರ್ಥದಲ್ಲಿ ರುಚಿ ಇದೆಯಲ್ಲ ಬಸವರಸ !

**ಬಸವಣ್ಣ:** ತಿನ್ನುವ ಪ್ರತಿ ಪದಾರ್ಥವು ಜಲ ಹರಿದು ಜಲದಿಂದಲೇ ನಿರ್ಮಾಣವಾಗಿದೆ . ಹೀಗಾಗಿ ಪದಾರ್ಥವು ಜಲದಿಂದ ಭರಿತವಾಗಿದೆ. ಹಾಗೆಯೆ ನಾಲಿಗೆಯೂ ಜಲದಿಂದ ಭರಿತವಾಗಿದೆ. ಜಲಕ್ಕೆ ರುಚಿ ಇಲ್ಲ, ವಾಸನೆಯೂ ಇಲ್ಲ ಬಣ್ಣವಿಲ್ಲ.

ಆದರೆ ಪದಾರ್ಥದಲ್ಲಿಯ ರುಚಿ ಜಲದಿಂದಲೇ ನಿರ್ಮಾಣವಾಗಿದೆ. ಪದಾರ್ಥದ ಬಣ್ಣ ಮತ್ತು ವಾಸನೆ ಕೂಡ ಜಲದಿಂದಲೇ ನಿರ್ಮಾಣವಾಗಿದೆ .

ಜಲ ಜಲದಲ್ಲಿ ಬೆರೆತರೆ ಪದಾರ್ಥದ ರುಚಿ ವಾಸನೆ ಬಣ್ಣ ಕಳೆದು ಹೋಗುತ್ತದೆ.

ಜಲದಿಂದಾದ ಪದಾರ್ಥ ಪುನ: ಜಲದಲ್ಲಿ ಸೇರಿ ಜಲವಾಗಲು ಸ್ವಲ್ಪ ಸಮಯ ಬೇಕಾಗುತ್ತದೆ .

**ಶರಣ** : ಬಸವರಸರೆ 'ಜಿಹ್ವೆಯೊಳಗೆ ಜಿಹ್ವೆ ಇದ್ದು ರುಚಿಸಲೇಕರಿಯರಯ್ಯ ' ಎನ್ನುವ ತಮ್ಮ ಸೂತ್ರ ಅದ್ಭುತ . ತಮಗೆ ಕೋಟಿ ಕೋಟಿ ವಂದನೆಗಳು . ಆದರೂ ಕೂಡ ನಾಲಿಗೆ ರುಚಿಯಿಂದಾಗಿ ತನುವನ್ನು ಕೆಂಡಾಮಂಡಲವಾಗಿಸುತ್ತದೆಯಲ್ಲ ಇದಕ್ಕೆ ಕಾರಣವೇನು ಸಂಗನಬಸವಣ್ಣ ?

**ಬಸವಣ್ಣ :** ನಾಲಗೆಯಲ್ಲಿ ಅರಿವೆಂಬ ಗುರುದೇವ ಇದ್ದಾನೆ . ಆತನದೇ ಆದ ಒಂದು ಅರಿವಿನ ನಾಲಗೆ ನಾಲಗೆಯಲ್ಲಿಯೇ ಇದೆ .

ಹಾಗೆಯೇ ನಾಲಗೆಯನ್ನು ಮನೋಮಯವಾದ ನಾಲಗೆಯೊಂದು ಆವರಿಸಿದೆ.

ಪದಾರ್ಥವನ್ನು ಈ ನಾಲಗೆಯ ಮೂಲಕ ರುಚಿಸುವುದರಿಂದಾಗಿ ಪದಾರ್ಥದಲ್ಲಿ ರುಚಿ , ಅರುಚಿ ಉಂಟಾಗುತ್ತದೆ . ಮನೋಮಯವಾದ ನಾಲಿಗೆ ರುಚಿ ಬಯಸಿ ತನುವನ್ನು ಸಂಕಟಕ್ಕೆ ಈಡು ಮಾಡುತ್ತದೆ. ಹಾಗೆಯೇ ಪದಾರ್ಥ ರುಚಿ ಆಗದಿದ್ದರೂ ತನುವನ್ನು ಸಂಕಟಕ್ಕೆ ಈಡು ಮಾಡುತ್ತದೆ . ಏಕೆಂದರೆ ಪದಾರ್ಥದ ಮೂಲ ಜಲವೆಂದು ನಾಲಗೆ ಮೂಲ ಜಲವೆಂದು ಮನೋಮಯವಾದ ನಾಲಗೆಗೆ ಅರ್ಥವಾಗುವುದಿಲ್ಲ, ಹೀಗಾಗಿ ರುಚಿಗಾಗಿಯೇ ಜೀವನ ಪರ್ಯಂತ ತನುವನ್ನು ಹಗಲಿರುಳೆನ್ನದೇ ದುಡಿಯುವಂತೆ ಮಾಡುತ್ತದೆ.

**ಪ್ರಭು :** ಬಸವರಾಜರೆ , ತಾವು ಇಡೀ ಶರೀರಶಾಸ್ತ್ರವನ್ನು ಶರೀರದಿಂದಲೇ ಅಧ್ಯಯನ ಮಾಡಿ ಅರಿವಿನಿಂದ ಸಂಗಯ್ಯನ ಶರೀರವನ್ನಾಗಿಸಿಕೊಂಡಿರುವಿರಿ . ನಿಮ್ಮ ಸ್ವಾನುಭಾವದಿಂದಾಗಿ ಹೊರಬರುವ ಒಂದೊಂದು ನುಡಿಯು ಮುತ್ತಿನಂತೆ ಬೆಳಗಿ ಸದಾ ಬೆಳಗುವ ತನುವಿಗೆ ಬೆಳಕು ನೀಡುತ್ತದೆ . ನಿಮ್ಮ ನುಡಿಗಳನ್ನು ಕೇಳಿದ ಸಕಲ ತನುಗಳು ಧನ್ಯ ಬಸವಣ್ಣ . ತಮ್ಮ ಮಾತುಗಳನ್ನು ಕೇಳಿದರೆ ತನುವನ್ನು ಆವರಿಸಿದ ಅಜ್ಞಾನ ತನಗೆ ತಾನೆ ತನುವಿನ ಜ್ಞಾನದಿಂದಲೇ ಬೆಳಗುತ್ತದೆ . ಆ ಮಹಾಜ್ಞಾನಕ್ಕೆ ಭಕ್ತಿ ಮಾಡಿ ಹಣೆಮಣಿದ ಮಹಾಜ್ಞಾನಿಗಳು ತಾವು ತಮ್ಮಿಂದಾಗಿ ಸಕಲ ಶರಣ ಕುಲವು ಧನ್ಯ.

**ಚನ್ನಬಸವಣ್ಣ :** ಬಸವಣ್ಣ ಪ್ರಭುದೇವರಿಗೆ ಹಾಗೂ ಸಕಲ ಶರಣರಿಗೆ ಶರಣು ಶರಣಾರ್ಥಿ ಎಂದು ಕೈ ಮುಗಿದು ಸಭೆಗೆ ಮಂಗಳ ಹಾಡಿದರು.

ಸತ್ಯ ಸಂವಾದ - 13

## ಅರಿವೇ ಶಿವ, ಶಿವನನ್ನು ತಿಳಿಯುವ ಮನವೇ ಶಿವೆ ಇವರಿಬ್ಬರಿದ್ದ ಕಾಯವೇ ಕೈಲಾಸ

ಇನ್ನೂ ಸೂರ್ಯೋದಯವಾಗಿಲ್ಲ , ಕಲ್ಯಾಣದ ಜನ ತಮ್ಮ ತಮ್ಮ ಪ್ರಾತಃ ಕಾಲದ ಕೆಲಸಗಳಲ್ಲಿ ತೊಡಗಿದ್ದಾರೆ . ಶರಣರು ಮಹಾ ಮನೆಯತ್ತ ನಡೆದಿದ್ದಾರೆ. ವೇದಿಕೆಯ ಮೇಲೆ ಆಸೀನರಾದಂತಹ ಪ್ರಭುದೇವರು , ಬಸವಣ್ಣ , ಚನ್ನಬಸವಣ್ಣನವರಿಗೆ ಕೈ ಮುಗಿದು ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುತ್ತಾರೆ .

**ಪ್ರಭು :** ಇದುವರೆಗೆ ತನುವಿನಲ್ಲಿ ತನ್ಮಯವಾದ ಅರಿವು ಎನ್ನುವ ಗುರುದೇವನ ಬಗ್ಗೆ ಹಾಗೂ ಆ ಗುರುದೇವನೇ ಸೃಷ್ಟಿ ಮಾಡಿದ ಮನದ ಬಗ್ಗೆ ಮತ್ತು ತನುವಿನ ಬಗ್ಗೆ ತಿಳಿದುಕೊಂಡಿರಿ , ನಮ್ಮಿಂದ ತಮಗೆ ತಿಳಿಯಪಡಿಸಿದ ವಿಷಯದಲ್ಲಿ ಏನಾದರೂ ಲೋಪದೋಷವಿತ್ತೆ? ಅಥವಾ ಸ್ಪಷ್ಟವಾಗಿ ತಿಳಿಯಲಿಲ್ಲವೇ ಏನಾದರೂ ಸಂಶಯಗಳು ನಿಮ್ಮಲ್ಲಿ ಉಳಿದಿವೆಯೇ ಹೇಗೆ? ಎಂಬುದನ್ನು ತಿಳಿಸಿ ಶರಣರೆ .

**ಶರಣರು :** ಅಯ್ಯೋ ಹಾಗೆ ಹೇಳಬೇಡಿ ಎನ್ನೊಡೆಯ ; ನಮ್ಮಲ್ಲಿ ಯಾವ ಸಂಶಯವೂ ಉಳಿದಿಲ್ಲ. ನಮ್ಮಲ್ಲಿ ಮನೆ ಮಾಡಿಕೊಂಡಿದ್ದ ಅಜ್ಞಾನ , ತನುವಿನಲ್ಲಿಯೇ ತನ್ಮಯವಾದ ಜ್ಞಾನದಿಂದ ದೂರ ಸರಿಯಿತು . ಇನ್ನು ನಾವು ಪ್ರಯೋಗಕ್ಕೆ ಹೋಗಬೇಕು ಅಷ್ಟೇ ನಿಮ್ಮಿಂದಾಗಿ ನಾವೆಲ್ಲರೂ ಧನ್ಯರಾದೆವು . ಪ್ರಭು ಅದೆಂಥ ಅದ್ಭುತವಾದ ಸೂತ್ರವನ್ನು ನಮಗೆ ನೀವು ಹೇಳಿದಿರಿ . ತಾವು ಅಪ್ಪಣೆಕೊಟ್ಟರೆ , ನಮ್ಮೆಲ್ಲರ ಪರಿಚಯವನ್ನು ಮಾಡಿಕೊಳ್ಳುತ್ತೇವೆ ಎನ್ನೊಡೆಯ .

**ಪ್ರಭು :** ತಾವೆಲ್ಲರೂ ಗುರು ಸ್ವರೂಪಿಗಳೇ ಆಗಿರುವಿರಿ. ತನುವಿನಲ್ಲಿ ತನ್ಮಯವಾದ ಗುರುದೇವ ನಮಗೆ ದರುಶನ ನೀಡಿದ್ದಾನೆ . ಸಕಲರ ತನುವಿನಲ್ಲಿ ತನ್ಮಯವಾದ ಭಕ್ತನ ಪರಿಚಯವೂ ನಮಗೆ ಆಗಿದೆ . ಅಂದ ಮೇಲೆ ಮತ್ತೇ ನನ್ನ ಪರಿಚಯಿಸುವಿರಿ ಶರಣರೆ?

**ಶರಣ :** ಪ್ರಭು , ನಮಗೆ ನಾಮಕರಣ ಮಾಡಿದ ಹೆಸರು , ನಾವು ಮಾಡುವ ಕಾಯಕ ಹಾಗೂ ನಮ್ಮ ಮನೆತನದ ಪರಿಚಯವನ್ನು ತಮಗೆ ಮಾಡಿಸಬೇಕೆಂಬ ಇಚ್ಛೆ ನಮ್ಮದಾಗಿದೆ .

**ಪ್ರಭು :** ನಿರಾಳ ಕೂಸಿಂಗೆ ಬೆಣ್ಣೆಯನು ಇಕ್ಕಿ ಹೆಸರನಿಟ್ಟು ಕರೆದವರಾರೊ? ಅಕಟಕಟಾ ಶಬ್ದದ ಲಜ್ಜೆಯ ನೋಡಾ .

**ಶರಣ :** ಎನ್ನೊಡೆಯ ತಾವು ಹೇಳಿದ ವಚನದ ಸೂತ್ರ ನಮಗೆ ತಿಳಿಯಲಿಲ್ಲ ದಯವಿಟ್ಟು ವಿವರಿಸಿ ಹೇಳಿ ಪ್ರಭು .

**ಪ್ರಭು :** ಶರಣರೆ , ಗಿಡ ಮರ ಬಳ್ಳಿ ಪಶು ಪಕ್ಷಿ ಪ್ರಾಣಿಗಳಿಗೆ ಮನುಷ್ಯನೆ ಹೆಸರಿಟ್ಟಿದ್ದಾನೆ. ಯಾವೂ ತಮ್ಮ ತಮ್ಮ ಹೆಸರನ್ನು ಅವು ಇಟ್ಟುಕೊಂಡಿಲ್ಲ ಮನುಷ್ಯ ಅವಗಳಿಗೆ

ಇಟ್ಟ ಹೆಸರುಗಳೆ ಅವುಗಳಿಗೆ ಮುಳುವಾಗಿದೆ . ಹಾಗೆಯೇ ಕರೆಯಲೆಂದು ಇಟ್ಟುಕೊಂಡ ಹೆಸರು ಗಂಡನಿಗೆ ಹೆಂಡತಿಯಾಗಿದೆ, ಹೆಂಡತಿಗೆ ಗಂಡನಾಗಿದೆ, ಮಾಡುವ ಕೆಲಸಕ್ಕೆ ಅಧಿಕಾರಿಯಾಗಿದೆ , ರಾಜನಾಗಿದೆ , ಸೈನಿಕನಾಗಿದೆ , ಸೇನಾಧಿಪತಿಯಾಗಿದೆ , ಪ್ರಧಾನಿಯಾಗಿದೆ. ಕರಿಯಲು ಇಟ್ಟ ಹೆಸರೆ ಏನೆಲ್ಲಾ ಆಗಿ ಕರೆಯಲ್ಪಡುವ ದೇಹಕ್ಕೆ ಕಂಟಕವಾಗಿದೆ.

**ಶರಣ** : ಅದು ಹೇಗೆ ಪ್ರಭು?

**ಪ್ರಭು** : ದೇಹ ಒಂದೆ. ರಾಜನ ದೇಹ, ಸೈನಿಕನ ದೇಹ, ಹೆಂಡತಿಯ ದೇಹ, ಗಂಡನ ದೇಹ , ಪ್ರಧಾನಿಯ ದೇಹವೆಂದು ವಿಂಗಡಿಸಿದಂತೆ , ಕಣ್ಣು ಕಿವಿ , ಮೂಗು , ನಾಲಿಗೆ , ಚರ್ಮ ದೇಹದಲ್ಲಿ ಹರಿಯುವ ರಕ್ತ , ಮೂಳೆ , ಮಾಂಸ, ಮಜ್ಜ , ಮೇದಸ್ಸು ಹಾಗೆಯೇ ದೇಹದ ಮೇಲೆ ಬೆಳೆಯುವ ರೋಮ, ನಖ ಒಂದೇ ಆಗಿದೆ. ಹೆಸರಿನಿಂದಾಗಿ ಕಾಯವನ್ನು ಮನೋಮಯವಾದ ರೋಗ ಆವರಿಸಿದೆ.

ಮೇಲು ಕೀಳು ಜಾತಿ ಮತ ಧರ್ಮ, ಪಂಗಡ ಹೆಣ್ಣು, ಗಂಡು ಎಂಬ ತಾರತಮ್ಯ ಕಾಯದಲ್ಲಿ ಉಂಟಾಗಿದೆ. ಈ ಅಜ್ಞಾನವನ್ನು ಕಳೆದುಕೊಳ್ಳುವ ಮಹಾಜ್ಞಾನವು ಕಾಯದಲ್ಲಿಯೆ ಇದೆ . ಆದರೂ ಕೂಡ ಕಾಯಕ್ಕೆ ಅಜ್ಞಾನ ಬಳಕೆಯಾಗಿ ತನ್ನನ್ನು ತಾನೇ ಬೇರ್ಪಡಿಸಿಕೊಂಡು ತನ್ನಂತೆ ಇರುವ ಕಾಯವನ್ನು ಕಾಯವೇ ಅಜ್ಞಾನದಿಂದ ನೋಡಿ ತನಗೆ ತಾನೇ ತೊಂದರೆಯನ್ನು ಮಾಡಿಕೊಳ್ಳುತ್ತದೆ. ಇದಕ್ಕೆಲ್ಲ ತನಗೆ ಇಟ್ಟುಕೊಂಡ ಹೆಸರು ಕಾರಣವಾಗಿದೆ. ಮಹಾಜ್ಞಾನಕ್ಕೆ ಯಾವ ಹೆಸರೂ ಇಲ್ಲ . ಆ ಜ್ಞಾನ ಕಾಯದಲ್ಲಿಯೇ ಸಂಗಮವಾಗಿದೆ. ಅದು ನಿರಾಳ ಕೂಸು ! ಅದಕ್ಕೆ ಬೆಣ್ಣೆಯನಿಕ್ಕಿ ಹೆಸರನ್ನಿಟ್ಟು ಕರೆದವರು ಯಾರೂ ಇಲ್ಲ . ಆ ಮಹಾಜ್ಞಾನ ಹೊತ್ತ ಕಾಯಕ್ಕೆ ಹೆಸರಿನ ಅವಶ್ಯಕತೆ ಇದೆಯೇ ? ಇದು ಶಬ್ದದ ಲಜ್ಜೆ .

**ಶರಣ** : ಹಾಗಾದರೆ ಶಿವನಿಗೂ ಶಿವ ಎನ್ನುವ ಹೆಸರಿದೆಯಲ್ಲ ಎನ್ನೊಡೆಯ? ಹಾಗೆಯೇ ಶಿವನ ಹೆಂಡತಿಯಾದ ಶಿವೆಗೂ ಕೂಡ ಹೆಸರಿದೆಯಲ್ಲ ಪ್ರಭು ?

**ಪ್ರಭು** : ಶರಣರೆ ತಾವು ಒಳ್ಳೆಯ ಪ್ರಶ್ನೆಯನ್ನೇ ಕೇಳಿದಿರಿ . ಶಿವ ಎನ್ನುವುದು ಹೆಸರಲ್ಲ, ಹಾಗೆಯೇ ಪಾರ್ವತಿ ಅಥವಾ ಶಿವೆ ಎನ್ನುವುದು ಕೂಡಾ ಹೆಸರಲ್ಲ . ಇವೆರಡೂ ಹೆಸರಲ್ಲದ ಹೆಸರು .

**ಶರಣ** : ಅದು ಹೇಗೆ ಪ್ರಭು ?

**ಪ್ರಭು** : 'ಶಿವ ' ಎನ್ನುವವನು ಒಬ್ಬ ವ್ಯಕ್ತಿಯಲ್ಲ . ಹಾಗೆಯೇ 'ಶಿವೆ 'ಅಥವಾ 'ಪಾರ್ವತಿ ' ಎನ್ನುವ ಹೆಸರೂ ಕೂಡ ಕಾಯಕ್ಕೆ ಇಟ್ಟ ಹೆಸರಲ್ಲ . ಇಂತಹ ದೇವರಾಗಲಿ ಅಥವಾ ಕಾಯಗಳಾಗಲಿ ಇಲ್ಲವೇ ಇಲ್ಲ .

**ಶರಣ** : ಪ್ರಭು ಇಡೀ ಲೋಕವೇ ಅವರಿಬ್ಬರನ್ನು ದೇವರೆಂದು ನಂಬಿದೆ . ಹೀಗೆಂದ ಮೇಲೆ ಅದು ಅನುಭವಕ್ಕೆ ಬರುವುದು ಹೇಗೆ ಪ್ರಭು ?

**ಪ್ರಭು** : ಕಾಯದಲ್ಲಿ ಸಂಗಮವಾದ 'ಅರಿವು ' ಎನ್ನುವ ಗುರುದೇವನೇ ಮಹಾದೇವ. ಇವನನ್ನು ಸದಾಶಿವನೆಂದು , ಸಾಕ್ಷಾತ್ ಪರಬ್ರಹ್ಮನೆಂದು ಜ್ಞಾನಿಗಳು ಹೆಸರಿಟ್ಟು ಕರೆದಿದ್ದಾರೆ.

ಹಾಗೆಯೇ ಕಾಯವನ್ನು ಆವರಿಸಿದ ಮನದಿಂದಲೇ ಮಹಾದೇವನನ್ನು ಸದಾಶಿವನನ್ನು ಸಾಕ್ಷಾತ್ ಪರಬ್ರಹ್ಮನನ್ನು ತಿಳಿಯಬೇಕಾಗಿದೆ . ತಿಳಿದು ಆ ಶಿವನಲ್ಲಿ ಒಂದಾಗಬೇಕಾಗಿದೆ. ಹೀಗೆ ಒಂದಾಗುವ ಮನೋಮಯ ಕಾಯವನ್ನು 'ಶಿವೆ ' 'ಪಾರ್ವತಿ ' 'ಉಮೆ ' ಎಂದು ನಾನಾ ಹೆಸರನ್ನಿಟ್ಟು ಕರೆದಿದ್ದಾರೆ . ಹೀಗೆ 'ಶಿವೆ ' ಮತ್ತು 'ಪಾರ್ವತಿ ' ಇವರಿಬ್ಬರೂ ಇದ್ದ ಕಾಯವೇ ಕೈಲಾಸ . ಇವರಿಬ್ಬರನ್ನು ಒಂದು ಮಾಡುವ ಕಾಯಕದಲ್ಲಿ ತೊಡಗುವ ಕಾಯವೇ ಕೈಲಾಸ. ಹೀಗೆ ಕಾಯಕ್ಕೆ ಇಟ್ಟ ಹೆಸರನ್ನು ಕಾಯವೇ ಕಳೆದುಕೊಂಡು ಆ ಕೈಲಾಸವೇ ತಾನಾಗುವ ಕಾಯಕದಲ್ಲಿ ಕಾಯ ಮುಂದುವರಿಯಬೇಕಾಗಿದೆ . ಸತ್ಸಂಗದ ಉದ್ದೇಶವೂ ಕೂಡ ಅದೇ ಆಗಿರುವುದರಿಂದ ಕಾಯಕ್ಕೆ ಕರೆಯಲೆಂದು ಇಟ್ಟ ಹೆಸರು ಬಹಳ ಪ್ರಮುಖವೆಂದು ತಾವು ತಿಳಿಯಬೇಕಿಲ್ಲ. ಇದನ್ನು ತಾವೆಲ್ಲ ಗಮನದಲ್ಲಿಟ್ಟುಕೊಂಡು ತಮ್ಮ ಪರಿಚಯವನ್ನು ತಾವು ಈ ಸಭೆಗೆ ಮಾಡಬಹುದಾಗಿದೆ .

**ಚನ್ನಬಸವಣ್ಣ :** ಧನ್ಯ ಪ್ರಭು .

ನಮಗೆಲ್ಲಾ ಜ್ಞಾನವೆಂಬ ನಿರಾಳ ಕೂಸಿನ ಪರಿಚಯವನ್ನು ಮಾಡಿಕೊಟ್ಟಿರಿ , ಮನುಷ್ಯನಲ್ಲಿ ಎಂತಹ ಅದ್ಭುತವಾದ ಅರಿವಿನ ಮಹಾ ರಹಸ್ಯಅಡಗಿದೆ.ಇದನ್ನು ಕೇಳಿ ನಾವೆಲ್ಲ ಕೃತಾರ್ಥರಾದೆವು .

**ಬಸವಣ್ಣ :** ಸತ್ಯವಾದ ಮಾತನ್ನೇ ಸಕಲ ಶರಣರಿಗೆ ತಿಳಿಯುವಂತೆ ಹೇಳಿದಿರಿ ಪ್ರಭು. ತನ್ನ ಹೊರತಾಗಿ 'ಶಿವ ' ಮತ್ತು 'ಶಿವೆ 'ಎನ್ನುವವರು ಯಾರೂ ಇಲ್ಲವೆಂದು ಖಚಿತವಾಗಿ ತಿಳಿದುಕೊಳ್ಳುವಂತೆ ಹೇಳಿದಿರಿ ಎನ್ನೊಡೆಯ .

'ಶಿವ ''ಶಿವೆ 'ಯರು ವಾಸವಾಗಿದ್ದ ಕಾಯವೆಂಬ ಕೈಲಾಸವನ್ನೆ ಕಾಯಕ್ಕೆ ಪರಿಚಯಿಸಿದಿರಿ ಪ್ರಭುದೇವ . ತಮಗೆ ಶರಣು ಶರಣಾರ್ಥಿ. ಸತ್ಸಂಗದಲ್ಲಿ ಭಾಗಿಯಾದ ಸಕಲ ಶರಣರಿಗೂ ಕೈ ಮುಗಿದು ಸಭೆಗೆ ಮಂಗಳ ಹಾಡಿದರು .

# ಶಬ್ದ ಅರಿವಿನಿಂದ ನುಡಿಯದಿದ್ದರೆ ನುಡಿದ ತನುವನ್ನು ಕೇಳಿದ ತನುವನ್ನು ತನುವಿರುವವರೆಗೆ ಸುಡುತ್ತದೆ

ಸೂರ್ಯಾಸ್ತವಾಗುತ್ತಲಿದೆ , ಶರಣರು ಮಹಾಮನೆಯತ್ತ ಧಾವಿಸಿ , ವೇದಿಕೆಯ ಮೇಲೆ ಆಸೀನರಾದ ಅಲ್ಲಮಪ್ರಭುಗಳಿಗೆ , ಬಸವಣ್ಣ , ಚನ್ನಬಸವಣ್ಣರಿಗೆ ಕೈ ಮುಗಿದು ಶರಣು ಶರಣಾರ್ಥಿ ಎನ್ನುತ್ತಾ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುತ್ತಾರೆ.

**ಚನ್ನುಬಸವಣ್ಣ :** ಸಕಲ ಶರಣರಿಗೆ ಶರಣು ಶರಣಾರ್ಥಿ ಎಂದು ಕೈಮುಗಿದು ಸರ್ವರನ್ನು ಸ್ವಾಗತಿಸುತ್ತಾರೆ. ಬೆಳಗಿನ ಸಭೆಯಲ್ಲಿ ತಾವು ತಮ್ಮ ತಮ್ಮ ಪರಿಚಯ ಮಾಡಿಕೊಡುವ ಪ್ರಸ್ತಾಪ ಬಂದಿತ್ತು. ತಾವು ತಮ್ಮ ಪರಿಚಯವನ್ನು ಮಾಡಿಕೊಡಿ ಎನ್ನುತ್ತ ಆಸೀನರಾದರು.

**ಶರಣ :** ಎದ್ದು ನಿಂತು , ಸಭೆಗೆ ವೇದಿಕೆಗೆ ಕೈ ಮಗಿದು , ನಾನು ಅಮ್ಮಿದೇವಯ್ಯ ಎಂದು ಹೇಳಿ ಪುನಃ ಕೈ ಮುಗಿದು ಕುಳಿತುಕೊಂಡರು. ನಾನು ಕೇತಯ್ಯ , ಕಲಕೇತಯ್ಯ, ನನ್ನ ಹೆಸರು ಭೀಮಣ್ಣ , ನಾನು ಕಾಳಿಂಗದೇವ , ನಾನು ಬ್ರಹ್ಮಯ್ಯ , ನಾನು ಕೀಲಾರದ ಭೀಮಣ್ಣ , ನನ್ನ ಹೆಸರು ಕೂಗಿನ ಮಾರಯ್ಯ , ನಾನು ಕೊಟಾರದ ಸೋಮಣ್ಣ , ನನ್ನನ್ನು ಕೋಲ ಶಾಂತಯ್ಯ ಎಂದು ಕರೆಯುತ್ತಾರೆ ಪ್ರಭು .

ನಾನು ಗಜೇಶ ಮಸಣಯ್ಯ , ನನ್ನ ಹೆಸರು ಕಣ್ಣಪ್ಪ ; ಗಾಣದ ಕೆಲಸ ಮಾಡುತ್ತೇನೆ ಪ್ರಭು. ನನ್ನ ಹೆಸರು ಗಾವುದಿ ಮಾಚಣ್ಣ, ನನ್ನ ಹೆಸರು ಮಂಚಣ್ಣ , ನನ್ನ ಹೆಸರು ಮಲ್ಲಯ್ಯ ಗುರುಪುರ, ನಾನು ಗುರುಬಸವೇಶ್ವರ, ನನ್ನ ಹೆಸರು ಗುರುದತ್ತಯ್ಯ, ನನ್ನ ಹೆಸರು ಗಟ್ಟಿವಾಳಯ್ಯ ಪ್ರಭು.

ನಾನು ಚಂದಿಮರಸ , ನನ್ನ ಹೆಸರು ಕಾಮಣ್ಣ , ನನ್ನ ಹೆಸರು ಮಾಯಣ್ಣ,

ನಾನು ಢಕ್ಕೆಯ ಬೊಮ್ಮಣ್ಣ ಪ್ರಭು .

ನಾನು ಡೋಹರ ಕಕ್ಕಯ್ಯ ಪ್ರಭು , ನನ್ನ ಹೆಸರು ತಳವಾರ ಕಾಣಿದೇವಯ್ಯ ಬಸವರಸ. ನನ್ನ ಹೆಸರು ರಾಮಣ್ಣ , ದನ ಕಾಯುವ ಕೆಲಸ ಮಾಡುತಿದ್ದೇನೆ ಪ್ರಭು , ನನ್ನ ಹೆಸರು ಮಸಣಯ್ಯ, ನನ್ನ ಹೆಸರು ಸಿಂಗಿದೇವಯ್ಯ, ನಾನು ದಸರಯ್ಯ , ನನ್ನ ಹೆಸರು ಸಂಗಣ್ಣ.

ನನ್ನ ಹೆಸರು ನಗೆಯ ಮಾರಯ್ಯ , ನನ್ನ ಹೆಸರು ಸಂಗಯ್ಯ ಪ್ರಭು, ನಾನು ನುಲಿಯ ಚಂದಯ್ಯ ಎಂದು ಹೇಳುತ್ತ ಎಲ್ಲರೂ ಕುಳಿತುಕೊಳ್ಳುತ್ತಾರೆ. (ಮಹಾ ಸಂಪುಟದಲ್ಲಿಯ ಶರಣರ ಹೆಸರನ್ನು ತೆಗೆದುಕೊಳ್ಳಲಾಗಿದೆ ಇಲ್ಲಿ ಚರಿತ್ರೆ ಇತಿಹಾಸ ಮುಖ್ಯವಲ್ಲ, ಸಂವಾದಕ್ಕೆ ಮತ್ತು ಅದರ ತಿರುಳಿಗೆ ಆದ್ಯತೆ ಕೊಡಲಾಗಿದೆ)

**ಪ್ರಭು :** ಸಕಲ ಶರಣರಿಗೆ ಕೈ ಮುಗಿದು ತಾವುಗಳೆಲ್ಲ ಇನ್ನು ಮುಂದೆ ಕಲ್ಯಾಣದಲ್ಲಿ ಬಹಳಷ್ಟು ಅರಿವಿನ ಕೆಲಸ ಮಾಡಬೇಕಿದೆ. ಬಸವಣ್ಣ ಚನ್ನಬಸವಣ್ಣ ಇವರಿಬ್ಬರ ನಿರ್ದೇಶನದಲ್ಲಿ ನೀವು ಮುಂದುವರಿಯಿರಿ, ತಾವೆಲ್ಲ ತಮ್ಮ ತಮ್ಮ ಪರಿಚಯವನ್ನು ಮಾಡಿಕೊಂಡಿರಿ. ಕರೆಯಲು ಇಟ್ಟ ಹೆಸರು ಕಾಯವನ್ನು ಅಜ್ಞಾನಕ್ಕೆ ಕರೆದುಕೊಂಡು ಹೋಗುತ್ತದೆ. ಸರ್ವ ಶರಣರೂ ಇದನ್ನು

ಸೂಕ್ಷ್ಮವಾಗಿ ಗಮನಿಸುತ್ತ, ಶಬ್ಧವನ್ನು ಮೂಲಕ್ಕೆ ಹೋಗಿ ಕೇಳುವ ಕೆಲಸ ಕಿವಿಗೆ ಹಚ್ಚುವುದೇ ನೀವು ಮಾಡುವ ಇನ್ನು ಮುಂದಿನ ಪ್ರಯತ್ನ. ಶಬ್ದದ ಬಗ್ಗೆ ಚನ್ನಬಸವಣ್ಣನವರು ಸವಿವರವಾಗಿ ಹೇಳಲಿದ್ದಾರೆ.

**ಚನ್ನಬಸವಣ್ಣ** : (ಅಪ್ಪಣೆ ಪ್ರಭು ಎಂದು ಪ್ರಭುದೇವರಿಗೆ ಶರಣರಿಗೆ , ಬಸವಣ್ಣನವರಿಗೆ ಕೈ ಮುಗಿದರು )

''ಸು '' ಶಬ್ದ, ''ಕು ''ಶಬ್ದ ಶಬ್ದದಲ್ಲಿಯೇ ನೋಡಾ '

ಮನುಷ್ಯ ಸ್ವತಃ ತಾನೇ ಶಬ್ದವನ್ನು ಟಂಕಿಸಿ ಶಬ್ದಕ್ಕೆ ಒಂದು ಅರ್ಥವನ್ನು ಕೊಟ್ಟಿದ್ದಾನೆ. ಶಬ್ದದ ಅರ್ಥವನ್ನು ಆಲಿಸದೆ ನುಡಿಯದೇ ಮೈ ಮರೆತು ನುಡಿಯುತ್ತಾನೆ , ಮೈ ಮರೆತು ಕೇಳುತ್ತಾನೆ . ನುಡಿಯುವಾಗ ಕೇಳುವಾಗ ಮೈಮರೆತರೆ ಸಾಕು ಕಾಯದಲ್ಲಿ ಹುಟ್ಟಿದ ಶಬ್ದ ಕಾಯದ ಮೇಲೆಯೇ ಪ್ರಹಾರ ಮಾಡುತ್ತದೆ. ಶಬ್ದ ನುಡಿದ ಕಾಯವನ್ನು , ಶಬ್ದ ಕೇಳಿದ ಕಾಯವನ್ನು ಶಬ್ದ , ಅಗ್ನಿಯ ಉಂಡೆಯಂತೆ ತಾಗಿ , ಎರಡೂ ಕಾಯಗಳನ್ನು ಸುಡುತ್ತದೆ.

**ಕೇತಯ್ಯ** : ಅದು ಹೇಗೆ ಚನ್ನಬಸವಣ್ಣ ? ಕಾಯದಲ್ಲಿ ಹುಟ್ಟಿದ ಶಬ್ದ ಕಾಯವನ್ನೇ ಸುಡುತ್ತದೆ ಎಂದು ಹೇಳಿದಿರಿ. ಇದು ಆಶ್ಚರ್ಯವು. ರಹಸ್ಯಮಯವೂ ಆಗಿದೆ. ದಯವಿಟ್ಟು ವಿವರಿಸಿ ಹೇಳಿ ಎನ್ನೊಡೆಯ.

**ಚನ್ನಬಸವಣ್ಣ** : ಬೈಯುವಾಗ , ಹೊಗಳುವಾಗ , ಬೈಯುವ ಹೊಗಳುವ ಕಾಯಗಳೆರಡೂ ಶಬ್ದವನ್ನೆ ಬಳಸುತ್ತವೆ .

ಹೊಗಳುವ ಕಾಯ , ಬೈಯುವ ಕಾಯ ಒಂದೇ ಶಬ್ದವನ್ನು ಬಳಸಿ ಆ ಶಬ್ದವನ್ನು ಕಾಯದ ಮೇಲೆ ಎಸೆಯುತ್ತದೆ . ಕೇಳುವ ಕಾಯ ಒಂದು ಶಬ್ದವನ್ನು ಕೇಳಿ ನನ್ನನ್ನು ಹೊಗಳಿದನೆಂದು ಹಿಗ್ಗುತ್ತದೆ, ಆಗ ಆ ಶಬ್ದ 'ಸು' ಶಬ್ದವಾಗುತ್ತದೆ. ಮತ್ತೊಂದು ಕಾಯ ಅದೇ ಶಬ್ದವನ್ನು 'ಕು' ಶಬ್ದ , ವೆಂದು ಕೇಳಿ ತೊಂದರೆಗೆ ಒಳಗಾಗುತ್ತದೆ.

**ಅಮ್ಮಿದೇವಯ್ಯ** : ಇದೆಂಥ ವಿಚಿತ್ರ ಚನ್ನಬಸವಣ್ಣ ! ಒಂದೇ ಶಬ್ದ ಹೊಗಳುವುದಕ್ಕೂ, ಬೈಯುವುದಕ್ಕೂ ಬಳಕೆಯಾಗುತ್ತದೆ ಎಂದು ಹೇಳಿದಿರಿ. ಮನುಷ್ಯನಲ್ಲಿ ಅರಿವಿದ್ದರೂ , ಅಜ್ಞಾನದಿಂದ ನುಡಿಯುತ್ತಾನೆ. ಅಜ್ಞಾನದಿಂದ ಕೇಳುತ್ತಾನೆ ಎಂದಂತಾಯಿತಲ್ಲ.

**ಚನ್ನಬಸವಣ್ಣ** : ಹೌದು ಶರಣರೆ ಅದನ್ನೆ ಹೇಳುವೆ , ನಿಧಾನವಾಗಿ ಕೇಳಿ.

ಒಂದು ಕಾಯ ಮತ್ತೊಂದು ಕಾಯಕ್ಕೆ 'ಕತ್ತೆ 'ಯಂಥವನೇ ನಿನ್ನ ಅರಿವು ಮರೆವಾಗಿದೆಯೆ ಹೇಗೆ ಎಂದು ನುಡಿದರೆ, ಕೇಳಿದ ಕಾಯ ತನ್ನನ್ನು ಬೈದನೆಂದು ಕೇಳಿಸಿಕೊಳ್ಳುತ್ತದೆ, ದೇಹದಲ್ಲಿ ಅಗ್ನಿ ಪ್ರವೇಶವಾಗುತ್ತದೆ , ಆ ಅಗ್ನಿಯಿಂದ ಶಬ್ದ ಕೇಳಿದ ಕಾಯ ಕತಕತನೆ ಕುದಿಯುತ್ತದೆ . ಹಾಗೆಯೇ ಬಯ್ಯುವುದಕ್ಕಾಗಿ ಕತ್ತೆ ಎಂಬ ಶಬ್ದವನ್ನು ನುಡಿದ ಕಾಯ ಕೂಡಾ ಕತಕತನೆ ಕುದಿಯುತ್ತದೆ .

ಕಾಯದ ಮೂಲಕ 'ಕತ್ತೆ 'ಎನ್ನುವ ಶಬ್ದ ಹೊರಬರುವಾಗ ಕಾಯದಲ್ಲಿ ಅಗ್ನಿ ಸೃಷ್ಟಿ

ಮಾಡಿ ಹೊರಬರುತ್ತದೆ. ಹಾಗೆಯೇ ಆ ಶಬ್ದವನ್ನು ನನಗೆ ನುಡಿದನೆಂದು ಹಚ್ಚಿಕೊಂಡು ಕೇಳಿದ ಕಾಯ ಕೂಡ ಕತಕತನೆ ಕುದ್ದು ಕತ್ತೆ ನಾನಲ್ಲ ನೀನೆ ಎಂದು ಮರು ನುಡಿಯುತ್ತದೆ.

ಆಗ ಎರಡೂ ಕಾಯಗಳಲ್ಲಿ ಕಿಚ್ಚು ಹೊತ್ತಿಕೊಂಡು ಎರಡೂ ಕಾಯಗಳೂ ಧಗ ಧಗನೆ ಉರಿಯುತ್ತವೆ . ಒಂದು ಶಬ್ದ ಎರಡೂ ಕಾಯಗಳಲ್ಲಿ ಯುದ್ದವನ್ನು ಸೃಷ್ಟಿ ಮಾಡುತ್ತದೆ. ಇದನ್ನು 'ಕು ' ಶಬ್ದವೆಂದು ಕಾಯ ಸ್ವೀಕರಿಸುತ್ತದೆ. ಇದನ್ನು ಕು ಶಬ್ದವೆಂದು ಕಾಯ ನುಡಿಯುತ್ತದೆ .

**ಬ್ರಹ್ಮಯ್ಯ :** ಒಂದು ಶಬ್ದದಲ್ಲಿ ಇಷ್ಟೊಂದು ರಹಸ್ಯ ಅಡಗಿದೆಯಲ್ಲ ಎನ್ನೊಡೆಯ! ಶಬ್ದಕ್ಕೆ ಅರ್ಥಕೊಟ್ಟ ಕಾಯ ಆ ಸಂದರ್ಭದಲ್ಲಿ, ಆ ಶಬ್ದದ ಅರ್ಥ ತಿಳಿಯಲಿಲ್ಲ , ಕತ್ತೆ ತಾನಲ್ಲದಿದ್ದರೂ, ಕತ್ತೆ ತಾನೆ ಎಂದು ಆ ಶಬ್ದವನ್ನು ಹಚ್ಚಿಕೊಂಡು ಕೇಳಿದ್ದು ಕಾಯದ ತಪ್ಪೆ ಹೇಗೆ ? ಆ ಕಾಯ ಕತ್ತೆಯಲ್ಲದಿದ್ದರೂ 'ಕತ್ತೆ ' ಎಂದು ಮೂದಲಿಸಿ ನುಡಿದದ್ದಕ್ಕಾಗಿ ನುಡಿದ ಕಾಯಕ್ಕೂ ತೊಂದರೆಯಾಯಿತಲ್ಲ ಚನ್ನಬಸವಣ್ಣ?

**ಚನ್ನಬಸವಣ್ಣ :** ಹೌದು ಬ್ರಹ್ಮಯ್ಯ ಶರಣರೇ ,

ಸರಿಯಾಗಿ ಅರಿವಿನಿಂದ ಆಲಿಸಿ ನುಡಿದಿರಿ.

**ಮಾರಯ್ಯ:** 'ಕತ್ತೆ 'ಎನ್ನುವ ಒಂದು ಶಬ್ದವನ್ನು ಅಜ್ಞಾನದಿಂದ ಕೇಳಿದರೆ , ಅಜ್ಞಾನದಿಂದ ನುಡಿದರೆ ಮಾತ್ರ ಎರಡೂ ಕಾಯಗಳಿಗೂ ತೊಂದರೆಯಾಗುತ್ತದೆ ಎಂದು ಹೇಳಿದಿರಿ. ಆದರೆ ಇದೆ ಶಬ್ದದಿಂದ ಸುಖವಾಗುತ್ತದೆ . ಎಂದು ಹೇಳಿದಿರಲ್ಲ ಅದು ಹೇಗೆ ಚನ್ನಬಸವಣ್ಣ?

**ಚನ್ನಬಸವಣ್ಣ :** ಹಗಲಿರುಳೆನ್ನದೇ 'ಕತ್ತೆ ' ದುಡಿದಂತೆ ದುಡಿಯುತ್ತಾನೆ ಈ ಮನುಷ್ಯ; ಇದ್ದರೆ ಹೀಗಿರಬೇಕೆಂದು ನುಡಿದರೆ , ಆ ' ಕತ್ತೆ ' ಎಂದು ಕೇಳಿದ ಶಬ್ದದಿಂದಲೆ ಕಾಯಕ್ಕೆ ಸುಖವಾಗುತ್ತದೆ .

ನುಡಿದ ಕಾಯದ ಬೇಡಿಕೆಯೂ ಈಡೇರುತ್ತದೆ .

ಈ ಶಬ್ದವನ್ನು ಕೇಳಿ ಸುಖಪಟ್ಟ ಕಾಯ ಸು ಶಬ್ದವೆಂದು ಆಲಿಸುತ್ತದೆ. ನುಡಿದ ಕಾಯ ಕೂಡ 'ಸು ' ಶಬ್ದವೆಂದು ನುಡಿದು ತನ್ನ ಬೇಡಿಕೆಯನ್ನು ಈಡೇರಿಸಿಕೊಳ್ಳುತ್ತದೆ. ಹೀಗಾಗಿ ''ಕು ಶಬ್ದ 'ಸು ' ಶಬ್ದ ಶಬ್ದದಲ್ಲಿಯೇ ನೋಡಾ''

ಶಬ್ದವೂ ಅಪ ಶಬ್ದವೂ ಶಬ್ದದಲ್ಲಿಯೆ ಕಾಣಬಹುದು, ಕಾಣಿರೋ !

ಇದ್ದವರು ಇದ್ದ ಸ್ಥಲವನೆ ನುಡಿವರು , ಅದಕದು ಸಹಜ .

ಲಿಂಗದ ನಡೆ , ಲಿಂಗದ ನುಡಿ , ಲಿಂಗದ ನೋಟ ,

ಕೂಡಲಚೆನ್ನ ಸಂಗಾ ನಿಮ್ಮ ಶರಣಂಗೆ .

ಎಂದು ಒಂದೇ ಮಾತಿನಲ್ಲಿ ಹೇಳಿದೆ ಶರಣರೆ. ಈ ಸೂತ್ರವನ್ನು ತಾವು ಆಪತ್ಕಾಲಕ್ಕೆ ಸಿಲುಕಿದಾಗ ಅರಿವಿನಿಂದ ಶಬ್ದ ಆಲಿಸಿ , ಕಾಯಕ್ಕೆ ತೊಂದರೆಯುಂಟಾಗದಂತೆ ಎಚ್ಚರದಿಂದ ಜೀವನ ಮುಂದುವರಿಸಿ . ಇದು ಸಕಲ ಶರಣರ ಕೆಲಸವಾಗಬೇಕು. ಕಾಯದಿಂದ ಹೀಗೆ ಮಾಡುವ ಕಾಯಕವೆ ನಿಜ ಕಾಯಕ . ಸದಾ ನಿಜ ಕಾಯಕದಲ್ಲಿ ಸತ್ಯ ಶುದ್ಧ ಕಾಯಕದಲ್ಲಿ ತೊಡಗುವುದೇ ಕಾಯದ ಕಾಯಕವಾಗಬೇಕು .

**ಪ್ರಭು** : ಇಂದಿನ ಸಭೆಗೆ ಇಲ್ಲಿಗೆ ಮಂಗಳ ಹಾಡೋಣ ನಾಳೆ ಬೆಳಿಗ್ಗೆ ನನ್ನ ಕೆಲಸದ ನಿಮಿತ್ಯ ಸೊನ್ನಲಾಪುರಕ್ಕೆ ಹೋಗಬೇಕಾಗಿದೆ.

ತಾವೆಲ್ಲಾ ನನಗೆ ಅಪ್ಪಣೆ ಕೊಡಲು ವಿನಂತಿ.

**ಭೀಮಣ್ಣ** : ತಾವು ಹೋದರೆ ಹೇಗೆ ಪ್ರಭು ? ನಮಗೆ ತಿಳಿ ಹೇಳುವ ತಾವೇ ಇಲ್ಲದಿದ್ದರೆ ಹೇಗೆ , ತಾವು ಇರಲೇಬೇಕು ಎಂದು ಶರಣರತ್ತ ನೋಡಿದಾಗ ಸಕಲ ಶರಣರು ತಾವು ಹೋಗಬೇಡಿ ಎಂದು ದು:ಖದಿಂದ ಕೂಗಿ ಹೇಳಿದರು.

**ಪ್ರಭು** : ನಾನು ಪುನಃ ಬರುತ್ತೇನೆ ಚಿಂತಿಸಬೇಡಿ ಶರಣಾರ್ಥಿ .

ಬಸವಣ್ಣ , ಚನ್ನಬಸವಣ್ಣ ಹಾಗೂ ತಾವೆಲ್ಲರೂ ಸೇರಿ ಈ ಸತ್ಸಂಗವನ್ನು ಹೀಗೆ ಮುಂದುವರೆಸಿ, ನಾನು ಪುನಃ ಕೆಲ ದಿನಗಳಲ್ಲಿ ಬಂದು ತಮ್ಮನ್ನು ಸೇರುವೆ . ಸಕಲ ಶರಣರು ಭಾರದಿಂದ ಪ್ರಭುಗಳನ್ನು ಬೀಳ್ಕೊಟ್ಟರು .

## ನೋಡಲು ಬಾರದ ಬಾಯಿ ನೋಡಿದೆನೆಂದು ನುಡಿಯುವುದು ಹುಸಿಯಲ್ಲವೆ!

ಭೂಮಿಯ ಮೇಲೆ ಆವರಿಸಿದ ಕತ್ತಲನ್ನು ಸೂರ್ಯ ನುಂಗುವುದು ಶರಣರಿಗೆ ಗೋಚರಕ್ಕೆ ಬರುತ್ತಲಿದೆ. ಹೀಗೆಯೇ ಭೂಮಿಯ ಮೇಲಿರುವ ಸಕಲ ತನುಗಳ ಅಜ್ಞಾನವನ್ನು ಜ್ಞಾನ ಸೂರ್ಯ ಕೂಡಲೇ ನುಂಗಬಾರದೇ ಎಂದು ತಮಗೆ ತಾವೆ ಮಾತನಾಡಿಕೊಳ್ಳುತ್ತಾ ಶರಣರು ಮಹಾಮನೆಯೆಡೆಗೆ ನಡೆಯುತ್ತಿದ್ದಾರೆ.

ವೇದಿಕೆಯ ಮೇಲೆ ಕುಳಿತಿದ್ದ ಬಸವಣ್ಣ ಚನ್ನಬಸವಣ್ಣನವರಿಗೆ ಕೈ ಮುಗಿದು ಶರಣು ಶರಣಾರ್ಥಿ ಎಂದು ತಮ್ಮ ತಮ್ಮ ಆಸನದಲ್ಲಿ ಕುಳಿತುಕೊಳ್ಳುತ್ತಾರೆ.

ಸತ್ಸಂಗದ ಸುದ್ದಿ ಕಲ್ಯಾಣದ ತುಂಬಾ ಪಸರಿಸಿ ಮಹಾಮನೆಗೆ ಸಾಕಷ್ಟು ಮಹಿಳೆಯರು ಕೂಡಾ ಆಗಮಿಸಿದ್ದಾರೆ. ಬಸವಣ್ಣನವರ ಅಕ್ಕ, ಅಕ್ಕಮ್ಮ ಮಹಿಳೆಯರೊಂದಿಗೆ ಸಭೆಯ ಮುಂದುಗಡೆ ಆಸೀನರಾಗಿದ್ದಾರೆ .

**ಬಸವಣ್ಣ** : ಎದ್ದು ನಿಂತು ಸಕಲ ಶರಣ ಶರಣೆಯರಿಗೆ ಕೈ ಮುಗಿದು ಶರಣು ಶರಣಾರ್ಥಿ ಎಂದು ಸರ್ವರನ್ನು ಸ್ವಾಗತಿಸಿದರು. ನಿನ್ನೆ ಸತ್ಸಂಗದ ಸಭೆಯಲ್ಲಿ ಶಬ್ದದ ಬಗ್ಗೆ ಚನ್ನಬಸವಣ್ಣ ಸಕಲ ಶರಣರಿಗೂ ತಿಳಿಯುವಂತೆ ವಿವರಿಸಿ ಹೇಳಿದರು . ಅವರಿಗೆ ಧನ್ಯವಾದಗಳು. ಇಂದು ಕೂಡ ಶಬ್ದದ ಬಗ್ಗೆ ಮುಂದುವರೆಸೋಣ.

ಕಣ್ಣು , ಕಿವಿ ,ಮೂಗು , ನಾಲಿಗೆ , ಚರ್ಮ ಇವುಗಳಿಗೆ ಮಾತು ಬರುವುದಿಲ್ಲ. ಕಣ್ಣು ನೋಡುತ್ತದೆ; ಅದಕ್ಕೆ ನುಡಿಯಲು ಬರುವುದಿಲ್ಲ, ಕಿವಿ ಕೇಳುತ್ತದೆ ಅದಕ್ಕೆ ನುಡಿಯಲು ಬರುವುದಿಲ್ಲ, ಮೂಗು ಮೂಸಿಸುತ್ತದೆ , ನುಡಿಯಲು ಬರುವುದಿಲ್ಲ, ಚರ್ಮ ಸ್ಪರ್ಶಿಸುತ್ತದೆ ಅದಕ್ಕೆ ನುಡಿಯಲು ಬರುವುದಿಲ್ಲ . ನಾಲಿಗೆ ರುಚಿಸುತ್ತದೆ ಅದಕ್ಕೂ ನುಡಿಯಲು ಬರುವುದಿಲ್ಲ,

ನೋಡಲು ಬಾರದ ಬಾಯಿ ನೋಡಿದೆನೆಂದು ನುಡಿದು ಹೇಳುತ್ತದೆ. ನೋಡಿದ್ದು ಕಣ್ಣು; ನೋಡಿದೆನೆಂದು ನುಡಿದದ್ದು ಬಾಯಿ! ನೋಡಲು ಬಾರದ ಬಾಯಿ ನಾನು ನೋಡಿದೆನೆಂದು ಹೇಳುವುದು ಹುಸಿಯಲ್ಲವೇ?

ನೋಡಿದ ಕಣ್ಣು , ನೋಡಿದೆನೆಂದು ಹೇಳದೆ ನೋಡಿ ಸುಮ್ಮನೆ ಇದೆ.

ಆದರೆ ನೋಡಲು ಬಾರದ ಬಾಯಿ ನಾನು ನೋಡಿದೆನೆಂದು ಎದೆ ತಟ್ಟಿ ಹೇಳುವುದು ಹುಸಿ ನುಡಿದಂತಾಗಲಿಲ್ಲವೇ?

ಆದರೂ ಕೂಡ ನಾನು ನೋಡಿದ್ದು ಸುಳ್ಳಲ್ಲ ಎಂದು ಬಾಯಿ ಸುಳ್ಳು ಹೇಳುತ್ತದೆ. ಈ ಸುಳ್ಳನ್ನು ನಿಲ್ಲಿಸುವುದು ಹೇಗೆ?

ಕಣ್ಣಿನಿಂದ ನೋಡುವ ದೃಶ್ಯ ಬಾಯಿಗೆ ಬಂದು ನುಡಿಯುವುದರಲ್ಲಿ ಸತ್ಯ ಸೋರಿ ಹೋಗುತ್ತದೆ .

ಕಣ್ಣು ತಾನು ನೋಡಿದಂತೆ ಬಾಯಿ ನುಡಿಯಲಿಲ್ಲವೆಂದು ಕಣ್ಣು ತನ್ನ ದೃಶ್ಯದಿಂದಲೇ ಬಾಯಿಗೆ ಮತ್ತು ಇಡೀ ಕಾಯಕ್ಕೆ ಪಾಠ ಮಾಡುವುದನ್ನು ಆಲಿಸಿದರೂ, ಕಣ್ಣು ನೋಡಿದಂತೆ ನಾನು ನುಡಿಯಲಿಲ್ಲವಲ್ಲ ಎಂದು ದು:ಖದಿಂದ ಒಮ್ಮೆಯೂ ಬಾಯಿ ಗೋಗರೆಯಲಿಲ್ಲ .

''ಹುಸಿಯ ನುಡಿಯಲು ಬೇಡ'' ಎಂದು ದೃಶ್ಯದಿಂದಲೇ ಹೇಳುವ ಕಣ್ಣಿನ ದೃಶ್ಯದ ಮಾತನ್ನು ಬಾಯಿಯು ಒಮ್ಮೆಯೂ ಪಾಲಿಸುವುದಿಲ್ಲ.

**ಅಕ್ಕಮ್ಮ :** ಬಸವಣ್ಣ ಅದೆಂತಹ ಅದ್ಭುತವಾದ ಸೂತ್ರವನ್ನು ಮನುಕುಲಕ್ಕೆ ಹೇಳಿದೆ ನನ್ನಯ್ಯ! ನಾನು ಧನ್ಯನಾದೆ . ನನ್ನಂತೆಯೇ ಈ ಸಭೆಗೆ ಬಂದ ಶರಣ ಶರಣೆಯರೆಲ್ಲ ಧನ್ಯರಾದರು . ಈ ವಿಷಯವನ್ನೆ ಮುಂದುವರಿಸಿ ಮತ್ತಷ್ಟು ಹೇಳಿ ಬಸವಣ್ಣ.

**ಬಸವಣ್ಣ :** ಆಗಲಿ ಅಕ್ಕ, ತಮ್ಮ ಆಜ್ಞೆ ,

ತಮ್ಮ ಆಶಿರ್ವಾದದಿಂದಲೆ ಈ ಸೂತ್ರ ತನುವಿನ ಮೂಲಕ ಹೊರಬಂತು . ಎನ್ನ ಅಂಗದಲ್ಲಿ ಸಂಗಮವಾದ ಅರಿವಿನ ಸಂಗಯ್ಯನೆ ನುಡಿದು ಹೇಳಿದ. ಆತ ನುಡಿದು ಹೇಳಿದಂತೆ ನಾನು ಹೇಳಿದೆ.

ಮನೋಮಯವಾದ ಕಣ್ಣು ಕಣ್ಣನ್ನು ಆವರಿಸಿದೆ. ಕಣ್ಣಿನಲ್ಲಿ ಅರಿವಿನ ಸಂಗಯ್ಯ ಸಂಗಮವಾಗಿದ್ದಾನೆ. ಅರಿವಿನ ದೃಶ್ಯ ಅರಿವಿನಿಂದ ನೋಡಿ ಸುಮ್ಮನಾಗುತ್ತದೆ. ಏನನ್ನೂ ಹೇಳಲು, ದೇಹಕ್ಕೆ ಆದೇಶ ಮಾಡಲು, ಕಣ್ಣಿನ ಈ ದೃಶ್ಯಕ್ಕೆ ಬರುವುದಿಲ್ಲ.

ಮನೋಮಯವಾದ ದೃಶ್ಯ ಹಾಗಲ್ಲ, ಅದು ನೋಡುವಾಗ ಹಾದರದಿಂದ ನೋಡಬೇಕು ಎನ್ನುವ ದುರಾಸೆ ದೃಶ್ಯದಲ್ಲಿ ಇದೆ. ಹೀಗಿರುವುದರಿಂದ ನೋಡಿ ಹಾದರ ಮಾಡುತ್ತದೆ. ಆದರೆ ನೋಡಿದಂತೆ ನುಡಿಯಲು ದೇಹಕ್ಕೆ ಆದೇಶ ಮಾಡುವುದಿಲ್ಲ.

ಹಾದರ ಭಾವದಿಂದ ನೋಡಿದ ದೃಶ್ಯ , ಸೋದರ ಭಾವದಿಂದ ನುಡಿಯಲು ಬಾಯಿಗೆ ಹೇಳುತ್ತದೆ. ನೋಡಿದಂತೆ ನುಡಿಯಲು ಹೇಳುವ ಶಕ್ತಿ ಮನೋಮಯ ದೃಶ್ಯಕ್ಕಿಲ್ಲ. ಹಾದರದಿಂದ ನೋಡಿ ಅಕ್ಕ ,ತಂಗಿ ,ಸೊಸೆ , ನೆಗೆಣ್ಣೆ ,ಚಿಕ್ಕವ್ವ ಎಂದು ನುಡಿದು ಹೇಳಲು, ಮನೋಮಯವಾದ ದೃಶ್ಯ ಬಾಯಿಗೆ ಆದೇಶ ನೀಡುತ್ತದೆ .

ನೋಡಿದಂತೆ ನುಡಿದರೆ ದೇಹಕ್ಕೆ ಪೆಟ್ಟು ಬೀಳುತ್ತದೆ. ಹೀಗಾಗಿ ಹಾದರದಿಂದ ನೋಡಿ ಸೋದರ ಭಾವದಿಂದ ಸುಳ್ಳು ನುಡಿಯಲು ಮನೋಮಯವಾದ ದೃಶ್ಯ ಬಾಯಿಗೆ ಹೇಳುತ್ತದೆ.

ಕಣ್ಣಿನಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನ ದೃಶ್ಯ ನೀನು ಸರಿಯಾಗಿ ನೋಡಲಿಲ್ಲವೆಂದು, ಹಾಗೆಯೇ ನೀನು ನೋಡಿದಂತೆ ನುಡಿಯಲು ಬಾಯಿಗೆ ಆದೇಶ ನೀಡಲಿಲ್ಲವೆಂದು ಜರಿದು ನುಡಿಯುತ್ತಾನೆ.

ನೋಡಿದ ತಪ್ಪು , ಹುಸಿ ನುಡಿದ ತಪ್ಪು ಎರಡು ತಪ್ಪುಗಳು ತನುವಿನಲ್ಲಿಯೇ ಉಳಿಯುವಂತೆ ಮಾಡಿ ಅರಿವಿನ ಸಂಗಯ್ಯ ಕಣ್ಣು ಮತ್ತು ಬಾಯಿ ಮಾಡಿದ ತಪ್ಪುಗಳನ್ನು ಮತ್ತೆ ಮತ್ತೆ ಅವುಗಳಿಗೆ ನೆನಪಿಸಿ ಇಡೀ ತನುವಿಗೆ ಸಂಕಟವನ್ನು ಒಡ್ಡುತ್ತಾನೆ. ಈ ಶಿಕ್ಷೆಯ ಅರಿವು ಕಣ್ಣು ಮತ್ತು ಬಾಯಿಗೆ ಕಾಯ ಇರುವವರೆಗೆ ಆಗುವುದೇ ಇಲ್ಲ.

**ರಾಯಮ್ಮ** : ಕಣ್ಣಿನಲ್ಲಿ ಮನೋಮಯವಾದ ''ನಾನು '' ಎನ್ನುವ ದೃಶ್ಯಕ್ಕೆ 'ಅರಿವು ' ಎನ್ನುವ ಸಂಗಯ್ಯನ ದೃಶ್ಯವು ಅರಿವಿನಿಂದ ನೋಡಿ , ಅಜ್ಞಾನದ ದೃಶ್ಯಕ್ಕೆ ಸದಾ ಪಾಠ ಮಾಡುತ್ತಾನೆ ಎಂದಂತಾಯಿತಲ್ಲ ಬಸವಣ್ಣನವರೆ.

**ಬಸವಣ್ಣ** : ಆಹಾ ! ಎಷ್ಟೊಂದು ಸರಳವಾಗಿ ಅರಿತುಕೊಂಡಿರಿ ತಾಯಿ.

ಕಣ್ಣಿನಲ್ಲಿ ಸದಾ ಅರಿವಿನ ಪಾಠ ನಡೆದರೂ ಅಜ್ಞಾನ ದೃಶ್ಯ ಸುಖದಲ್ಲಿ ಮನೋಮಯವಾದ ದೃಶ್ಯ ಮುಳುಗಿ ಹೋಗಿದೆ. ಈ ದೃಶ್ಯಕ್ಕೆ ಅರಿವಿನ ಸಂಗಯ್ಯನ ದೃಶ್ಯದ ಪಾಠ ಕೇಳುವುದೇ ಇಲ್ಲ .

ಕಾಯ ಇರುವವರೆಗೆ ಜ್ಞಾನ ಅಜ್ಞಾನದ ದೃಶ್ಯ ಯುದ್ದದಲ್ಲಿ ಕಾಯ ಮುಳುಗಿ ಹೋಗುತ್ತದೆ. ಹಾಗೆಯೇ ಒಮ್ಮೆ ಕಾಯ ಇಲ್ಲವಾಗುತ್ತದೆ.

ಅರಿವಿನ ದೃಶ್ಯದ ಸುಖವನ್ನು ಕಣ್ಣು ಅನುಭವಿಸದೇ ಸತ್ತು ಹೋಗುತ್ತದೆ. ಇಂತಹ ಕಠಿಣ ಪ್ರಸಂಗದಲ್ಲಿಯೂ ತಾವು ಈ ಒಂದು ದಿನದ ಸಭೆಯಲ್ಲಿಯೇ ತಿಳಿದುಕೊಂಡು ಸಂತೋಷವನ್ನು ವ್ಯಕ್ತ ಪಡಿಸಿದ್ದಕ್ಕಾಗಿ ನಾನು ನಿಮಗೆ ಚಿರಋಣಿ. ನಿಮ್ಮ ಪಾದಕ್ಕೆ ಶರಣು ಶರಣಾರ್ಥಿ ತಾಯಿ.

**ರಾಯಮ್ಮ** : ಬಸವರಸ ನಾನು ಅಲ್ಪಳು . ತಾವು ಇಂತಹ ದೊಡ್ಡ ಮಾತುಗಳಿಂದ ನನ್ನನ್ನು ಹೊಗಳಬಹುದೇ? ನಾನೇನಿದ್ದರೂ ತಮ್ಮ ಸೇವೆಯಲ್ಲಿ ಸದಾ ನಿರತಳಾಗಿರಬೇಕೆಂದು ನಿರ್ಧರಿಸಿರುವೆ. ತಮ್ಮ ಶ್ರೀಚರಣ ಕಮಲಗಳಿಗೆ ಶರಣು ಶರಣಾರ್ಥಿ ಎನ್ನೊಡೆಯ.

**ಬಸವಣ್ಣ** : ದೊಡ್ಡವರು ಸಣ್ಣವರು ಹೆಣ್ಣು ಗಂಡು ಎನ್ನುವ ಬೇಧ ಅರಿವಿನ ಕಣ್ಣಲ್ಲಿ ಇಲ್ಲ ತಾಯಿ . ಹೆಣ್ಣಾದರೇನು ಗಂಡಾದರೇನು? ಈ ದೇಶದ ಕಾಯವಾದರೇನು ಮತ್ತೊಂದು ದೇಶದ ಕಾಯವಾದರೇನು? ಕಣ್ಣು ಕಣ್ಣೇ ಆಗಿದೆ.

ಕಣ್ಣು ಹೆಣ್ಣಲ್ಲ ಗಂಡಲ್ಲ, ಕಣ್ಣಿನ ದೃಶ್ಯದ ಭಾಷೆ ಒಂದೇ ಆಗಿದೆ. ಅದರಲ್ಲಿ ಬೇರಾಗದಂತೆ ಬೆರೆತ ಜ್ಞಾನ ಅಜ್ಞಾನ ದೃಶ್ಯಗಳನ್ನು ಕಣ್ಣಿನ ಜ್ಞಾನದಿಂದಲೇ ಬೇರ್ಪಡಿಸಿಕೊಂಡು ಕಣ್ಣಲ್ಲಿರುವ ಅಜ್ಞಾನ ದೃಶ್ಯವನ್ನು ಜ್ಞಾನ ದೃಶ್ಯದಿಂದಲೇ ಸುಟ್ಟು ಹಾಕಬೇಕು .

**ಚನ್ನಬಸವಣ್ಣ** : ''ಹುಸಿಯ ನುಡಿಯಲು ಬೇಡ '' ಎನ್ನುವ ಮಹಾ ಸೂತ್ರವನ್ನು ಸಕಲ ಶರಣರಿಗೂ ಶರಣೆಯರಿಗೂ ತಿಳಿಯುವಂತೆ ಹೇಳಿದಿರಿ ಬಸವರಸರೆ . ತಮಗೆ ಶರಣು ಶರಣಾರ್ಥಿ. ಸಕಲ ಶರಣ ಶರಣೆಯರಿಗೂ ಶರಣು ಶರಣಾರ್ಥಿ ಎನ್ನುತ್ತಾ ಸಭೆಗೆ ಮಂಗಳ ಹಾಡಿದರು.

## ಕಾಯ ಕಾಯಕ್ಕೆ ಗುರುವಾಗಲು ಬರುವುದಿಲ್ಲ ಶಿಷ್ಯನಾಗಲು ಬರುವುದಿಲ್ಲ

ಸಂಜೆ ಸಮಯ ಕತ್ತಲು ಬೆಳಕನ್ನು ನುಂಗಿ ಹಾಕುವುದು ಗೋಚರಕ್ಕೆ ಬರುತ್ತಲಿದೆ. ಶರಣರು ಮಹಾ ಮನೆಯತ್ತ ಸಾಗಿ ತಮ್ಮ ತಮ್ಮ ಸ್ಥಾನದಲ್ಲಿ ಶರಣು ಹೇಳಿ ಕುಳಿತುಕೊಳ್ಳುತ್ತಾರೆ.

**ಚನ್ನಬಸವಣ್ಣ** : ಸಕಲ ಶರಣರನ್ನು ಸ್ವಾಗತಿಸಿ, ಶರಣು ಶರಣಾರ್ಥಿ ಎಂದು ಕೈ ಮುಗಿದು, ಬೆಳಗಿನ ವಿಷಯದಲ್ಲಿ 'ಹುಸಿಯ ನುಡಿಯಲು ಬೇಡ' ಎನ್ನುವ ಸೂತ್ರ ಪ್ರಸ್ತಾಪಿಸಿ ತನುವಿನ ಕಣ ಕಣದಲ್ಲಿ ತುಂಬಿದ ಹುಸಿಯನ್ನು ಹೇಗೆ ಬಿಡಿಸಿಕೊಳ್ಳಬೇಕು ಎಂಬುವುದನ್ನು ವಿವರಿಸಿದಿರಿ ಬಸವಣ್ಣ .

ತಮಗೆ ಕೋಟಿ ಕೋಟಿ ವಂದನೆಗಳು. ಈ ವಿಷಯವನ್ನೇ ಮುಂದುವರೆಸಿರಿ ಬಸವಣ್ಣ.

**ಅಕ್ಕಮ್ಮ** : ಬಸವರಸ ಮತ್ತೊಬ್ಬರಿಗೆ ತೊಂದರೆಯಾಗದಂತೆ ಹುಸಿ ನುಡಿಯದೇ ಸತ್ಯ ಪಾಲನೆ ಮಾಡಬಹುದು. ಆದರೆ ತನುವನ್ನು ಆವರಿಸಿದ ಹುಸಿಯನ್ನು ತನುವಿನಲ್ಲಿಯೇ ತನ್ಮಯವಾದ ಜ್ಞಾನದ ಮೂಲಕ ಕಳೆದುಕೊಳ್ಳುವುದು ಬಲು ಜಟಿಲವಾದ ಕಾಯಕ. ತನುವಿನಲ್ಲಿ ಹುಸಿ ತುಂಬಿದೆ ಎನ್ನುವುದು ಕೂಡ ತನುವಿಗೆ ಗೊತ್ತಾಗದಂತಹ ಅಜ್ಞಾನದ ಸ್ಥಿತಿಯಲ್ಲಿ ತನುವಿದೆಯಲ್ಲ ಬಸವಣ್ಣ?

**ಬಸವಣ್ಣ** : ಹೌದು ಅಕ್ಕ , ಸರಿಯಾಗಿಯೇ ಹೇಳಿದಿರಿ.

ತನುವಿನ ಅಜ್ಞಾನ ತನುವಿಗೆ ಗೊತ್ತು ಮಾಡಿಸುವ ಜ್ಞಾನ ಶಕ್ತಿ ಕೂಡ ತನುವಿನಲ್ಲಿಯೆ ಇದೆ. ಆ ಜ್ಞಾನ ಶಕ್ತಿಯಿಂದಲೇ ಅಜ್ಞಾನವನ್ನು ಕಳೆದುಕೊಳ್ಳಬೇಕು.

**ಕೀಲಾರದ ಭೀಮಣ್ಣ** : ಅದು ಹೇಗೆ ಎನ್ನುವುದು ನಮಗೆ ತಿಳಿಯುವಂತೆ ಹೇಳಿ ಎನ್ನೊಡೆಯ .

**ಬಸವಣ್ಣ** : ಸ್ಥೂಲ ಕಾಯದಲ್ಲಿ ಜ್ಞಾನಕಾಯ ಒಂದಿದೆ .

ಹಾಗೆಯೇ ಸ್ಥೂಲ ಕಾಯವನ್ನು ಮನೋಮಯವಾದ ಕಾಯ ಆವರಿಸಿದೆ.

ಕಾಯ ಈ ಎರಡೂ ಕಾಯಗಳಿಗೆ ಉಪಕರಣದಂತೆ ಕೆಲಸ ಮಾಡುತ್ತಲಿದೆ.

ಸ್ಥೂಲಕಾಯ , ಜ್ಞಾನಕಾಯ ಹೇಳಿದ ಮಾತು ಕೇಳಿದರೆ ಅದು ಎಂದೂ ಹುಸಿಯ ನುಡಿಯುವುದಿಲ್ಲ.

ಸ್ಥೂಲಕಾಯ ಮನೋಕಾಯದ ಮಾತು ಕೇಳಿದರೆ, ಅದು ಎಂದೂ ಸತ್ಯ ನುಡಿಯುವುದಿಲ್ಲ.

ಜ್ಞಾನಕಾಯವೆಂದರೆ , ಗುರುದೇವನ ಕಾಯ . ಗುರುದೇವನು ಇದ್ದ ಕಾಯ.

ಮನೋಕಾಯವೆಂದರೆ ಗುರುದೇವನಿಗೆ ಭಕ್ತನಾಗಬೇಕಾದ ಕಾಯ . ಆದರೆ ಮನೋಕಾಯ ಸ್ಥೂಲ ಕಾಯದ ಸಂಗ ಮಾಡಿ, ವೇಷ ಧರಿಸಿದ ಮತ್ತೊಂದು ಸ್ಥೂಲಕಾಯಕ್ಕೆ ಗುರು ದೇವನೆಂದು ತಿಳಿದು ಭಕ್ತಿ ಮಾಡುತ್ತದೆ . ಹೀಗಾಗಿ ಕಾಯದಲ್ಲಿಯೇ ಸಂಗಮವಾದ ಗು ರುದೇವ ಕಾಯದಲ್ಲಿಯೇ ಉಳಿದು, ಮನೋಮಯ ಕಾಯಕ್ಕೆ ಪಾಠ ಮಾಡುತ್ತಾನೆ.

ಗುರುದೇವ ಹೇಳಿದ ಪಾಠ ಮನೋಮಯ ಕಾಯ ಕೇಳುವುದಿಲ್ಲ, ಏಕೆಂದರೆ ಕಾಯ ಮತ್ತೊಂದು ಕಾಯಕ್ಕೆ ಶಿಷ್ಯನಾಗಿದೆ . ಕಾಯ ಕಾಯಕ್ಕೆ ಗುರುವಾಗಲು ಬರುವುದಿಲ್ಲ. ಶಿಷ್ಯ ನಾಗಲು ಕೂಡ ಬರುವುದಿಲ್ಲ,

**ಅಕ್ಕಮ್ಮ** : ಗುರುವಾಗುವುದು ಶಿಷ್ಯನಾಗುವುದು ತಪ್ಪೆ ಬಸವಣ್ಣ ?

**ಬಸವಣ್ಣ** : ಹೌದೆಂದು ಖಚಿತವಾಗಿ ಹೇಳಬೇಕಾಗುತ್ತದೆ ಅಕ್ಕ.

ಏಕೆಂದರೆ ಕಾಯ ಪರಿಪೂರ್ಣ ಅರಿವಿನ ಕಾಯ.

ಪ್ರತಿ ಕಾಯದಲ್ಲಿಯೂ ಅರಿವು ಎನ್ನುವ ಗುರುದೇವ ಭರಿತವಾಗಿದ್ದಾನೆ. ಅಂದ ಮೇಲೆ ಗುರುದೇವನಿದ್ದ ಕಾಯ ಮತ್ತೊಂದು ಗುರುದೇವನಿದ್ದ ಕಾಯಕ್ಕೆ ಶಿಷ್ಯನಾಗಲು ಬರುತ್ತದೆಯೇ? ಅಥವಾ ಗುರುವಾಗಲು ಬರುತ್ತದೆಯೇ?

**ಅಕ್ಕಮ್ಮ**: ಎಂತಹ ರಹಸ್ಯ ಕಾಯದಲ್ಲಡಗಿದೆಯಲ್ಲ ಬಸವಣ್ಣ ?

ಹಾಗಾದರೆ ಹೀಗೆ ತಿಳಿ ಹೇಳುವವರನ್ನು ಗುರುದೇವ ಎನ್ನಬಹುದಲ್ಲ ಬಸವಣ್ಣ ?

**ಬಸವಣ್ಣ**: ಅಡ್ಡಿಯಿಲ್ಲ,

ಕಾಯದಲ್ಲಿಯೇ ಇದ್ದ ಗುರುದೇವನ ದರ್ಶನ ಕಾಯಕ್ಕೆ ಆದ ಮೇಲೆ

ಕಾಯದಲ್ಲಿಯೇ ಇದ್ದ ಗುರುದೇವನನ್ನು ಕಾಯ ಕಂಡುಕೊಳ್ಳುವ ಬಗೆ ಹೇಗೆಂದು ಕಾಯಕ್ಕೆ ತಿಳಿ ಹೇಳುವ ಕಾಯವನ್ನು ಗುರುದೇವ ಎಂದು ಸಂಭೋದಿಸಬ ಹುದು.

ಆದರೆ ತಿಳಿ ಹೇಳುವ ತಾನು ಆ ಕಾಯಕ್ಕೆ ಗುರುವಾಗಬಾರದು. ಆ ಕಾಯ ವನ್ನು ಶಿಷ್ಯನನ್ನಾಗಿ ಸ್ವೀಕರಿಸಬಾರದು. ಕಾಯದಲ್ಲಿದ್ದ ಗುರುದೇವನನ್ನು ಕಾಯವನ್ನಾವರಿ ಸಿದ ಮನಕ್ಕೆ ಮತ್ತು ಕಾಯಕ್ಕೆ ತಿಳಿ ಹೇಳುವ ಕಾಯಕದಲ್ಲಿ ಇರುವುದನ್ನು ತಾನು ಕ್ಷಣ ಕ್ಷಣಕ್ಕೂ ಗಮನಿಸಬೇಕು.

**ಅಕ್ಕಮ್ಮ** : 'ಗುರು , ಶಿಷ್ಯ' ಎನ್ನುವ ಇಬ್ಬರು ಕಾಯದಲ್ಲಿ ಇದ್ದಾರೆ ಎಂದಂತಾ ಯಿತಲ್ಲವೇ ಬಸವಣ್ಣ?

**ಬಸವಣ್ಣ** : ಹೌದು ಅಕ್ಕ,

ಬೇಡಿದರೆ ಶಿಷ್ಯ ತನ್ನ ಗುರುದೇವನನ್ನೇ ಬೇಡಬೇಕು. ಹಾಡಿದರೆ ತನ್ನ ಗುರುದೇ ವನನ್ನು ಕುರಿತೇ ಹಾಡಬೇಕು. ಒಡೆಯನಿಗೆ ಒಡಲನು ತೋರಿ, ತನ್ನ ಬಡತನವನ್ನು ಬಿನ್ನ ವಿಸಿಕೊಳ್ಳಬೇಕು.

ಕಾಯದಲ್ಲಿದ್ದ ಗುರುದೇವ ಸಾಮಾನ್ಯನಲ್ಲ, ಆತ ಮಹಾದೇವ. ಆತ ಸದಾ

ಶಿವನೂ ಆಗಿದ್ದಾನೆ. ಆತ ಪರಬ್ರಹ್ಮನೂ ಆಗಿದ್ದಾನೆ. ತಾನಿದ್ದ ಕಾಯವನ್ನು ಕೈಲಾಸ ಮಾಡಿಕೊಂಡು ಕಾಯದಲ್ಲಿಯೇ ಇದ್ದಾನೆ .

**ಅಕ್ಕಮ್ಮ** : ಆಹಾ ! ಬಸವಣ್ಣ ನಾವೆಲ್ಲರೂ ಧನ್ಯರಾದೆವು. ಆ ಒಡೆಯನಿಗೆ ಒಡಲ ತೋರಿ ಸೆರಗೊಡ್ಡಿ ಬೇಡುವ ಶಿಕ್ಷಣ ನೀಡಿದಿರಿ ಬಸವಣ್ಣ.

**ಬಸವಣ್ಣ** : ಅಕ್ಕ ಈ ಶಿಕ್ಷಣ ನನ್ನದಲ್ಲ . ಇದು ಸಕಲ ಕಾಯಗಳಲ್ಲಿಯೂ ಇದೆ. ಗುರುದೇವನು ಇಲ್ಲದ ಕಾಯಗಳು ಈ ಬ್ರಹ್ಮಾಂಡದಲ್ಲಿ ಇಲ್ಲವೆ ಇಲ್ಲ . ಸ್ಥೂಲ ಕಾಯ ವನ್ನು ಆವರಿಸಿದ ಮನವೆಂಬ ಕಾಯ ಸ್ಥೂಲ ಕಾಯದಲ್ಲಿಯೇ ಇದ್ದ ಗುರುದೇವ ನಿಗೆ ಶರಣಾಗತನಾಗಿ , ಶರಣು ಹೋಗಿ ಶರಣನಾಗಬೇಕು ಅಷ್ಟೇ .

**ಅಕ್ಕಮ್ಮ** : ಹೀಗಾದಾಗ ಮಾತ್ರ ಕಾಯಕ್ಕೆ ನೋಡುವ ಸತ್ಯವನ್ನೇ ನೋಡಲು ಬರುತ್ತದೆ. ಕೇಳುವ ಸಕಲ ಶಬ್ದಗಳನ್ನು ಕೇಳಲು ಬರುತ್ತದೆ ಎಂದಂತಾಯಿತಲ್ಲ ಬಸವಣ್ಣ.

**ಬಸವಣ್ಣ** : ಹೌದು, ಅಕ್ಕ

ಅಯ್ಯ ಎನ್ನುವುದರಲ್ಲಿ ಸ್ವರ್ಗ ಸುಖವಿಲ್ಲ .

ಎಲವೋ ಎನ್ನುವುದರಲ್ಲಿ ನರಕದ ದುಃಖವೂ ಇಲ್ಲ

ಜಯಾ ಜೀಯಾ ಎಂದು ಹಾಡಿ ಹೊಗಳಿದರೆ ಕೈಲಾಸದ ಸುಖವೂ ಸಿಕ್ಕುವುದಿಲ್ಲ

ಎಂದು ತನಗೆ ತಾನೇ ತಿಳಿದುಕೊಂಡು ಹೊಗಳಿಕೆಯ ಶಬ್ದವನ್ನು ತೆಗಳಿಕೆಯ ಶಬ್ದವನ್ನು ಗುರುದೇವನ ವಾಣಿ ಎಂದು ಅರಿವಿನಿಂದ ಆಲಿಸಿ, ಸದಾ ಹಸನ್ಮುಖಿಯಾಗಿರು ತ್ತಾನೆ.

**ಚನ್ನಬಸವಣ್ಣ** : ಎದ್ದು ನಿಂತು ಸಭೆಯನ್ನು ಇಲ್ಲಿಗೆ ಮುಗಿಸೋಣ ಎಂದು ಸಭೆಗೆ ಮಂಗಲ ಹಾಡಿ ಸಕಲ ಶರಣರಿಗೂ ಶರಣು ಶರಣಾರ್ಥಿ ಎಂದು ಕೈಮುಗಿದರು.

# ಕಾಯ ಕಸದ ಉಗ್ರಾಣವಾಗಿದೆ ಕೈಲಾಸವೆಂಬುದನ್ನೇ ಮರೆತುಹೋಗಿದೆ

ಭೂಮಿಯನ್ನು ಆವರಿಸಿದ ಕತ್ತಲನ್ನು ಸೂರ್ಯ ನಿಧಾನವಾಗಿ ನುಂಗುವ ದೃಶ್ಯ ಗೋಚರಿಸುತ್ತದೆ . ಶರಣ ಶರಣೆಯರು ದಾಪುಗಾಲು ಹಾಕುತ್ತಾ ಸತ್ಸಂಗಕ್ಕಾಗಿ ಮಹಾ ಮನೆಗೆ ನಡೆದಿದ್ದಾರೆ . ಬಸವಣ್ಣ ಚನ್ನಬಸವಣ್ಣ ವೇದಿಕೆಯ ಮೇಲೆ ಕುಳಿತಿದ್ದಾರೆ . ಶರಣರು ಕೈ ಮುಗಿದು ಶರಣು ಶರಣಾರ್ಥಿ ಎನ್ನುತ್ತ ತಮ್ಮ ತಮ್ಮ ಆಸನಗಳಲ್ಲಿ ಕುಳಿತು ಕೊಂಡರು.

**ಚನ್ನಬಸವಣ್ಣ :** ಸಕಲ ಶರಣರನ್ನು ಸ್ವಾಗತಿಸಿ ಶರಣು ಶರಣಾರ್ಥಿ ಎನ್ನುತ್ತಾ ನಿನ್ನೆಯ ಸಭೆಯಲ್ಲಿ ಬಸವಣ್ಣನವರು ಅದ್ಭುತವಾದ ಸೂತ್ರವನ್ನು ತಮಗೆ ಹೇಳಿದ್ದಾರೆ.

ಶಬ್ದದಲ್ಲಿ ಒಳ್ಳೆಯ ಶಬ್ದ, ಕೆಟ್ಟ ಶಬ್ದ ಹೊಗಳಿಕೆಯ ಶಬ್ದ ತೆಗಳಿಕೆಯ ಶಬ್ದ ಎಂದಿಲ್ಲ. ಸಕಲ ಶಬ್ದಗಳಲ್ಲಿಯೂ ಅರಿವು ಭರಿತವಾಗಿದೆ.

ಪ್ರತಿ ಶಬ್ದವನ್ನು ಅರಿವಿನಿಂದ ಆಲಿಸುವ ಶಕ್ತಿ ತನುವಿಗೆ ಇದೆ. ಆದರೂ ಕೂಡ ಮನ ಶಬ್ದ ಕೇಳಿ ತನುವನ್ನು ವಿಕೃತಗೊಳಿಸುತ್ತದೆ.

ಶಬ್ದ ಅರಿವಿನಿಂದ ಕೇಳಿದರೆ ತನುವಿಗೆ ಸುಖದ ವಿಕೃತಿಯಾಗುವುದಿಲ್ಲ. ದುಃಖದ ವಿಕೃತಿ ಕೂಡ ಆಗುವುದಿಲ್ಲ.

**ಕಾಳವ್ವೆ :** ಚನ್ನಬಸವಣ್ಣನವರಿಗೆ, ಬಸವಣ್ಣನವರಿಗೆ ಶರಣೆನ್ನುತ್ತಾ ಸಕಲ ಶರಣ ಶರಣೆಯರಿಗೂ ಶರಣು ಶರಣಾರ್ಥಿ ಎಂದು ಹೇಳಿ, ಚನ್ನಬಸವಣ್ಣ ಶಬ್ದದಿಂದ ತನು ಸು ಖದಿಂದ ವಿಕೃತಿಯಾಗುತ್ತದೆ ಎಂದು ಹೇಳಿದಿರಿ. ಶಬ್ದದ ಮೂಲಕ ಸಂತೋಷಪಟ್ಟು ತನು ವಿಗೆ ಸುಖವಾದರೆ, ಅದು ಕೂಡ ವಿಕೃತಿಯೇ ಚನ್ನಬಸವಣ್ಣ? ಅದು ಹೇಗೆ ವಿಕೃತಿಯಾ ಗುತ್ತದೆ ?

**ಚೆನ್ನಬಸವಣ್ಣ :** ಸರಿಯಾದ ಪ್ರಶ್ನೆ ಕೇಳಿದಿರಿ ಕಾಳವ್ವೆ .

ಶಬ್ದದಲ್ಲಿ ಅರಿವಿದೆ . ಹೀಗಾಗಿ ಶಬ್ದ ಅರಿವಿನ ತನುವಿನಿಂದ ಹೊರ ಬಂದಿದೆ. ನುಡಿಯುವ ತನು ಶಬ್ದದಲ್ಲಿ ಅರಿವಿದೆ ಎಂದು ತಿಳಿದು ನುಡಿಯದಿದ್ದರೆ, ನುಡಿದ ತನುವಿಗೆ ಶಬ್ದ ಗಾಯ ಮಾಡುತ್ತದೆ. ಶಬ್ದ ಅರಿವಿನಿಂದ ಕೇಳದ ತನುವಿಗೆ ಕೂಡ ಗಾಯ ಮಾಡುತ್ತದೆ.

ಅರಿವಿನಿಂದ ನುಡಿದರೆ ನುಡಿದ ತನುವಿಗೆ ಗಾಯವಾಗುವುದಿಲ್ಲ , ಕೇಳಿದ ತನುವಿಗೆ ಗಾಯವಾಗುವುದಿಲ್ಲ.

ಹೊಗಳಿದರೆ ಸುಖವಾಗುತ್ತದೆ . ಇದು ತನುವಿಗೆ ವಿಕೃತಿ . ಅರಿವಿನಿಂದ ಕೇಳಿದರೆ ಸುಖದ ಶಬ್ದ ತನ್ನನ್ನು ಏನೂ ಮಾಡುವುದಿಲ್ಲ.

ಉದಾಹರಣೆ : ಕತ್ತೆ ದುಡಿದಂತೆ ಹಗಲಿರುಳೆನ್ನದೇ ದುಡಿಯುತ್ತಾಳೆ ಇದ್ದರೆ ಹೀಗಿರಬೇಕು . ಎನ್ನುವ ಶಬ್ದ ತನುವಿಗೆ ಬಡಿದು ತನು ಪುಳಕಿತಗೊಳ್ಳುತ್ತದೆ.

ನುಡಿದ ಮಾತುಗಳ ಹಿನ್ನೆಲೆಯನ್ನು ಅರಿವಿನಿಂದ ಆಲಿಸಿದರೆ , ತನುವಿಗೆ ಸುಖದ ವಿಕೃತಿಯಾಗುವುದಿಲ್ಲ.

ಹೀಗಾಗಿಯೇ ನಿನ್ನೆಯ ಸಭೆಯಲ್ಲಿ ಬಸವರಸರು ಎಲವೊ ಎಂದಡೆ ನರಕ , ಅಯ್ಯಾ ಎಂದಡೆ ಸ್ವರ್ಗ ಜಯಾ ಜೀಯಾ ಎಂದು ಹೊಗಳಿದರೆ ಕೈಲಾಸ ಸಿಕ್ಕುವುದೇ ಎನ್ನುವ ಸೂತ್ರವನ್ನು ಹೇಳಿದರು.

**ಕಾಳವ್ವೆ :** ಕಲಿತು ಸಂಗ್ರಹ ಮಾಡಿಕೊಂಡ ಮಾತಿನಿಂದಲೇ ನಮಗೆ ಸುಖದುಃಖ ಗಳು ಆಗುತ್ತವೆ ಎಂದಂತಲ್ಲವೆ ಚನ್ನಬಸವಣ್ಣನವರೆ ?

**ಚನ್ನಬಸವಣ್ಣ :** ಹೌದು ತಾಯಿ ಸರಿಯಾಗಿ ಊಹಿಸಿದಿರಿ.

ತನುವಿಗೆ ಯಾರೂ ಏನ್ನನ್ನೂ ಕಲಿಸಬೇಕಾಗಿಲ್ಲ . ಕಲಿಸಿದರೆ ಕಲಿಸಿದೆನೆಂಬ ರೋಗ ತನುವಿನಲ್ಲಿ ಸಂಗ್ರಹವಾಗುತ್ತದೆ . ಕಲಿತೆನೆಂಬ ರೋಗ ತನುವಿನಲ್ಲಿಯೇ ಸಂಗ್ರಹ ವಾಗುತ್ತದೆ .

ಕಲಿಸಿದ ಶಬ್ದಗಳು ಕಲಿತ ಶಬ್ದಗಳು ತನುವಿಗೆ ಸುಖ ದುಃಖಗಳನ್ನು ಉಂಟು ಮಾಡುತ್ತವೆ. ಬಿತ್ತಿದ ಬೀಜಗಳಲ್ಲಿ ಅದರ ಫಲ ಸಂಗಮವಾಗಿದೆ . ಅದು ಬೆಳೆಯುತ್ತ ಬೆಳೆಯುತ್ತಾ ಸ್ವಾನುಭಾವದ ಅರಿವಿನ ಫಲವನ್ನು ಕೊಡುತ್ತಾ ಹೋಗುತ್ತದೆ.

ತನು ವೇದವನ್ನು ಅರಿಯದು, ಆಗಮವನ್ನು ಅರಿಯದು ಉಪನಿಷತ್‌ಗಳನ್ನು ಅರಿಯದು ತನು , ತನಗೆ ತಾನೆ ಸ್ವಯಂಕೃತ ಸಹಜ .

ಇಂತಹ ಸ್ವಯಂಕೃತ ಸಹಜ ಜ್ಞಾನಿಗಳೇ ಆಗಿದ್ದಾರೆ ಬಸವಣ್ಣನವರು.

**ಕಾಳವ್ವೆ :** ಈ ವಿಷಯದ ಬಗ್ಗೆ ಮತ್ತಷ್ಟು ವಿವರಿಸಿ ಹೇಳಿ ಚೆನ್ನಬಸವಣ್ಣ .

**ಚನ್ನಬಸವಣ್ಣ :** ಆಗಲಿ ತಾಯಿ.

ಒಂದು ಬೀಜ ಭೂಮಿಯಲ್ಲಿ ಬಿದ್ದರೆ ಅದು ತನಗೆ ತಾನೇ ಹೊರಬಂದು ಹಸಿರಿನಿಂದ ನಗು ನಗುತ್ತಾ ಬೆಳೆದು ದೊಡ್ಡದಾಗಿ ಪ್ರೌಢತ್ವಕ್ಕೆ ಬಂದ ಮೇಲೆ ತನಗೆ ತಾನೆ ಮೊಗ್ಗು, ಹೂ, ಕಾಯಿ ಆಗಿ ಮರದಿಂದ ಹೊರಬರುತ್ತವೆ.

ಕಾಯಿಯನ್ನೆ ಹಣ್ಣಾಗಿಸಿ ಬೀಜದಲ್ಲಿ ಮರ ತನ್ನ ಸರ್ವ ಶಕ್ತಿಯನ್ನು ತುಂಬಿ ತನ್ನ ಸಂತಾನದ ಅಭ್ಯುದಯಕ್ಕಾಗಿ ತೊಟ್ಟು ಕಳಚಿಕೊಂಡು ಕೆಳಗೆ ಬೀಳಿಸುತ್ತದೆ.

ಹಣ್ಣು ತಿಂದ ಪಶು ಪಕ್ಷಿ , ಮನುಕುಲ, ಬೀಜವನ್ನು ಎಸೆಯುತ್ತದೆ. ಆ ಬೀಜ ಪುನಃ ತನಗೆ ತಾನೆ ಬೆಳೆದು ಫಲ ನೀಡುತ್ತದೆ.

ಮರ ಮೊಗ್ಗು ಹೇಗೆ ಹೊರಗೆ ಹಾಕಬೇಕೆಂದು ಯಾವ ಮರದ ಸಹಾಯವನ್ನು ಪಡೆಯಲಿಲ್ಲ.

ಹೂ ಹೇಗೆ ಅರಳಿಸಬೇಕೆಂದು , ಕಾಯಿ ಹಣ್ಣು ಹೇಗೆ ಮಾಡಬೇಕೆಂದು, ಯಾವ

ಮರದ ಸಹಾಯವನ್ನು ಮರ ಪಡೆಯಲಿಲ್ಲ .

ಹಾಗೆಯೇ ಪಕ್ಕದ ಮರದಲ್ಲಿ ಆದ ಮೊಗ್ಗು , ಹೂ ಕಾಯಿ ಹಣ್ಣುಗಳನ್ನು ಕಿತ್ತು ತಾನು ಹಚ್ಚಿಕೊಳ್ಳಲಿಲ್ಲ .

ಹಾಗೆಯೇ ತನುವಿನಲ್ಲಿ ಅದ್ಭುತವಾದ ಅರಿವಿನ ಶಕ್ತಿ ಇದೆ. ಹೀಗಾಗಿ ತನು ಕೂಡ ಮರದಂತೆ ತನಗೆ ತಾನೆ ಮಹಾಜ್ಞಾನದ ಹೂವನ್ನು ಅರಳಿಸಿಕೊಳ್ಳಬೇಕು . ಮರಕ್ಕೆ ಬೇರಿದ್ದರೆ, ತನುವಿಗೆ ಬೇರಿಲ್ಲ, ಹೀಗಾಗಿ ತನು ಬೇರಿಲ್ಲದ ನಡೆದಾಡುವ ಮರ , ಇದು ಗೀತೆಯ ಹಾಡಬೇಕಾಗಿಲ್ಲ, ಉಪನಿಷತ್‌ಗಳನ್ನು ಓದಬೇಕಾಗಿಲ್ಲ , ವೇದ ಆಗಮ ಉಪನಿಷತ್‌ಗಳು ತನುವಿನ ಮೂಲಕ ಹೊರಬಂದಿವೆ. ಪುನಃ ಅವುಗಳನ್ನು ತನುವಿನಲ್ಲಿ ಇಟ್ಟುಕೊಂಡರೆ ಅದರಲ್ಲಿ ಜ್ಞಾನದ ತಿರಳಿದ್ದರೂ ಕೂಡ ಅವು ಅನಂತಕಾಲ ಪುನಃ ತನುವಿನಲಿಯೇ ಇದ್ದು , ತನುವಿನಲ್ಲಿಯೇ ತನ್ಮಯವಾದ ಜ್ಞಾನದ ಫಲ ಹೊರಬರದಂತೆ ಅಡ್ಡಿಪಡಿಸುತ್ತದೆ.

**ಕಾಳವ್ವೆ** : ಓಹೋ ! ಅದ್ಭುತವಾದ ಅರಿವಿನ ರಹಸ್ಯವನ್ನೇ ಸಕಲ ಶರಣರಿಗೂ ಹೇಳಿಕೊಟ್ಟಿರಿ ಚನ್ನಬಸವಣ್ಣ, ತಾವು ತಮ್ಮ ಒಂದು ವಚನದಲ್ಲಿ .

''ಆನು ಶುದ್ದ ಧವಳಿತನು ಎನಗೆ ಅನಾದಿ ಬಂದು ಹೊದ್ದಿದ ಕಾರಣವೇನಯ್ಯಾ? ಜಲವ ಮೊಗೆಯ ಬಂದೇನೇಕಯ್ಯಾ ? ಗಿಡುವ ಅರಿಯ ಬಂದೇನೇಕಯ್ಯ ಎಲ್ಲರ ನಡುವೆ ಕುಳ್ಳಿರ್ದು ಗೀತವ ಹಾಡಬಂದೇನೇಕಯ್ಯಾ? ಬಸವಣ್ಣ ಚನ್ನಬಸವಣ್ಣ ಯಂಬೆರಡು ಶಬ್ದವೇಕಾದವು ಹೇಳಾ, ಕೂಡಲಚನ್ನಸಂಗಮದೇವಾ.

''ಎಂಬ ಅದ್ಭುತ ಸೂತ್ರವನ್ನೇ ಹೇಳಿರುವಿರಲ್ಲ? ತಾವು ಹೇಳಿದ ವಿಷಯಕ್ಕೆ ಈ ವಚನ ಸೂತ್ರ ಸರಿ ಹೋಗುತ್ತದಲ್ಲ ಚನ್ನಬಸವಣ್ಣನವರೆ.

**ಚನ್ನಬಸವಣ್ಣ** : ಹೌದು ತಾಯಿ ಆನು ಶುದ್ಧ ಧವಳಿತನು ಎಂದರೆ ನಾನೊಂದೆ ಹಾಗಲ್ಲ, ಬ್ರಹ್ಮಾಂಡದಲ್ಲಿ ಸಕಲ ತನುಗಳೂ ಕೂಡ ಪರಿಶುದ್ಧವೇ ಆಗಿವೆ. ಹೀಗಿದ್ದು ತನುವನ್ನು ಆವರಿಸಿದ ಮನ ತನಗೆ ಹಿತವಾದ ಶಬ್ಧಗಳನ್ನು ಮಿಗೆ ಮಿಗೆ ಹೊಳೆಯುವ ಮೀಸಲು ತನುವಿನಲ್ಲಿ ಇಟ್ಟುಕೊಳ್ಳುವುದರಿಂದ, ಇಟ್ಟುಕೊಂಡ ಶಬ್ಧಗಳು ಎಂಜಲಾಗಿ ಹೊರಬರುತ್ತವೆ.

**ಕಾಳವ್ವೆ** : ಗೀತೆ ಉಪನಿಷತ್‌ಗಳಲ್ಲಿಯ ಶಬ್ದ ಕೂಡ ಮೀಸಲು ತನುವಿನಿಂದ ಹೊರ ಬಂದವುಗಳಾಗಿವೆ. ಅವು ಹೇಗೆ ಎಂಜಲಾಗುತ್ತವೆ ಎನ್ನೊಡೆಯ.

**ಚನ್ನಬಸವಣ್ಣ** : ಗೀತೆ , ಉಪನಿಷತ್‌ಗಳಿಂದ ಹೊರಬಂದ ಶಬ್ಧಗಳು ಮನಕ್ಕೆ ಹಿತವೆನಿಸಿ , ತನುವಿನಲ್ಲಿ ಇಟ್ಟುಕೊಂಡರೆ , ತನುವಿನಲ್ಲಿಯೆ ತನ್ಮಯವಾದ ಅರಿವಿನ ಶಬ್ದಗಳು ಹಾಗೇ ಉಳಿಯಲಿಲ್ಲವೇ? ತನುವಿನಿಂದ ಹೊರಬಂದ ಶಬ್ದಗಳು ತನ್ನವಲ್ಲ , ಅವು ಗೀತೆ ಮತ್ತು ಉಪನಿಷತ್‌ಗಳಿಂದ ಹೊರಬಂದು ತನುವಿನಲ್ಲಿ ಬಚ್ಚಿಟ್ಟುಕೊಂಡವು . ಮನ ತಾನು ತನುವಿನಲ್ಲಿ ಬಚ್ಚಿಟ್ಟುಕೊಂಡ ಶಬ್ದವನ್ನೇ ಹೊರಹಾಕುತ್ತದೆ ಹೊರತು ತನುವಿನಲ್ಲಿ ತನ್ಮಯವಾದ ಶಬ್ದಗಳು ಹಾಗೆಯೇ ಉಳಿಯುತ್ತವೆ . ಹೀಗಾಗಿ ಎಲ್ಲರ ನಡುವೆ ಕುಳಿತು ಗೀತವ ಹಾಡಿದರೇನು, ಅದು ಗೀತೆಯ ಮಾತಾಯಿತೇ ಹೊರತು ತನ್ನ ಮಾತಲ್ಲ. ತನುವಿನಲ್ಲಿಯೇ ತನ್ಮಯವಾದ ಅ

ರಿವೆಂಬ ಗುರುದೇವನ ಮಾತಲ್ಲ. ಗೀತೆಯ ಮಾತು ಅರಿವೆಂಬ ಗುರುದೇವನಿಂದ ಹೊರಬರುವ ಮಾತನ್ನು ಅಡ್ಡಿಪಡಿಸಿತು.

ಹೀಗಾಗಿ ಬಸವಣ್ಣ ಚನ್ನಬಸವಣ್ಣ ಎಂಬ ಎರಡೂ ಶಬ್ದಗಳು ಕೂಡಲಸಂಗಮದೇವ ಎಂಬ ಅರಿವೆಂಬ ಗುರುದೇವನಲ್ಲಿ ಏಕವಾದವು ಎಂದು ಹೇಳಿರುವೆ ತಾಯಿ. ಈ ಸತ್ಸಂಗದಲ್ಲಿ ಭಾಗಿಯಾದ ಸಕಲ ಶರಣರು ನನ್ನ ಮತ್ತು ಬಸವಣ್ಣನವರ ಹೊರತಾಗಿ ತಾವು ಬೇರೆಯಲ್ಲ . ಎಲ್ಲಾ ಒಂದೇ ಸ್ವಾನುಭಾವ ಬಳಕೆಯಾಗಬೇಕು ಅಷ್ಟೇ.

**ಬಸವಣ್ಣ :** ಸಕಲ ಶರಣರಿಗೂ ಚನ್ನಬಸವಣ್ಣನವರಿಗೂ ಕೈಮುಗಿದು ಶರಣು ಶರಣಾರ್ಥಿ ಎಂದು ಹೇಳುತ್ತ ಸಭೆಗೆ ಮಂಗಲ ಹಾಡಿದರು.

# ದೇಹ ಸ್ತ್ರೀ ಪುರುಷ ಎಂದು ಬಲವಾಗಿ ನಂಬಿದೆ ಮಹಾಪುರುಷ ಮಹಾಸ್ತ್ರೀ ಇದ್ದ ದೇವಾಲಯ ಎಂಬುದನ್ನೇ ಮರೆತು ಹೋಗಿದೆ

ಸಂಜೆ ಸಮಯ ಸಕಲ ಶರಣರು ಮಹಾ ಮನೆಯತ್ತ ಸತ್ಸಂಗಕ್ಕಾಗಿ ನಡೆದಿದ್ದಾರೆ. ವೇದಿಕೆಯ ಮೇಲೆ ಇದ್ದ ಬಸವಣ್ಣ ಚನ್ನಬಸವಣ್ಣನವರಿಗೆ ಕೈ ಮುಗಿದು ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುವರು.

**ಚನ್ನಬಸವಣ್ಣ** : ಎದ್ದು ನಿಂತು ಬಸವರಸರಿಗೆ ಶರಣೆಂದು ಕೈ ಮುಗಿದು ಸ ಕಲ ಶರಣರನ್ನು ಸ್ವಾಗತಿಸುತ್ತಾ

ಇಂದು ಪರಸ್ತ್ರೀ, ಪರಧನ ಕುರಿತು ಬಸವಣ್ಣನವರು ತಮ್ಮ ಅನುಭವವನ್ನು ನಿಮ್ಮೊಂದಿಗೆ ಹಂಚಿಕೊಳ್ಳಲಿದ್ದಾರೆ.

**ಬಸವಣ್ಣ** : ಸಕಲ ಶರಣರಿಗೂ, ಚನ್ನಬಸವಣ್ಣನವರಿಗೂ ಶರಣು ಶರಣಾರ್ಥಿ ಎಂದು ಕೈ ಮುಗಿದು,

ಪರಸ್ತ್ರೀ ಎಂದರೆ ಮತ್ತೊಬ್ಬ ಮಹಾ ಪುರುಷನ ಸ್ತ್ರೀ ಎಂದು ಅರ್ಥ. ದೇಹವನ್ನು ಸ್ತ್ರೀ ಪುರುಷ ಎಂದು ಲೋಕ ವಿಂಗಡಿಸಿದೆ. ದೇಹ ಮಹಾಪುರುಷ ಮಹಾ ಸತಿಯಿದ್ದ ದೇ ವಾಲಯವೇ ಹೊರತು ದೇಹವು ಹೆಣ್ಣು ಅಲ್ಲ ಗಂಡೂ ಅಲ್ಲ.

**ದುಗ್ಗಳೆ** : ಅದು ಹೇಗೆ ಬಸವರಸ, ದೇಹವನ್ನೇ ಲೋಕ ಹೆಣ್ಣೆಂದು ಗಂಡೆಂದು ನಂಬಿದೆಯಲ್ಲ, ಇದು ಸುಳ್ಳೇ ಹೇಗೆ?

**ಬಸವಣ್ಣ** : ಲೋಕ ಮೊಲೆ ಮುಡಿಯನ್ನು ನೋಡಿ ಹೆಣ್ಣೆಂದು ನಂಬಿದೆ. ಗಡ್ಡ ಮೀಸೆಯನ್ನು ನೋಡಿ ಗಂಡೆಂದು ನಂಬಿದೆ. ಇದು ಮನದ ಕೆಲಸ.

ಮನ ಹೆಣ್ಣು ಎನ್ನುವ ಅಜ್ಞಾನ ಆಮಂತ್ರಣ ಮಾಡಿಕೊಂಡು ಗಂಡನ್ನು ನೋಡು ತ್ತದೆ. ಹಾಗೆಯೇ ಗಂಡು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಹೆಣ್ಣನ್ನು ನೋ ಡುತ್ತದೆ. ಹೀಗಾಗಿ ದೇಹದಲ್ಲಿ ಉದ್ರೇಕದ ಅಜ್ಞಾನ ದ್ರವ್ಯ ಹುಟ್ಟುತ್ತದೆ.

ದೇಹ ಹೆಣ್ಣು ಅಲ್ಲ ಗಂಡೂ ಅಲ್ಲ ಎನ್ನುವುದು ಮನಕ್ಕೆ ಗೊತಿಲ್ಲ. ದೇಹವನ್ನೇ ದೇವಾಲಯವನ್ನಾಗಿಸಿಕೊಂಡು ಅರಿವಿನ ದೇವರೊಬ್ಬರು ದೇಹದಲ್ಲಿಯೇ ಇದ್ದಾರೆ. ಈತ ಮಹಾ ಪುರುಷ.

ಹಾಗೆಯೇ ಈ ಮಹಾ ಪುರುಷನನ್ನೇ ಪತಿಯನ್ನಾಗಿಸಿಕೊಂಡು ಮನವೆಂಬ ದೇ ವತೆಯೊಬ್ಬಳು ದೇಹದಲ್ಲಿಯೇ ಇದ್ದಾಳೆ. ಈಕೆ ಸತಿ ಪರಸತಿ, ಮಹಾ ಪುರುಷನ ಸತಿ ಪರಮಾತ್ಮನ ಸತಿ.

**ಮಹಾದೇವಿ** : ಅದ್ಭುತವಾದ ರಹಸ್ಯದ ಮಾತನ್ನೇ ನಮ್ಮೆಲ್ಲರಿಗೂ ಹೇಳಿದಿರಿ ಬ ಸವರಸ.

ಪರಸತಿ ಎಂದರೆ, ದೇಹದಲ್ಲಿಯೇ ಸಂಗಮವಾದ ಮಹಾ ಪುರುಷನ ಸತಿ ಎಂದಂತಾಯಿತಲ್ಲವೇ?

ತಾನು ಸತಿಯಾಗಿದ್ದುಕೊಂಡು ಬೇರೊಂದು ದೇಹದಲ್ಲಿರುವ ಪರಸತಿಯನ್ನು ನೋಡಿದಂತಾಯಿತಲ್ಲವೇ?

ಸತಿಯಾಗಿದ್ದುಕೊಂಡು, ಸತಿಯನ್ನು ನೋಡುವುದು ಉಚಿತವಲ್ಲ ಎನ್ನುವ ಅರ್ಥ ಪರಸತಿಯಲ್ಲಿದೆಯೇ ಹೇಗೆ ಎಂಬುದನ್ನು ವಿವರಿಸಿ ಹೇಳಿ ಬಸವರಸ .

**ಬಸವರಸ** : ತಾಯಿ ಮಹಾದೇವಿ ನಿನಗೆ ಶರಣು ಶರಣಾರ್ಥಿ . ಎಷ್ಟೊಂದು ಸರಿಯಾಗಿ ಊಹಿಸಿದಿರಿ ತಾಯಿ . ನನ್ನ ಮುಂದಿನ ಮಾತನ್ನು ತಾವೇ ಹೇಳಿದಂತಾಯಿತು.

ಸತ್ಸಂಗದಲ್ಲಿ ನಿಮ್ಮಂತಹ ಶರಣರನ್ನು ಪಡೆದಿರುವ ನಾನೇ ಧನ್ಯ.

**ಮಹಾದೇವಿ** : ನಾನು ಅಲ್ಪಳು ಬಸವರಸ. ಅಷ್ಟು ದೊಡ್ಡ ಮಾತು ಹೇಳಿ ಪಾಪದ ಕೂಪಕ್ಕೆ ನನ್ನನ್ನು ತಳ್ಳಬೇಡಿ. ತಾವು ನಮಗೆ ಕೊಟ್ಟ ಈ ಸ್ವಾತಂತ್ರ್ಯ ಸಾಕು.

**ಬಸವರಸ** : ಮನ, ಮಹಾ ಪುರುಷನಿಗೆ ಸತಿಯಾಗದಿದ್ದರೆ ಅದು ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು, ಪರ ಸತಿಯನ್ನು ನೋಡಿ ಹಾದರಕ್ಕಿಳಿಯುತ್ತದೆ.

ಮನಕ್ಕೆ ತಾನು ಗಂಡಲ್ಲವೆಂದು ತಿಳಿಯುವುದೇ ಇಲ್ಲ, ಹೀಗೆ ಲೋಕದಲ್ಲಿ ದೇಹ ಇರುವವರೆಗೆ ದೇಹದಲ್ಲಿ ಹಾದರ ನಡೆದೇ ಇರುತ್ತದೆ.

**ಮಹಾದೇವಿ** : ಇದಕ್ಕೆ ಪರಿಹಾರವೇನು ಬಸವರಸ ?

**ಬಸವಣ್ಣ** : ಇದುವರೆಗೆ ನಾನು ತಮಗೆ ತಿಳಿ ಹೇಳಿದ 'ಪರಸತಿ' ವಿಷಯ ನಿಮ್ಮ ನಿಮ್ಮ ಸ್ವಾನುಭಾವಕ್ಕೆ ಬಂದಿದೆಯೇ ಹೇಗೆ ?

**ಶರಣರು** : ದೇಹ ಗಂಡಲ್ಲ ಹೆಣ್ಣೂ ಅಲ್ಲ, ಎಂದು ಈ ಹಿಂದೆ ತಾವು ಚನ್ನ ಬಸವಣ್ಣ ಹಾಗೂ ಪ್ರಭುಗಳು ಸತ್ಸಂಗದಲ್ಲಿ ಹೇಳಿದ ವಿಷಯ ಮನದಟ್ಟಾಗಿದೆ ಬಸವರಸರೆ ಎಂದು ಸಕಲ ಶರಣರು ಕೂಗಿ ಹೇಳಿದರು.

**ಬಸವರಸ** : ಹಾಗಾದರೆ ಪರಸತಿ ಎನ್ನುವ ವಿಷಯವನ್ನು ಮುಂದುವರೆಸುವೆ.

ದೇಹವನ್ನು ಆವರಿಸಿದ ಮನ ಅರಿವು ಎನ್ನುವ ಗುರುದೇವನನ್ನೇ ಪತಿಯನ್ನಾಗಿ ಸ್ವೀಕರಿಸಬೇಕು.

ಆ ಗುರುದೇವನೇ ಮಹಾದೇವನೆಂದು, ಮಹಾ ಪುರುಷನೆಂದು, ಸ್ವಾನುಭಾವಕ್ಕೆ ತಂದುಕೊಂಡು ಆ ಪರಮ ಪುರುಷನಿಗೆ ಮನ ಸತಿಯಾಗಬೇಕು.

ಆ ಮಹಾ ಪುರುಷನನ್ನು ಗುರುದೇವನನ್ನಾಗಿಸಿಕೊಂಡರೆ, ಮನ ಆ ಗುರುದೇವನಿಗೆ ಶಿಷ್ಯನಾಗಬೇಕು .

ಆ ಮಹಾ ಪುರುಷನನ್ನು ಮಹಾದೇವನನ್ನಾಗಿಸಿಕೊಂಡರೆ , ಮನ ಆತನಿಗೆ ಮಹಾದೇವಿಯಾಗಬೇಕು .

ಮನ ಎನ್ನುವುದು ಕೂಡ ಒಂದು ಕಾಯ .

ಇದು ಮತ್ತೊಬ್ಬರಿಗೆ ಕಾಣುವುದಿಲ್ಲ . ಹಾಗೆಯೇ ಮಹಾಪುರುಷ ಎನ್ನುವುದು ಕೂಡ ಒಂದು ಕಾಯ .

ಈ ಕಾಯ ಕೂಡ ಮತ್ತೊಂದು ಕಾಯಕ್ಕೆ ಕಾಣುವುದಿಲ್ಲ .

ಸತ್ಸಂಗದಲ್ಲಿ ಭಾಗಿಯಾದ ಶರಣರ ಸ್ವಾನುಭಾವಕ್ಕೆ ಮಾತ್ರ ಬರುತ್ತದೆ.

ಮನೋಕಾಯ ಸತಿಯಾಗಿ, ಮಹಾ ಪುರುಷನ ಕಾಯವನ್ನೇ ಪತಿಯನ್ನಾಗಿಸಿಕೊಂಡು, ಆತನಿಗೆ ಶರಣು ಹೋಗಿ , ಶರಣ ಸತಿಯಾಗಬೇಕು .

ಅಂಗದಲ್ಲಿಯೇ ಸಂಗಮವಾದ ಮಹಾ ಪುರುಷನೆಂಬ ಸಂಗಯ್ಯನನ್ನೇ ಪತಿಯನ್ನಾ ಗಿಸಿಕೊಂಡು ಶರಣ ಈತನಿಗೆ ಸತಿಯಾಗಬೇಕು.

ಆಗ ಸತಿ ಪತಿಗಳಿದ್ದ ಕಾಯವೇ ಕೈಲಾಸವೆಂದು ಕರೆಯಿಸಿಕೊಳ್ಳುತ್ತದೆ.

ಸಕಲ ಶರಣರು ಈ ಕಾಯಕದಲ್ಲಿ ನಿರತರಾಗಬೇಕು. ಕಾಯ ಹಗಲಿರುಳೆನ್ನದೇ ಈ 'ಕಾಯಕ'ದಲ್ಲಿಯೇ ಮುಂದುವರೆಯಬೇಕು. ಈ 'ಕಾಯಕ' ಯಾವ ಕಾಯಕ್ಕೆ ಸಿದ್ಧಿಸುವುದೋ, ಆ ಕಾಯ ಪರಸತಿಯನ್ನು ಪರಮಾತ್ಮನ ಸತಿಯೆಂದು ನೋಡುತ್ತ ದೆ. ಪ್ರತಿ ಕಾಯದಲ್ಲಿಯೂ ಸಂಗಮವಾದ ಪಾರ್ವತಿ ಪರಮೇಶ್ವರರಿಗೆ ಶರಣು ಶರಣಾರ್ಥಿ ಎಂದು ತಲೆಬಾಗಿ ಕೈ ಮುಗಿಯುತ್ತದೆ.

**ಮಹಾದೇವಿ :** ಎಂತಹ ಅದ್ಭುತವಾದ ರಹಸ್ಯದ ಮಾತನ್ನು ಹೇಳಿದಿರಿ ಬಸವಣ್ಣ ! ಲೋಕದಲ್ಲಿ ಒಂದು ಕಾಯ ಮತ್ತೊಂದು ಕಾಯವನ್ನು ಹೆಣ್ಣೆಂದು ಗಂಡೆಂದು ನೋಡಿ ಹಾದರದಲ್ಲಿ ಮುಳುಗುತ್ತದೆ. ಬಡವನೆಂದು ತಿಳಿದು ಶ್ರೀಮಂತನನ್ನು ನೋಡಿ ಗೌರವದಿಂದ ಹಣೆ ಮಣಿಯುತ್ತದೆ.

ಪ್ರತಿ ಕಾಯವೂ ಅರಿವಿನ ಶ್ರೀಮಂತಿಕೆಯಿಂದ ಭರಿತವಾಗಿದೆ ಎಂಬುದನ್ನು ಹೇಳಿ ಕೊಟ್ಟಿರಿ ಬಸವರಸ. ನಾವು ಈ ಕಾಯಕದಲ್ಲಿ ಮುಂದುವರೆದು ಸಿದ್ಧಿ ಪಡೆಯುವುದೊಂದೇ ಬಾಕಿ.

**ಬಸವಣ್ಣ :** ರಾವಣ , ಸಮರ್ಥನಾದರೂ ಸಕಲ ಕಲೆಗಳಲ್ಲಿ ನೈಪುಣ್ಯತೆ ಹೊಂದಿ ದ್ದರೂ ಕೂಡ ಸೀತಾ ಮಾತೆಯನ್ನು ಅರಿವಿನಿಂದ ನೋಡಲು ಸಾಧ್ಯವಾಗಲಿಲ್ಲ.

ಸೀತಾ ಮಾತೆಯ ಚರ್ಮ, ತನ್ನ ಚರ್ಮ ಚರ್ಮವೇ ಆಗಿದ್ದರೂ ಕೂಡ ತಾನು ಗಂಡಾಗಿ, ಸೀತೆಯನ್ನು ಹೆಣ್ಣಾಗಿ ನೋಡಿದ.

ಕಾಯದಲ್ಲಿ ಉದ್ರೇಕ ಹುಟ್ಟಿ , ಇಡೀ ಕಾಯ ರಕ್ಕಸ ಕಾಯವಾಯಿತು. ಓದಿದ ಪಾಂಡಿತ್ಯ ಆ ಸಂದರ್ಭದಲ್ಲಿ ರಾವಣನಿಗೆ ಉಪಯೋಗಕ್ಕೆ ಬರಲಿಲ್ಲ . ಕೈಲಾಸವೇ ಆ ಗಬೇಕಾದ ಕಾಯ, ಆಪತ್ಕಾಲಕ್ಕೆ ಗುರಿಯಾಗಿ ತನ್ನ ಕಾಯದ ಅಜ್ಞಾನ ತನ್ನ ಕಾಯಕ್ಕೆ ವಿ ಧಿಯಾಗಿ ಕಾಡಿತು .

ಪರಸ್ತ್ರೀಗೆ ಮೋಹಗೊಂಡ ರಾವಣ ತನ್ನ ಸೈನ್ಯವನ್ನು ತನ್ನ ಸರ್ವಸ್ವವನ್ನು ಕಳೆ ದುಕೊಂಡು ರಕ್ಕಸ ಎಂದು ಕರೆಯಿಸಿಕೊಂಡ .

ಕಾಯದಲ್ಲಿ ಸಂಗಮವಾದ ಅರಿವು ಕಾಯಕ್ಕೆ ಬಳಕೆಯಾಗದಿದ್ದರೆ ಕಾಯ ಕಾಯವನ್ನೇ ರಕ್ಕಸ ಎಂದು ನೋಡುತ್ತದೆ. ಹಾಗೆಯೇ ಕಾಯ ಕಾಯವನ್ನೇ ರಾಜನೆಂದು, ಜ್ಞಾನಿ ಎಂದು ಪಂಡಿತನೆಂದು ನೋಡುತ್ತದೆ . ಕಾಯದ ಅರಿವು ಕಾಯಕ್ಕೆ ಬಳಕೆಯಾದರೆ ಸಕಲ ಕಾಯಗಳನ್ನು ಪಾರ್ವತಿ ಪರಮೇಶ್ವರರು ವಾಸವಾಗಿದ್ದ ಕೈಲಾಸವೆಂದು ನೋಡುತ್ತದೆ.

**ಚನ್ನಬಸವಣ್ಣ** : ಬಸವಣ್ಣ ತಾವು ತಮ್ಮದೇ ಆದ ವಚನದ ಸೂತ್ರ ಒಂದರಲ್ಲಿ

ಹರಿವ ಹಾವಿಂಗಂಜೆ,
ಉರಿವ ನಾಲಿಗೆಗಂಜೆ,
ಸುರಗಿಯ ಮೊನೆಗಂಜೆ,
ಒಂದಕ್ಕಂಜುವೆ,
ಒಂದಕ್ಕಳುಕುವೆ
ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ.
ಮುನ್ನಂಜದ ರಾವಣನೇ ವಿಧಿಯಾದ !
ಅಂಜುವೆನಯ್ಯ, ಕೂಡಲಸಂಗಮದೇವಾ.

ಎಂದು ಹೇಳಿರುವಿರಿ. ಇಂದು ತಮ್ಮಿಂದ ಸಂಪೂರ್ಣ ವಿವರ ಕೇಳಿ ಧನ್ಯರಾದೆವು ಎಂದು ಸಭೆಗೆ ಮಂಗಲ ಹಾಡಿದರು.

## ಕಾಯ ಭೂಮಿ ಹೇಮ ವಿಷಯಕ್ಕೆ ಮರುಳಾಗಿದೆ ತನ್ನದೇ ಆದ ಮಹಾಜ್ಞಾನದಿಂದ ಬಹುದೂರ ಉಳಿದಿದೆ

ಸೂರ್ಯೋದಯವಾಗುತ್ತಲಿದೆ . ಶರಣರು ಮಹಾಮನೆಯತ್ತ ನಡೆಯುತಿದ್ದಾರೆ. ವೇದಿಕೆಯ ಮೇಲೆ ಬಸವಣ್ಣ ಚನ್ನಬಸವಣ್ಣ ಆಸೀನರಾಗಿದ್ದಾರೆ. ಶರಣರು ಬಸವಣ್ಣ ಚನ್ನಬಸವಣ್ಣನವರಿಗೆ ಶರಣು ಶರಣಾರ್ಥಿ ಎಂದು ಕೈ ಮುಗಿದು ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುತ್ತಾರೆ .

**ಚನ್ನಬಸವಣ್ಣ :** ಸಕಲ ಶರಣರನ್ನು ಸ್ವಾಗತಿಸುತ್ತಾ , ಬಸವಣ್ಣನವರು ಈ ದಿನದ ವಿಷಯದಲ್ಲಿ ಜ್ಞಾನದ ಬಗ್ಗೆ ಪ್ರಸ್ತಾಪಿಸುತ್ತಾರೆ.

**ಸತ್ಯಕ್ಕ :** ಎದ್ದು ನಿಂತು ಬಸವಣ್ಣನವರಿಗೆ ಕೈ ಮುಗಿದು ಶರಣು ಶರಣಾರ್ಥಿ ಬಸವಣ್ಣ ಎನ್ನುತ್ತಾ,

ಬಸವರಸ ತಾವು ತಮ್ಮ ಒಂದು ವಚನದಲ್ಲಿ ''ಕಳಬೇಡ'' ಎಂದು ಹೇಳಿರುವಿರಿ ಮತ್ತೊಂದು ವಚನದಲ್ಲಿ

''ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದರೆ,
ಕೂಡಲಸಂಗಯ್ಯನಲ್ಲದೇ ಬೇರಲ್ಲ ಕೊಡು ಕೊಡೆಲೆ ಚಾಂಡಾಲಗಿತ್ತಿ
ಎನ್ನಯ್ಯನ ಕೈ ನೊಂದಾವು'' ಎಂದು ಮಹಾತಾಯಿಯನ್ನು ನಿಂದಿಸಿರುವಿರಿ.

ಕಳವು ಮಾಡಲು ಬಂದ ಕಳ್ಳನನ್ನು ಕೂಡಲಸಂಗಯ್ಯ ಎಂದು ಕರೆದಿರುವಿರಿ.

ಈ ಎರಡು ಮಾತುಗಳು ನಮ್ಮಲ್ಲಿ ಗೊಂದಲವನ್ನುಂಟು ಮಾಡಿವೆ. ದಯವಿಟ್ಟು ವಿವರಿಸಿ ಹೇಳಿ ಬಸವರಸ.

**ಬಸವಣ್ಣ :** ಎಂತಹ ಸುಂದರವಾದ ಪ್ರಶ್ನೆ ಕೇಳಿದಿರಿ ಸತ್ಯಕ್ಕ. ಸತ್ಯವನ್ನು ತಿಳಿಯಲೇಬೇಕು ಎನ್ನುವ ಕುತೂಹಲ ನಿಮ್ಮದು.

''ಭೂಮಿ ನಿನ್ನದಲ್ಲ
ಹೇಮ ನಿನ್ನದಲ್ಲ
ಕಾಮಿನಿ ನಿನ್ನವಳಲ್ಲ
ಇವು ಜಗಕ್ಕೆ ಇಕ್ಕಿದ ವಿಧಿ
ನಿನ್ನದೆಂಬುದು ಜ್ಞಾನರತ್ನ ಕಾಣ
ಅದನ್ನು ಕೆಡಗೊಡದೆ ಅಲಂಕರಿಸಿದೆಯಾದೊಡೆ
ನಿನ್ನಂತಹ ಸಿರಿವಂತರು ಯಾರು ಇಲ್ಲ ಎಲೆ ಮನವೇ''

ಎಂದು ಅಲ್ಲಮಪ್ರಭುಗಳು ತಮ್ಮದೇ ಆದ ಒಂದು ವಚನ ಸೂತ್ರದಲ್ಲಿ ಹೇಳಿದ್ದಾರೆ.

ಲೋಕ, ಭೂಮಿ ಹೇಮ ವಿಷಯ ವಸ್ತುವಿನ ಮೇಲೆ ಆಸೆ ಮಾಡುತ್ತದೆ. ಇದು

ಮನದ ಕೆಲಸ. ಮನಕ್ಕೆ ವಸ್ತುವಿನ ಸತ್ಯ ಗೊತ್ತಾಗುವುದಿಲ್ಲ. ಹೀಗಾಗಿ ಭೂಮಿ, ಹೇಮ, ವಿಷಯದ ಮೇಲೆ ಮನ ತನುವಿನೊಂದಿಗೆ ಆಸೆ ಪಡುತ್ತದೆ. ಅವು ತನಗೆ ದಕ್ಕದಿದ್ದರೆ, ಕಳವು ಮಾಡುತ್ತದೆ.

ವಸ್ತುವನ್ನು ಕೊಂಡುಸಂಗ್ರಹಿಸಿದವನು, ವಸ್ತುವಿನ ಮೇಲೆ ಆಸೆಪಟ್ಟು ಕಳವು ಮಾಡಲು ಬಂದವನಿಗೆ ತಾನು ಕೊಂಡ ವಸ್ತುವನ್ನು ಕೊಡುವುದಿಲ್ಲ. ಕಳ್ಳ ವಸ್ತುವನ್ನು ಬಿಡದೇ ಕೊಂದಾದರೂ ಪಡೆಯುತ್ತಾನೆ. ಸಿಕ್ಕರೆ ಕಳ್ಳ ಸಾಯುತ್ತಾನೆ. ಕೊಡದಿದ್ದರೆ ವಸ್ತುವನ್ನು ಸಂಗ್ರಹಿಸಿ ಧರಿಸಿದ ತನು ಸಾಯುತ್ತದೆ.

ಕಳವು ಮಾಡಲು ಬಂದ ಕಳ್ಳನನ್ನು ಮತ್ತು ಆಭರಣ ಧರಿಸಿದ ತನುವನ್ನು ನಿಲ್ಲಿಸಿ, ಪ್ರಾಣ ದೊಡ್ಡದೊ ಅಥವಾ ವಸ್ತು ದೊಡ್ಡದೊ ಎಂದು ಇಬ್ಬರನ್ನು ಕೇಳಿದಾಗ, ಅವರಿಬ್ಬರು ಪ್ರಾಣ ದೊಡ್ಡದು ಎಂದು ಹೇಳುತ್ತಾರೆ. ಆಗ ಅವರಿಬ್ಬರಿಗೂ ವಸ್ತು ಗೌಣವಾಯಿತು.

ಈ ಮುಂಚೆ ಅವರಿಬ್ಬರಿಗೂ ವಸ್ತುವೇ ಪ್ರಾಧಾನವಾಗಿತ್ತು. ಅವರಿಬ್ಬರ ಪ್ರಾಣ ಅವರಿಬ್ಬರಿಗೆ ಗೌಣವಾಗಿತ್ತು . ವಸ್ತು ದೊಡ್ಡದೊ ಪ್ರಾಣದೊಡ್ಡದೊ ಎಂದು ಕೇಳಿದಾಗ ವಸ್ತು ದೊಡ್ಡದಲ್ಲ ಪ್ರಾಣವೇ ದೊಡ್ಡದು ಎಂದು ಹೇಳುವಾಗ,

ಅವರಿಬ್ಬರ ಅರಿವು ಅವರಿಬ್ಬರಿಗೂ ಗುರುವಾಗಿ ಕೆಲಸ ಮಾಡಿತು.

ಕಳ್ಳ ಕಳುವಿನಲ್ಲಿ ಭಾಗಿಯಾದಾಗ, ಅರಿವು ಅವರಿಬ್ಬರಿಗೂ ಮರೆವಾಗಿತ್ತು.

ಮನವೆಂಬ ಅಜ್ಞಾನ ಮುಂದಾಗಿ, ಜ್ಞಾನದ ಮಾತು ಮನ ಕೇಳದೆ ಕಳುವಿನಲ್ಲಿ ಭಾಗಿಯಾಗಿತ್ತು .

ಹಾಗೆಯೇ ಆಭರಣ ಧರಿಸಿದ ತನು ತನ್ನ ಪ್ರಾಣ ರಕ್ಷಣೆ ಮಾಡಿಕೊಳ್ಳದೆ ಧರಿಸಿದ ಆಭರಣ ರಕ್ಷಣೆ ಮಾಡಿಕೊಳ್ಳುವಲ್ಲಿ ಮುಂದಾಯಿತು .

ಹೀಗಾಗಿ ಪ್ರಭುದೇವರು ಭೂಮಿ , ಹೇಮ , ವಿಷಯ ವಸ್ತು , ಇಡೀ ಜಗತ್ತಿನಲ್ಲಿರುವ ತನುಗಳನ್ನು ವಿಧಿಯಾಗಿ ಕಾಡುತ್ತದೆ.

ಏಕೆಂದರೆ ತನುಗಳಲ್ಲಿಯೇ ತನ್ಮಯವಾದ ಮಹಾಜ್ಞಾನವೆಂಬ ರತ್ನವನ್ನು, ತನುವನ್ನು ಆವರಿಸಿದ ಮನವೇ ಮರೆತು ಹೋಗಿದೆ.

ಮನ, ಭೂಮಿ, ಹೇಮ ವಿಷಯವಸ್ತುವನ್ನು ಪಡೆದು ಸುಖಿಸಲು ತನುವನ್ನು ದುರ್ಬಳಕೆ ಮಾಡಿಕೊಂಡಿದೆ.

**ಸತ್ಯಕ್ಕ :** ಪ್ರಭುದೇವರ ವಚನ ಸೂತ್ರವನ್ನು ನಮ್ಮೆಲ್ಲಾ ಶರಣರಿಗೆ ತಿಳಿಯುವಂತೆ, ತೊಳೆ ತೊಳೆಯಾಗಿ, ಬಿಡಿಸಿ ಹೇಳಿದಿರಿ ಬಸವರಸ. ನಮ್ಮ ಜನ್ಮ ಸಾರ್ಥಕವಾಯಿತು. ಆದರೆ, ತಾವು ಹೇಳಿದ 'ಕಳಬೇಡ' ವಿಷಯಕ್ಕೂ ಈ ವಚನಕ್ಕೂ ಏನು ಸಂಬಂಧ ಬಸವರಸ? ತಾವು ದಯವಿಟ್ಟು ಇದನ್ನು ಕೂಡ ನಮಗೆ ತಿಳಿಯುವಂತೆ ಹೇಳಿ ಬಸವಣ್ಣ.

**ಬಸವಣ್ಣ :** ಜ್ಞಾನ, ಸಕಲ ತನುಗಳಲ್ಲಿಯೂ ತನ್ಮಯವಾಗಿದೆ.

ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ಕ್ಷಣ ಕ್ಷಣಕ್ಕೂ ತನು ಮತ್ತು ಮನ ಬಳಸಿಕೊಳ್ಳಬೇಕು.

ಚಿನ್ನ ಒಂದು ಲೋಹ. ಆ ಲೋಹದ ತುಂಬಾ ಹಳದಿ ಬಣ್ಣ ಭರಿತವಾಗಿದೆ.

ಬಣ್ಣವಿಲ್ಲದ ಲೋಹವನ್ನು ತನು ಕೊಳ್ಳುವುದಿಲ್ಲ, ಆಭರಣ ಮಾಡಿ ಧರಿಸುವುದಿಲ್ಲ, ಕಳ್ಳ ಕದಿಯುವುದಿಲ್ಲ,

ಲೋಕಕ್ಕೆ ಲೋಹವೆಂಬ ಸತ್ಯ ಗೊತ್ತಿಲ್ಲ, ಅದು ಹಳದಿ ಬಣ್ಣದ್ದಾದರೇನು ? ಕಪ್ಪು ಬಣ್ಣದ್ದಾದರೇನು ?

ಲೋಹ ಲೋಹವೇ ಆಗಿದೆ. ಜಲ ಕುದ್ದು ಪಾಕವಾಗಿ ಭೂಮಿಯಾಯಿತು. ಆ ಜಲವೇ ಗಟ್ಟಿಗೊಂಡು ಭೂಮಿಯಲ್ಲಿ ಖನಿಜವಾಯಿತು.

ಹಳದಿ, ಬಿಳಿ, ಕಪ್ಪು ಬಣ್ಣವುಳ್ಳ ಲೋಹವಾಯಿತು.

ಜೀವ ಜಲಬಿಂದುವೇ ಗರ್ಭಹೊಕ್ಕು ರಕ್ತ, ಮೂಳೆ, ಮಾಂಸ, ಮಜ್ಜ, ಮೇದಸ್ಸು ಆಗಿ ಇವು ಸೋರದಂತೆ, ಜಲವೇ ಸುಂದರವಾದ ಚರ್ಮದ ಹೊದಿಕೆಯಾಗಿ ತನುವಾಗಿ ಹೊರಬಂತು.

ಇಡೀ ಬ್ರಹ್ಮಾಂಡವನ್ನು ತಿಳಿಯುವ ಜ್ಞಾನ ಶಕ್ತಿ ತನುವಿಗೊಂದೇ ಇದೆ. ತನುವನ್ನು ಆವರಿಸಿದ ಮನದಿಂದಾಗಿ ತನು ಭೌತಿಕ ಜ್ಞಾನವನ್ನೆ ಜ್ಞಾನವೆಂದು ತಿಳಿದು ಅಧ್ಯಯನದಲ್ಲಿ ನಿರತವಾಗಿದೆ.

ತನುವು ಅಧ್ಯಯನ ಮಾಡುವ ಸಕಲ ಗ್ರಂಥಗಳು ತನುವುನಿಂದಲೇ ಹೊರಬಂದಿವೆ. ತಾನು ಬರೆದು ಕಾಗದದಲ್ಲಿ ತುಂಬಿದ ಅಕ್ಷರಗಳನ್ನು ತಾನೇ ಓದುವ ; ಓದಿ ತನ್ನನ್ನು ತಾನೇ ಪಂಡಿತನೆಂದು ಕರೆದುಕೊಳ್ಳುವ ದುರ್ದೈವ ತನುವಿಗೆ ಬಂದಿದೆ.

ಓದಿದ್ದನ್ನು, ಕೇಳಿದ್ದನ್ನು, ನೋಡಿದ್ದನ್ನು, ಸ್ವಾನುಭಾವಕ್ಕೆ ತೆಗೆದುಕೊಂಡು ತನ್ನ ಸ್ವಾನುಭಾವದಿಂದ ಪುನಃ ಮಾತನಾಡುವ, ನೋಡುವ, ಕೇಳುವ, ಮುಟ್ಟುವ, ರುಚಿಸಿ, ಮೂಸಿಸುವ ಶಕ್ತಿಯನ್ನು ತನು ಮರೆತು ಹೋಗಿದೆ.

ಪುಸ್ತಕವನ್ನು ಓದಿ ಜ್ಞಾನ ಕಳುವು ಮಾಡಿ, ಅದು ತನ್ನದೇ ಎಂದು ವಾದಿಸುವ ಅಜ್ಞಾನವನ್ನು ತನು ಮತ್ತು ಮನ ಬಿಟ್ಟಾಗಲೇ ತನುವಿನಲ್ಲಿಯೇ ತನ್ಮಯವಾದ ಜ್ಞಾನ ತನುವಿಗೆ ಬಳಕೆಗೆ ಬರುತ್ತದೆ.

ಜ್ಞಾನ ಕಳವು ಮಾಡುವ ವಸ್ತುವಲ್ಲ, ಹೀಗಾಗಿ 'ಕಳಬೇಡ ' ಎಂದು ಹೇಳಿದೆ. ಹಾಗೆಯೇ ತನ್ನ ಜ್ಞಾನವನ್ನು ತಾನು ಬಳಕೆ ಮಾಡದಿದ್ದರೆ, ಆ ದಿವ್ಯ ಜ್ಞಾನಶಕ್ತಿಯನ್ನು ತಾನೇ ಕೊಂದಂತಾಗುತ್ತದೆ.

ತನು ತನುವಿನಲ್ಲಿಯೇ ತನ್ಮಯವಾದ ಜ್ಞಾನವನ್ನು ತನು ಸಾಯುವುದಕ್ಕೆ ಮುನ್ನ ತನುವೆ ಬಳಕೆ ಮಾಡಿಕೊಳ್ಳಬೇಕು.

ಇಲ್ಲದಿದ್ದರೆ, ಜ್ಞಾನವನ್ನು ಕೊಂದ ಪಾಪ ತನುವಿಗೆ ತಟ್ಟುತ್ತದೆ.

**ಸ್ವಕ್ಕ:** ನಾವೆಲ್ಲಾ ಧ್ಯರಾದವು ಬಸವರಸ ತನುವಿನಲ್ಲಿ ತನ್ಮಯವಾದ ಜ್ಞಾನ ಬರೀ ಜ್ಞಾನವಲ್ಲ.

ಅದು ಜ್ಞಾನೇಶ್ವರ, ಪರಮೇಶ್ವರ, ಪರಬ್ರಹ್ಮ ಎಂದು ಕೂಡ ತಾವೇ ಹೇಳಿರುವಿರಿ.

ಆ ಬ್ರಹ್ಮನನ್ನು ಬಳಕೆ ಮಾಡದಿದ್ದರೆ ಆತನನ್ನು ಕೊಂದ ಪಾಪ ತನುವಿಗೆ ತಟ್ಟುತ್ತದೆ .

ಎಂದು ಮತ್ತೊಂದು ಸೂತ್ರ ರೂಪದ ವಚನದಲ್ಲಿ ತಾವೇ ಹೇಳಿರುವಿರಿ ಬಸವರಸ .

**ಚನ್ನಬಸವಣ್ಣ :** ಹೌದು ತಾಯಿ. ತಾವು ಸಾಕಷ್ಟು ತಿಳಿದುಕೊಂಡಿರುವಿರಿ.

ನಿಮ್ಮಂತಹ ಶರಣರನ್ನು ಪಡೆದ ನಾವು ಧನ್ಯ .

''ಎಲವೊ ಎಲವೋ ಪಾಪ ಕರ್ಮಂಗಳ ಮಾಡಿದವನೇ

ಎಲವೋ ಎಲವೋ ಬ್ರಹ್ಮ ಹತ್ಯವ ಮಾಡಿದವನೇ

ಒಮ್ಮೆ ನೆನೆ ಕೂಡಲಸಂಗಮದೇವನ ''

ಎಂಬ ಸೂತ್ರದ ವಚನವನ್ನು ಬಸವಣ್ಣನವರು ಹೇಳಿದ್ದಾರೆ.

ಮನ ತನುವನ್ನು ಭ್ರಮಾಧೀನನನ್ನಾಗಿ ಮಾಡುತ್ತದೆ. ಲೋಹವನ್ನು ಚಿನ್ನವೆಂದು ತನುವಿಗೆ ಆಸೆ ತೋರಿಸಿ, ಖರೀದಿಸಿ ಶ್ರೀಮಂತನೆಂದು ಸಾರುತ್ತದೆ.

ಚಿನ್ನವನ್ನು ಕದಿಯಲು ಹಚ್ಚಿ , ಕಳ್ಳನೆಂದು ಹಣೆಪಟ್ಟಿ ಕಟ್ಟುತ್ತದೆ. ಯುದ್ಧ ಮಾಡಿ ಹಲವಾರು ಸೈನಿಕರನ್ನು ಕೊಂದು ಚಿನ್ನದ ಕಿರೀಟವನ್ನು ಧರಿಸಿಕೊಂಡು ಬಂದವನಿಗೆ ರಾಜನೆಂದು ಸಾರುತ್ತದೆ.

ಮನ ತನುವನ್ನು ಭ್ರಮಾಧೀನಗೊಳಿಸಿ ಕಳ್ಳ , ರಾಜ, ಶ್ರೀಮಂತ ಎಂದು ತನುವನ್ನು ಸೀಳಿ, ಸೀಳಿ, ತನುವಿನಲ್ಲೆ ಇದ್ದು , ಮನ ತನುವನ್ನೇ ಯಾಮಾರಿಸುತ್ತದೆ.

ತನುವಿನಲ್ಲೇ ತನ್ಮಯವಾದ ಮಹಾಜ್ಞಾನವೆಂಬ ಜ್ಞಾನೇಶ್ವರನಿಗೆ ತನುವನ್ನು ಆವರಿಸಿದ ಮನ ಶರಣಾಗತನಾಗಿ, ಶರಣು ಹೋದರೆ ಸಾಕು ಮನ ತನ್ನ ಭ್ರಮೆಯನ್ನು ಕಳೆದುಕೊಂಡು ಅರಿವು ಎಂಬ ಬ್ರಹ್ಮನಲ್ಲಿ ಲೀನವಾಗಿ ಬ್ರಹ್ಮನೇ ತಾನಾಗುತ್ತದೆ.

ಆಗ ತನು ಬ್ರಹ್ಮ ತನು ಆಗುತ್ತದೆ. ಬ್ರಹ್ಮತನು ಎಂದು ಕರೆಯಿಸಿಕೊಳ್ಳುತ್ತದೆ.

ಇಲ್ಲದಿದ್ದರೆ ಬ್ರಹ್ಮಹತ್ಯೆ ಮಾಡಿದ ಪಾಪ ತನು ಮತ್ತು ಮನಕ್ಕೆ ಸುತ್ತಿಕೊಳ್ಳುತ್ತದೆ.

ಅನಂತ ಕಾಲದವರೆಗೆ ಅಜ್ಞಾನದಲ್ಲಿ ಸುಳಿ ಸುಳಿದು ತನು ಒಮ್ಮೆ ಇಲ್ಲವಾಗುತ್ತದೆ. ಇದು ಜ್ಞಾನ ಕಳವು ಮಾಡಿದ ಪಾಪ ಮತ್ತು ಜ್ಞಾನವನ್ನು ಬಳಕೆ ಮಾಡದೆ ಕೊಂದ ಪಾಪ ತನು ಮತ್ತು ಮನಕ್ಕೆ ತಟ್ಟುತ್ತದೆ . ಹೀಗಾಗಿ ಬಸವಣ್ಣನವರು ಜ್ಞಾನವನ್ನು ಕಳವು ಮಾಡಬೇಡ ಏಕೆಂದರೆ, ಜ್ಞಾನ ಎನ್ನುವುದು ಅನ್ಯರಿಂದ ಬರುವಂತದ್ದು ಅಲ್ಲ, ತನ್ನಲ್ಲಿರುವ ಜ್ಞಾನವನ್ನು ಬೇರೊಬ್ಬರಿಗೆ ಕೊಡಲು ಕೂಡ ಬರುವುದಿಲ್ಲ, ಅದು ತನುವಿನಲ್ಲೆ ತನ್ಮಯವಾದಂತದ್ದು .

ಎಲೆ ಮನವೇ ಅದನ್ನು ನೀನು ಬಳಸು ಆ ಜ್ಞಾನವೇ ನೀನಾಗು ಎಂದು ಮನಕ್ಕೆ ಮನವೇ ತಿಳಿ ಹೇಳುವ ಮಾತಾಗಿದೆ. ಎಂದು ಹೇಳುತ್ತಾ ಸಭೆಗೆ ಮಂಗಳ ಹಾಡಿದರು. ಸಕಲ ಶರಣರು ಬ್ರಹ್ಮರಸ ಪಾನ ಮಾಡಿದ ತೃಪ್ತಿಯಲ್ಲಿ ತೇಲಾಡುತ್ತಾ, ಮನೆಗೆ ನಡೆದರು.

## ಕಾಯ, ಇದೊಂದು ಜೀವಜಲದ ಪವಾಡ

ಸೂರ್ಯಾಸ್ತವಾಗುತ್ತಲಿದೆ . ಸತ್ಸಂಗಕ್ಕಾಗಿ ಶರಣರು ಮಹಾ ಮನೆಗೆ ತೆರಳುತ್ತಿದ್ದಾರೆ. ಬಸವಣ್ಣ ಚನ್ನಬಸವಣ್ಣನವರಿಗೆ ಕೈ ಮುಗಿದು ಶರಣು ಶರಣಾರ್ಥಿ ಎನ್ನುತ್ತಾ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುತ್ತಾರೆ .

**ಗೊಗ್ಗವ್ವೆ** : ಬಸವಣ್ಣನವರಿಗೆ ಕೈ ಮುಗಿದು ಶರಣು ಶರಣಾರ್ಥಿ ಎನ್ನುತ್ತಾ , ಬಸವರಸ ತಮ್ಮ ವಚನದಲ್ಲಿ '' ಉದಕದೊಳಗೆ ಬಯ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು ಎಂದಿರುವಿರಿ ಉದಕದೊಳಗೆ ಕಿಚ್ಚು ಬಚ್ಚಿಟ್ಟುಕೊಂಡಿದೆ ಎಂದು ಹೇಳಿದಂತಾಗಲಿಲ್ಲವೇ? ಅದು ಹೇಗೆ ಬಸವರಸ ದಯವಿಟ್ಟು ವಿವರಿಸಿ ಹೇಳಿ.

**ಬಸವಣ್ಣ**: ಇದು ವಿಚಿತ್ರ ಆದರೂ ಸತ್ಯ .

ಉರಿಯುವ ಬೆಂಕಿಯನ್ನು ನಂದಿಸುವ ಗುಣ ಜಲಕ್ಕಿದೆ. ಆದರೆ, ಜಲದಲ್ಲಿ ಕಿಚ್ಚು ಬಚ್ಚಿಟ್ಟುಕೊಂಡಿದೆ. ಬಚ್ಚಿಟ್ಟುಕೊಂಡ ಕಿಚ್ಚು ಜಲವನ್ನು ಸುಡುವುದಿಲ್ಲ ಉರಿಯುವ ಜ್ವಾಲೆಯನ್ನು ಜಲ ತಣ್ಣಗೆ ಮಾಡದೇ ಬಿಡುವುದಿಲ್ಲ. ಇದು ಜಲದ ಗುಣ. ಜಲದಲ್ಲಿಯೇ ಬಚ್ಚಿಟ್ಟು ಕೊಂಡ ಕಿಚ್ಚಿನ ಗುಣ!

**ಗೊಗ್ಗವ್ವೆ** : ಅದು ಹೇಗೆ ಕಿಚ್ಚು ಬಚ್ಚಿಟ್ಟುಕೊಂಡಿದೆ ಬಸವಣ್ಣ.?

**ಬಸವಣ್ಣ** : ಜಲ , ಜಲಜನಕ ಆಮ್ಲಜನಕ ಇವೆರಡೂ ಕೂಡಿ ಜಲವಾಗಿದೆ. ಹೀಗಾಗಿ ಜಲದಲ್ಲಿ ಉರಿಯುವ ಬೆಂಕಿ ಇದೆ . ಉರಿಯುವುದಕ್ಕೆ ಸಹಕಾರಿಯಾಗುವ ಪ್ರಾಣವಾಯು ಕೂಡಾ ಇದೆ. ಅಗ್ನಿಯನ್ನು ನಂದಿಸುವ ಜಲವೂ ಇದೆ.

ಈ ಜೀವ ಜಲಬಿಂದುವೇ ಗರ್ಭಪ್ರವೇಶ ಮಾಡಿ ರಕ್ತ, ಮಾಂಸ, ಮೂಳೆ, ಮಜ್ಜ, ಮೇದಸ್ಸು ಆಗಿದೆ. ಜಲವೇ ಚರ್ಮದ ಕವಚವಾಗಿ, ಕಾಯವೆಂಬ ಹೆಸರು ಪಡೆದು, ಕಾಯದ ಗರ್ಭದಿಂದ ಹೊರಬಂದಿದೆ.

ಹೀಗಾಗಿ ಕಾಯ, ಜೀವ ಜಲದಿಂದಲೇ ನಿರ್ಮಾಣವಾಗಿದೆ.

ಕಾಯವೆಂಬುದು ಮಾತನಾಡುವ, ನೋಡುವ, ಕೇಳುವ, ಮೂಸಿಸುವ,

ಸ್ಪರ್ಶಿಸುವ, ರುಚಿಸುವ ಜಲರಾಶಿ! ಜೀವಜಲರಾಶಿ!!

ಕಾಯ ಒಂದೇ, ಕಾಯದ ನೋಡುವ ಕಣ್ಣುಗಳು ಕೂಡ ಒಂದೇ, ಕೇಳುವ ಕಿವಿಗಳೆಲ್ಲ ಒಂದೇ, ರುಚಿಸುವ ನಾಲಿಗೆ ಒಂದೇ, ಮೂಸಿಸುವ ಮೂಗು ಒಂದೇ, ಸ್ಪರ್ಶಿಸುವ ಚರ್ಮ ಕೂಡ ಒಂದೇ, ನುಡಿಯುವ ಶಬ್ದಕೂಡ ಒಂದೇ, ಇಡೀ ಬ್ರಹ್ಮಾಂಡದಲ್ಲಿರುವ ಕಾಯಗಳೆಲ್ಲಾ ಜೀವ ಜಲ ಗಟ್ಟಿಗೊಂಡು ನಿರ್ಮಾಣವಾಗಿದೆ.

ಜೀವಜಲ ಕಾಯದಲ್ಲಿ ಕಣ್ಣಾಗಿ ನೋಡುವ ಜ್ಞಾನ ಪಡೆಯಿತು. ನೋಡುವ ನೋಟವೆಲ್ಲ ಕಣ್ಣಿನಲ್ಲಿ ಮೂಡಿ ಆ ಸೌಂದರ್ಯದ ದೃಶ್ಯ ಜ್ಞಾನವನ್ನು ಕಾಯಕ್ಕೆ

ರವಾನಿಸಿತು.

ಇಡೀ ಕಾಯ ಧ್ವನಿಯ ಮೂಲಕ ಪುಳಕಿತಗೊಂಡು ಸಂತೋಷ ವ್ಯಕ್ತಪಡಿಸಿತು.

ಕಾಯ, ಇದೊಂದು ಜೀವಜಲದ ಪವಾಡ; ಜಲದ ಪವಾಡ! ಕಿಚ್ಚು ಆಮ್ಲಜನಕದಲ್ಲಿ ಬೆರೆತು ತಣ್ಣನೆಯ ಜಲವಾದದ್ದು ಪವಾಡ ! ಜಲವೇ ಜೀವಜಲವಾಗಿ ನೋಡಿ, ಬೆಳಗಿ, ಪುಳಕಿತಗೊಂಡು ಮಾತನಾಡಿದ್ದು ಪವಾಡವೇ ಆಗಿದೆ!

ಕಣ್ಣಿನಲ್ಲಿರುವ ಕಿಚ್ಚು ಉರಿದು ಬೆಳಕಿನ ದೃಶ್ಯವಾಯಿತು. ಆ ಬೆಳಕೆ ವಸ್ತುವಿನ ಮೇಲೆ ಹರಿದು ಆನಂದವನ್ನು ಪಡೆಯಿತು. ಹೀಗೆ ಮತ್ತೆ ಮತ್ತೆ ಪಡೆಯುವ ಬಯಕೆಯೇ ಕಾಯಕ್ಕೆ ಅಜ್ಞಾನವಾಗಿ ಕಾಯದಲ್ಲಿಯೇ ಸೇರಿತು. ಕಣ್ಣಿನಲ್ಲಿ ಹುಟ್ಟಿದ ಬೆಳಕು, ಕಣ್ಣಿನಲ್ಲಿಯೇ ಹುಟ್ಟಿದ ಬಯಕೆಯ ದೆಸೆಯಿಂದಾಗಿ ಕಾಯವನ್ನು ಸುಡುವಂತೆ ಮಾಡಿತು.

ಬಯಕೆಯಿಂದ ಸುಡುವ ಕಾಯ, ಹರಿಯುವ ತಣ್ಣನೆಯ ಜಲವನ್ನು ಕುಡಿದರೂ ನಂದದಂತಾಯಿತು. ಜಲದಲ್ಲಿ ಹುಟ್ಟಿದ ಕಿಚ್ಚು ಕಾಯವೆಂಬ ಜಲರಾಶಿಯನ್ನೇ ಸುಡುವಂತೆ ಮಾಡಿತು.

**ಗೊಗ್ಗವ್ವೆ :** ಆಹಾ! ಬಸವರಸ, ನಾವು ಧನ್ಯರಾದೆವು.

ಮಾತನಾಡುವ ಜಲ, ಸುಡುವ ಜಲ, ನೋಡುವ ಜಲದ ಪರಿಚಯವನ್ನು ಮುಟ್ಟಿ, ಸ್ಪರ್ಶಿಸಿ, ರುಚಿಸುವ ಜಲವನ್ನು ಕಾಯವೆಂಬ ಜಲಕ್ಕೆ ಪರಿಚಯಿಸಿದಿರಿ ಬಸವಣ್ಣ . ನಾವು ಧನ್ಯರಾದೆವು .

ಜಲದ ಬಗ್ಗೆ ಮತ್ತಷ್ಟು ತಿಳಿ ಹೇಳಿ ಬಸವಣ್ಣ.

**ಬಸವಣ್ಣ :** ಉದಕದೊಳಗೆ ಹುಟ್ಟಿದ ಕಿಚ್ಚು , ಶಬ್ದದ ರೂಪದಲ್ಲಿ ಕಿವಿಯಲ್ಲಿ ಬೆಳಕಾಗಿ, ಪ್ರತಿಶಬ್ದವನ್ನು ಕೇಳಿ ಅದರ ಆನಂದವನ್ನು ಕಾಯದ ಕಣ ಕಣಕ್ಕೆ ಬೀರಿ ಪುಳಕಿತಗೊಂಡಿತು.

ಧ್ವನಿಯ ಮೂಲಕ ಚೆಲ್ಲಿ ಕಾಯ, ಸಕಲ ಕಾಯಗಳನ್ನೆಲ್ಲ ಪುಳಕಿತಗೊಳಿಸಿತು. ಹಾಗೆಯೇ ಕಿವಿಯಲ್ಲಿ ಅಜ್ಞಾನದ ಬಯಕೆಯ ಪೊರೆಯನ್ನು ಎಳೆದು , ಕಿವಿ ಶಬ್ದವನ್ನು ಸ್ವೀಕರಿಸಿ, ಕಾಯವನ್ನು ಸೋಟ್ಟಿಸಿತು.

ಉದಕದೊಳಗೆ ಬಚ್ಚಿಟ್ಟುಕೊಂಡ ಕಿಚ್ಚು , ಚರ್ಮವನ್ನು ಸೇರಿ ಸ್ಪರ್ಶಜ್ಞಾನದ ಬೆಳಕಾಯಿತು. ಸ್ಪರ್ಶದ ಚುಂಬನದಿಂದ ಕಾಯವನ್ನು ಪುಳಕಿತಗೊಳಿಸಿತು.

ಕಾಯದ ಸ್ಪರ್ಶ ಶಕ್ತಿ, ಕಾಯಕ್ಕೆ ಆನಂದ ಉಂಟು ಮಾಡುವ ಮಹಾ ಜ್ಞಾನವಾಯಿತು. ಆ ಸ್ಪರ್ಶ ಶಕ್ತಿಯಲ್ಲಿಯೇ ಬಯಕೆ ಎಂಬ ಅಜ್ಞಾನ ಬೆರೆತು, ಆ ಬಯಕೆ ಸ್ಪರ್ಶವನ್ನು ಸೀಕ್ವರಿಸಿ, ಇಡೀ ಕಾಯವನ್ನೇ ಸೋಟ್ಟಿಸುವ ಕೆಲಸ ಮಾಡಿತು.

ಆನಂದವನ್ನು ಉಂಟುಮಾಡುವ ಪ್ರತಿ ಸ್ಪರ್ಶವು, ವಿಕೃತ ರಸಾಯನವನ್ನು ಉಂಟು ಮಾಡಿ ಕಾಯವನ್ನು ಕತಕತನೇ ಕುದಿಯುವಂತೆ ಜಲದಲ್ಲಿ ಅಡಗಿದ ಕಿಚ್ಚು ಜಲವೆಂಬ ಕಾಯವನ್ನು ಪ್ರೇರೇಪಿಸಿತು .

ಇದು ಉದಕದ ಮಹಿಮೆ, ಉದಕದಲ್ಲಿ ಬಚ್ಚಿಟ್ಟುಕೊಂಡ ಕಿಚ್ಚಿನ ಮಹಿಮೆ.

ಹೊತ್ತು ಕಳೆದುದೇ ಗೊತ್ತಾಗಲಿಲ್ಲ ಇಂದಿನ ಸಭೆಯನ್ನು ಇಲ್ಲಿಗೆ ಮುಕ್ತಾಯ ಮಾಡೋಣ ಎಂದು ಸಭೆಗೆ ಮಂಗಲ ಹಾಡಿದರು.

# ಜಲಕ್ಕೆ ಜಾತಿಯಿಲ್ಲ, ಜಲಭರಿತವಾದ ಕಾಯ ಜಾತಿ ಮತ ಧರ್ಮದಿಂದ ಸುಡುತ್ತದೆ

ಸೂರ್ಯೋದಯದ ಸಮಯ ಶರಣರು ಮಹಾ ಮನೆಯತ್ತ ನಡೆದು ಶರಣು ಹೇಳಿ, ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುತ್ತಾರೆ .

**ಬಸವಣ್ಣ :** ಸಕಲ ಶರಣರಿಗೂ ಕೈ ಮುಗಿದು , ಶರಣು ಶರಣಾರ್ಥಿ ಎಂದು ಹೇಳುತ್ತಾ ನಿನ್ನೆಯ ವಿಷಯವನ್ನೇ ಇಂದು ಮುಂದುವರೆಸುವೆ.

ಜಲಕ್ಕೆ ಜಾತಿಯಿಲ್ಲ . ಜಲಭರಿತವಾದ ತನು ಜಾತಿ, ಮತ, ಧರ್ಮಗಳನ್ನು ಸ್ಪರ್ಶದ ರೂಪದಲ್ಲಿ ಸ್ವೀಕರಿಸಿ, ಅದರಲ್ಲಿ ಅಡಗಿದ ಬಯಕೆ ತನುವನ್ನು ಸುಡುವಂತೆ ಮಾಡುತ್ತದೆ.

ಯಾವ ತನು ಆದರೇನು ? ಚರ್ಮ ಒಂದೇ.

ಆದರೂ ಆ ಚರ್ಮದಲ್ಲಿ ಹೆಣ್ಣು ಗಂಡು ಎನ್ನುವ ಜಾತಿ, ಧರ್ಮಪಂಗಡವನ್ನು ತಾನೇ ಸೃಷ್ಟಿಮಾಡಿಕೊಂಡು ಚರ್ಮದ ಬಯಕೆ, ಚರ್ಮದೊಂದಿಗೆ ಬೆರೆತು ಸುಖಿಸಿ, ಇಡೀ ತನುವನ್ನು ಸುಡುವಂತೆ ಮಾಡುತ್ತದೆ.

ರಾವಣನ ಚರ್ಮ ಒಂದೇ, ಸೀತಾ ಮಾತೆಯ ಚರ್ಮವು ಒಂದೇ. ಆದರೂ ಚರ್ಮ ಚರ್ಮವನ್ನು ಬಯಸಿ, ರಾಮಾಯಣವನ್ನೇ ಸೃಷ್ಟಿಮಾಡಿ ಈ ಕಿಚ್ಚಿನಲ್ಲಿ ಅಪಾರ ಪ್ರಮಾಣದ ವಾನರ ಸೈನ್ಯ, ರಾವಣನ ರಕ್ಕಸ ಸೈನ್ಯ ಸುಟ್ಟು ಬೂದಿಯಾಯಿತು.

ರಾವಣ ಆತನ ಮಕ್ಕಳು ಸತ್ತು ಹೋದರು. ಬಲಶಾಲಿ ವಾಲಿ ವ್ಯರ್ಥ ಸತ್ತುಹೋದ.

ಜಲಭರಿತ ಚರ್ಮದಲ್ಲಿ ಹುಟ್ಟಿದ ಬಯಕೆಯ ಅಜ್ಞಾನದ ಕಿಚ್ಚನ್ನು ಬಲಶಾಲಿಗಳಿಗೆ ಕೂಡಾ ನಂದಿಸಲು ಸಾಧ್ಯವಾಗಲಿಲ್ಲ.

ಜಲದೊಳಗೆ ಬಚ್ಚಿಟ್ಟುಕೊಂಡ ಬಯಕೆಯೆಂಬ ಕಿಚ್ಚು, ಕಣ್ಣಿನೊಳಗೆ ದೃಶ್ಯದ ಮೂಲಕ ಹರಿದು ಸತ್ಯ ನೋಡದಂತೆ ಮಾಡಿತು.

ಕಿವಿಯೊಳಗೆ ಹರಿದು ಸತ್ಯ ಕೇಳದಂತೆ ಮಾಡಿತು. ಚರ್ಮದೊಳಗೆ ಹರಿದು ಸತ್ಯ ಮುಟ್ಟಿ ಸುಖಿಸದಂತೆ ಮಾಡಿತು.

ಇದು ಉದಕದೊಳಗೆ ಬಚ್ಚಿಟ್ಟುಕೊಂಡ ಬಯಕೆಯ ಕಿಚ್ಚಿನ ಫಲ.

**ಗೊಗ್ಗವ್ವೆ :** ಉದಕದೊಳಗೆ ಬಚ್ಚಿಟ್ಟುಕೊಂಡ ಬಯಕೆಯ ಕಿಚ್ಚಿನ ಕುರಿತು ಸವಿವರವಾಗಿ ವಿವರಿಸಿದಿರಿ ಬಸವಣ್ಣ . ಸಕಲ ಶರಣರು ತಮಗೆ ಋಣಿಯಾಗಿರುತ್ತಾರೆ . ಹಾಗೆಯೇ ಉದಕದ ಬಗ್ಗೆ ಮತ್ತಷ್ಟು ವಿವರಿಸಿ ಹೇಳಿ ಬಸವರಸ .

**ಬಸವಣ್ಣ :** ಉದಕ ಒಂದೇ, ಅದು ಸಸಿಗೆ ಹರಿದು ಸಿಹಿಯಾಗಿದೆ. ಹುಳಿಯಾಗಿದೆ. ಖಾರವಾಗಿದೆ. ಖಾಕು ಆಗಿದೆ. ಘಾಟು ಆಗಿದೆ. ಕಹಿ ಸಿಹಿ ಒಗರು ಮುಂತಾದ ಹೆಸರಿನ ರುಚಿಗಳು ಉದಕ ಹರಿದ ಸಸಿಯೊಳಗೆ ನಿರ್ಮಾಣವಾಗಿದೆ.

ತನುವಿನಲ್ಲಿ ಭರಿತವಾದ ಉದಕ ನಾಲಿಗೆ ಮುಖಾಂತರ ರುಚಿಯನ್ನು ಸವಿದು ಇಡೀ ತನುವನ್ನೇ ಪುಳಕಿತಗೊಳಿಸುತ್ತದೆ. ಅದೇ ನಾಲಿಗೆಯಲ್ಲಿ ರುಚಿಯನ್ನು ಮತ್ತೆ ಮತ್ತೆ ಸೃಷ್ಟಿ ಮಾಡಿ ಸವಿಯುವ ಬಯಕೆ ಹುಟ್ಟಿಸಿ , ರುಚಿಯಾಗದಿದ್ದರೆ ಉದಕದ ಕಿಚ್ಚು ತನುವಿನಲ್ಲಿ ಸ್ಫೋಟಗೊಂಡು ತನುವನ್ನು ಕುದಿಯುವಂತೆ ಮಾಡುತ್ತದೆ.

ಉದಕಕ್ಕೆ ಬಣ್ಣವಿಲ್ಲ , ರುಚಿಯಿಲ್ಲ, ವಾಸನೆಯಿಲ್ಲ, ತನ್ನ ಮಟ್ಟ ತಾನು ಕಾಯ್ದುಕೊಳ್ಳುತ್ತದೆ ಎನ್ನುವ ಜ್ಞಾನಿಯ ಮಾತನ್ನು ಕೂಡ ತನುವಿನಲ್ಲಿ ಸಂಗಮವಾದ ಜಲ ಹುಸಿ ಮಾಡುತ್ತದೆ.

ಜಲಕ್ಕೆ ಬಣ್ಣವಿಲ್ಲ, ಆದರೆ ತನುಗಳಿಗೆ ಹರಿದ ಜಲ ರಕ್ತವಾಗಿ ಕೆಂಪಾಯಿತು. ಜಲದಿಂದಲೇ ನಿರ್ಮಾಣವಾದ ಚರ್ಮ ಕೆಂಪು, ಕಪ್ಪು, ಬಿಳಿ, ಕಂದು ಬಣ್ಣಗಳಿಂದ ರಂಜಿಸಿ, ಚರ್ಮ ಎಂದು ಹೆಸರು ಪಡೆಯಿತು. ಹಾಗೆಯೇ ಸಸಿಗಳಿಗೆ ಹರಿದ ಜಲಕ್ಕೂ ಬಣ್ಣ ಬಂದು ರುಚಿ ನಿರ್ಮಾಣವಾಯಿತು.

ರುಚಿ ಸಸಿಯದಾದರೂ, ನಾಲಿಗೆ ಮೂಲಕ ರುಚಿಸಿ ರುಚಿಯಾಗದಿದ್ದರೆ ಮತ್ತೊಂದು ತನುವನ್ನು ನಿಂದಿಸುತ್ತದೆ. ಅಡಿಗೆ ರುಚಿಯಾಗಲಿಲ್ಲವೆಂದು ತನು ತನುವನ್ನೇ ಹಿಂಸಿಸುತ್ತದೆ.

ತನುವಿನಲ್ಲಿ ಕಿಚ್ಚು ಸ್ಫೋಟಗೊಂಡು ತನು ತನುವನ್ನು ಕೊಲ್ಲುವುದು, ಇಲ್ಲ ನಿಂದಿಸಿ, ಆತ್ಮಹತ್ಯೆ ಮಾಡಿಕೊಂಡು ಸಾಯುವ ಕೆಲಸ ಮಾಡುತ್ತದೆ .

ಉದಕದೊಳಗೆ ಬಚ್ಚಿಟ್ಟುಕೊಂಡ ಬಯಕೆಯ ಮೋಸ ತನುವಿಗೆ ಅರ್ಥವಾಗುವುದಿಲ್ಲ.

ರುಚಿ ತನ್ನದಲ್ಲ . ಅದು ಸಸಿಯೊಳಗೆ ಇರುವ ರಸದ ರುಚಿ. ಬಯಕೆ ಇಲ್ಲದೇ ಸವಿದರೆ, ಸವಿದಷ್ಟು ಆನಂದ. ಬಯಸಿ ಸವಿದರೆ ಕಿಚ್ಚು!

ತಿಳಿದು ಸವಿದರೆ, ಸಸಿಯೊಳಗೆ ಇರುವ ರಸ ಕೂಡ ಜಲವೇ ಆಗಿದೆ. ತನುವೂ ಜಲ! ರುಚಿ ಸವಿಯುವ ನಾಲಿಗೆಯೂ ಜಲ! ಜಲ ಜಲದಲ್ಲಿ ಬೆರೆತು ಜಲ ರುಚಿ ಕಳೆದುಕೊಂಡು ಜಲಮಯವಾಗುತ್ತದೆ.

ಜಲಕ್ಕೆ ಬಣ್ಣವಿಲ್ಲ , ವಾಸನೆಯಿಲ್ಲ , ರುಚಿಯಿಲ್ಲ, ಇದನ್ನು ಮನ ತನುವಿನಲ್ಲಿಯೇ ತನ್ಮಯವಾದ ಜ್ಞಾನದಿಂದ ತಿಳಿಯುತ್ತದೆ. ತನ್ನ ಮಟ್ಟ ತಾನು ಸಮದರ್ಶಿಯಾಗಿ ಕಾಯ್ದುಕೊಳ್ಳುತ್ತದೆ. ತನು ಜ್ಞಾನದ ಭಂಡಾರವೇ ತಾನಾಗುತ್ತದೆ.

ಇಂದಿಗೆ ಇಷ್ಟು ಸಾಕು . ಸಭೆಯನ್ನು ಇಲ್ಲಿಗೆ ಮುಗಿಸೋಣ ಎಂದು

ಸಭೆಗೆ ಮಂಗಲ ಹಾಡಿದರು.

## ಉದಕದಲ್ಲಿ ವಾಸನೆಯಿಲ್ಲ ರುಚಿಯೂ ಇಲ್ಲ ಆದರೆ ಪರಿಮಳ, ಸ್ವಾದ, ಸೌಂದರ್ಯ, ಸುಗಂಧ, ದುರ್ಗಂಧವನ್ನು ಬಚ್ಚಿಟ್ಟುಕೊಂಡಿದೆ

ಸಂಜೆಯ ಸತ್ಸಂಗ ಸಭೆಯಲ್ಲಿ ಸಕಲ ಶರಣರೂ ಸೇರಿದ್ದಾರೆ. ಬಸವಣ್ಣ ಚನ್ನಬಸವಣ್ಣ ವೇದಿಕೆಗೆ ಆಗಮಿಸಿ, ಸಕಲ ಶರಣರಿಗೂ ಶರಣು ಶರಣಾರ್ಥಿ ಎಂದು ಹೇಳಿ ಕುಳಿತುಕೊಳ್ಳುತ್ತಾರೆ.

**ಹಡಪದ ಅಪ್ಪಣ್ಣ :** ಎದ್ದು ನಿಂತು ಬಸವಣ್ಣನವರಿಗೆ ಚನ್ನಬಸವಣ್ಣನವರಿಗೆ ಕೈ ಮುಗಿದು, ಬಸವರಸ ತಾವು ಎರಡು ದಿನಗಳ ಪರ್ಯಂತ ಉದಕದ ಬಗ್ಗೆ ನಮಗೆಲ್ಲಾ ತಿಳಿ ಹೇಳಿದಿರಿ. ಮತ್ತಷ್ಟು ಹೇಳಲು ಸಾಧ್ಯವೇ ? ದಯವಿಟ್ಟು ಹೇಳಿ ಬಸವಣ್ಣ.

**ಬಸವಣ್ಣ :** ಆಗಲಿ ಅಪ್ಪಣ್ಣನವರೇ,

ಉದಕದ ಮಹಿಮೆಯೇ ಹಾಗೆ. ಉದಕದಿಂದಲೇ ಇಡೀ ಜಗತ್ತು ನಿರ್ಮಾಣವಾಗಿದೆ. ಉದಕ ಗಿಡ, ಮರ, ಬಳ್ಳಿ, ಪಶು, ಪಕ್ಷಿ, ಜಲಚರ, ಉರಗ, ಕೀಟ ಕ್ರಿಮಿಗಳಿಗೆಲ್ಲಾ ಜನ್ಮ ಕೊಟ್ಟಿದೆ.

ಇದೆಲ್ಲವನ್ನು ತಿಳಿದು ಆ ಜ್ಞಾನ ಭಂಡಾರವೇ ತಾನೆಂದು ಹೇಳಿಕೊಳ್ಳುವ ಮನುಷ್ಯನನ್ನು ಕೂಡ ಉದಕ ನಿರ್ಮಾಣ ಮಾಡಿದೆ .

ಉದಕ ಪರಿಮಳವೂ ಸ್ವಾದವೂ ಹೌದು, ಸೌಂದರ್ಯವು ಹೌದು, ಸುಗಂಧ ದುರ್ಗಂಧವೂ ಹೌದು.

ನೋಡುವ ದೃಶ್ಯ, ಕೇಳುವ ಶಬ್ದ, ಸ್ಪರ್ಶಿಸುವ ಸುಖ ಹಾಗೂ ಇದೆಲ್ಲವನ್ನು ತಿಳಿಯುವ ಜ್ಞಾನ ಕೂಡ ಉದಕದಿಂದಲೇ ಆಗಿದೆ. ಉದಕದಲ್ಲಿ ಬಚ್ಚಿಟ್ಟುಕೊಂಡ ಕಿಚ್ಚಿನಿಂದಲೇ ಆಗಿದೆ.

ಉದಕ, ಕಬ್ಬಿನ ಸಸಿಗೆ ಹರಿದು ಸಿಹಿಯಾಗಿದೆ. ಉದಕ ಹುಣಸೆಗೆ ಹರಿದು ಹುಳಿಯಾಗಿದೆ. ಉದಕ ಮೆಣಸಿಗೆ ಹರಿದು ಖಾರವಾಗಿದೆ. ಈರುಳ್ಳಿಗೆ ಹರಿದು ಖಾಕು ಎನ್ನುವ ರುಚಿಯಾಗಿದೆ. ಉದಕ ಬೆಳ್ಳುಳ್ಳಿಯ ಸಸಿಗೆ ಹರಿದು ಘಾಟಿನ ರುಚಿಯಾಗಿದೆ. ಮಲ್ಲಿಗೆ, ಜಾಜಿ, ಸಂಪಿಗೆ ನಾನಾ ಪುಷ್ಪ ಸಸಿಗಳಿಗೆ ಹರಿದು ಸುಗಂಧವಾಗಿದೆ.

**ನನೆಯೊಳಗಣ ಪರಿಮಳದಂತಿದ್ದಿತ್ತು, :** ಮಲ್ಲಿಗೆಯ ಮೊಗ್ಗು ಪರಿಮಳವನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಗೋಚರಿಸುತ್ತದೆ. ಮಲ್ಲಿಗೆಯ ಸಸಿಗೆ ಪರಿಮಳವಿಲ್ಲ, ಅದರ ಮೊಗ್ಗಿಗೂ ಪರಿಮಳವಿಲ್ಲ, ಸಸಿ ಮತ್ತು ಮೊಗ್ಗು ಸೀಳಿ ಮೂಸಿಸಿದರೂ ಪರಿಮಳ ಗೋಚರಿಸುವುದಿಲ್ಲ.

ಉದಕವನ್ನೇ ಉಂಡು ಸಸಿಯಾಯಿತು. ಉದಕ ಮೊಗ್ಗಾಗಿ ಅರಳುವುದರ ಮೂಲಕ ಪರಿಮಳವನ್ನು ಬೀರಿ ಮಲ್ಲಿಗೆಯಾಯಿತು.

ಉದಕ ತಾನೇ ಸಸಿಯಾಯಿತು, ತಾನೇ ಮೊಗ್ಗಾಯಿತು. ಉದಕ ತಾನೇ ಅರಳಿ ಪರಿಮಳ ಬೀರಿತು.

ಉದಕ ತಾನಾಗುವ ಕಾಲಕ್ಕೆ ಆಗುವುದಲ್ಲದೇ, ಸಸಿ ಮಾಡಲು ಬರುವುದಿಲ್ಲ, ಮೊಗ್ಗು ಮಾಡಲು ಬರುವುದಿಲ್ಲ, ಅದನ್ನು ಅರಳಿಸಲು ಕೂಡ ಬರುವುದಿಲ್ಲ. ಉದಕ ತುಂಬಿದ ಕಬ್ಬು ಎಂದೂ ವಿಕೃತಗೊಂಡು ಕಹಿಯಾಗುವುದಿಲ್ಲ.

ಉದಕ ತುಂಬಿದ ಮಲ್ಲಿಗೆಯ ಮೊಗ್ಗು ಅರಳಿ, ವಿಕೃತಗೊಂಡು ಎಂದೂ ದುರ್ಗಂಧ ಬೀರುವುದಿಲ್ಲ. ಅಂತೆಯೇ ಉದಕ ತುಂಬಿದ ತನುವಿನಲ್ಲಿ ಬಳಕೆ ಮಾಡಿಕೊಂಡ ಸಹಜತೆಯ ಜ್ಞಾನದ ಪರಿಮಳ ಇದೆ. ಹಾಗೆಯೇ ಇಡೀ ತನುವನ್ನು ದುರ್ಬಳಕೆ ಮಾಡಿಕೊಳ್ಳುವ ಬಯಸಿದತ್ತ ವಾಲುವ ಮನವೂ ಇದೆ .

ಮನುಷ್ಯನನ್ನು ಬಿಟ್ಟು ಜಲದಿಂದ ರಚನೆಯಾದ ಎಲ್ಲವೂ ಸಹಜತೆಯಲ್ಲಿವೆ. ಮನುಷ್ಯ ಮಾತ್ರ ಒಮ್ಮೆ ಸಹಜ , ಮತ್ತೊಮ್ಮೆ ಅಸಹಜವಾಗಿ ವರ್ತಿಸುತ್ತಾನೆ .

**ಢಕ್ಕೆಯ ಬೊಮ್ಮಣ್ಣ :** ಎಷ್ಟೊಂದು ರಹಸ್ಯವು ಉದಕದಲ್ಲಿ ಅಡಗಿದೆಯಲ್ಲ ಬಸವರಸ! ನಾವೆಲ್ಲ ಧನ್ಯರಾದೆವು ಎಂದು ಹೇಳುತ್ತಾ , ಮನುಷ್ಯ ತನಗೆ ತಾನು ಸಹಜನಾಗಲು ಬರುವುದಿಲ್ಲವೇ ಬಸವಣ್ಣ? ಮೊಗ್ಗು ಹೂವಾಗಿ ಅರಳಿದಂತೆ, ತನು ಜ್ಞಾನದಿಂದ ಅರಳಲು ಸಾಧ್ಯವಿಲ್ಲವೇ?

**ಬಸವಣ್ಣ :** ಸರಿಯಾದ ಪ್ರಶ್ನೆಯನ್ನೇ ಕೇಳಿದಿರಿ ಬೊಮ್ಮಣ್ಣ ಶರಣರೇ.

ಮೊಗ್ಗು ತನಗೇ ತಾನೇ ಅರಳುತ್ತದೆ. ಹಾಗೆಯೇ ಮನುಷ್ಯ ಹೂವಿನಂತೆ ಜ್ಞಾನದಿಂದ ಅರಳಬೇಕಾದರೆ, ಸ್ವತಃ ತಾನು ಕೃಷಿ ಮಾಡಬೇಕಾಗುತ್ತದೆ.

ತನುವಿನಲ್ಲಿ ಅರಿವು ಇದೆ. ಹಾಗೆಯೇ ಮನವೂ ಇದೆ.

ಮನ ತನುವಿನಲ್ಲಿರುವ ಅರಿವನ್ನು ಬಳಕೆ ಮಾಡಿಕೊಂಡರೆ, ಅದು ಅರಿವಿನ ಸಹಜ ತನುವಾಗಿ ಬೆಳಗುತ್ತದೆ.

ಅರಿವಿನ ಸಹಜ ತನುವಾಗಿ ಹೂವಿನಂತೆ ಅರಳಿ ಜ್ಞಾನದಿಂದ ಬೆಳಗುತ್ತದೆ.

ಮನ ತನುವಿನಲ್ಲಿರುವ ಅರಿವನ್ನು ಬಳಕೆ ಮಾಡಿಕೊಳ್ಳದೇ ನೇರವಾಗಿ ತನುವನ್ನು ಬಳಕೆ ಮಾಡಿಕೊಂಡರೆ, ವಿಕೃತ ತನುವಾಗಿ ಗೋಚರಿಸುತ್ತದೆ.

ಮನ ತನುವಿನೊಂದಿಗೆ ವಸ್ತುಗಳನ್ನು ನೋಡಿದರೆ, ಆ ವಸ್ತುಗಳ ಸತ್ಯ ವಸ್ತುಗಳಲ್ಲಿಯೇ ಉಳಿದು ತನುವಿನ ಸತ್ಯ ತನುವಿನಲ್ಲಿಯೇ ಉಳಿದು ವಸ್ತುಗಳೇ ಪ್ರಧಾನವಾಗಿ, ಅಸಹಜ ತನು ಆಗುತ್ತದೆ.

ಮನಕ್ಕೆ ವಸ್ತುಗಳ ಮೇಲಿನ ಬಯಕೆ ಅತಿಯಾಗಿ, ತನುವಿನಲ್ಲಿ ಬಯಕೆಯ ಕಿಚ್ಚು ಸ್ಫೋಟಿಸಿ ರಕ್ಕಸ ತನು ಆಗುತ್ತದೆ.

**ಬೊಮ್ಮಣ್ಣ :** ಅದು ಹೇಗೆ ಬಸವಣ್ಣ? ನಮಗೆ ತಿಳಿಯುವಂತೆ ಹೇಳಿ ತಂದೆ.

**ಬಸವಣ್ಣ :** ಪ್ರತಿ ತನುವಿನಲ್ಲಿರುವ ಪದಾರ್ಥ ಒಂದೇ ಎಂದು ಅರಿವಿಗೆ ಗೊತ್ತಿದೆ.

ಆದರೆ, ಮನ ತನುವನ್ನು ನೋಡಿ ಹೆಣ್ಣು ಗಂಡು ಎಂದು ನಿರ್ಧರಿಸಿ , ಜಾತಿ, ಮತ, ಪಂಥಗಳಿಂದ, ಕಾಮದ ಆಸೆಯಿಂದ ಶ್ರೀಮಂತಿಕೆಯಿಂದ ಬಡತನ ಮತ್ತು ಉದ್ಯೋಗದಿಂದ ತನ್ನನ್ನು ತಾನು ಸೀಳಿಕೊಂಡು ತನಗೆ ತಾನೇ ಅಸಹಜವಾಗಿದೆ.

ಕಾಯ ಈ ದೇಶದ್ದಾದರೇನು ಮತ್ತೊಂದು ದೇಶದ್ದಾದರೇನು?

ಕಾಯದಲ್ಲಿರುವ ಪದಾರ್ಥ ಒಂದೇ.

ಕಾಯದಲ್ಲಿರುವ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಇವು ಒಂದೇ ರೀತಿಯಲ್ಲಿ ಕೆಲಸ ಮಾಡುತ್ತವೆ. ಆದರೆ, ಇದನ್ನು ತಿಳಿಯುವ ಶಕ್ತಿ ಮನಕ್ಕಿಲ್ಲ. ಅರಿವಿಗೆ ಮಾತ್ರ ಇದೆ.

ತನು, ಮನ ಹೇಳಿದಂತೆ ಕೇಳಿದರೆ, ಅಸಹಜ ತನು.

ತನು ಅರಿವು ಹೇಳಿದಂತೆ ಕೇಳಿದರೆ ಸಹಜ ತನು !

ತನು ಅರಿವಿನ ಸಹಜ ತನು ಆಗಲು ಮನ ಬಿಡುವುದಿಲ್ಲ . ಮನ ತನ್ನದೇ ಆದ ತನುವಿನಲ್ಲಿ ಅಜ್ಞಾನವನ್ನು ಸೃಷ್ಟಿಮಾಡಿಕೊಂಡು ತನ್ನದೇ ಆದ ಸುಳ್ಳಿನ ರಾಜ್ಯಭಾರ ಮಾಡುತ್ತಲಿದೆ. ಮನಕ್ಕೆ ತನ್ನ ಅಜ್ಞಾನ ತನಗೆ ಬೇಸರವಾದಾಗ, ಮನ ತನಗೇ ತಾನೇ ತನ್ನದೇ ಆದ ಅರಿವಿನ ಮೊರೆ ಹೋಗುತ್ತದೆ.

ಅರಿವು ಎಂದರೆ ಸಾಮಾನ್ಯವಲ್ಲ. ಅದು ತನುವಿನಲ್ಲಿಯೇ ತನ್ಮಯವಾದ ಅರಿವು. ಆ ಅರಿವೇ ಗುರುದೇವನಾಗಿ, ಮನ ಮತ್ತು ತನುವನ್ನು ಹಿಡಿದು ತಪ್ಪು ಮಾಡದಂತೆ, ಸದಾ ಪಾಠ ಮಾಡುತ್ತಾನೆ.

ಮನ, ತನುವನ್ನು ಹಿಡಿದು ಮಾಡಿದ ತಪ್ಪನ್ನು ಮತ್ತೆ ಮತ್ತೆ ಮನ ಮತ್ತು ತನುವಿಗೆ ನೆನಪಿಸಿ, ಮತ್ತೊಮ್ಮೆ ತಪ್ಪು ಮಾಡದಂತೆ ಮನಕ್ಕೆ ಭೋದಿಸುತ್ತಾನೆ. ಹಾಗೆಯೇ ತನುವಿಗೆ ಭೋದಿಸುತ್ತಾನೆ. ಮನ ಮತ್ತು ತನು ಗುರುದೇವನಿಗೆ ಶರಣು ಹೋಗಿ ಶರಣಾಗತನಾದಾಗ, ಗುರುದೇವ ಮನ ಮತ್ತು ತನುವನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ಈ 'ಕಾಯಕ 'ದಲ್ಲಿ ಕಾಯ ಮತ್ತು ಮನ ಸದಾ ನಿರತವಾದಾಗ, ಕಾಯ ಮತ್ತು ಮನ ಮಾಡಿದ ಕೃಷಿ ಕಾಯಕ್ಕೆ ಸಿದ್ಧಿಯಾಗಿ ಅದು ಜ್ಞಾನದಿಂದ ಅರಳುತ್ತದೆ.

**ಚನ್ನಬಸವಣ್ಣ**: ಧನ್ಯವಾದಗಳು ಬಸವರಸ,

ಸಂಜೆಯ ಸಭೆಯನ್ನು ಇಲ್ಲಿಗೆ ಮುಕ್ತಾಯ ಮಾಡೋಣ ಎಂದು ಸಕಲ ಶರಣರಿಗೂ ಬಸವರಸರಿಗೂ ಶರಣು ಶರಣಾರ್ಥಿ ಎನ್ನುತ್ತಾ

ಮಂಗಲ ಹಾಡಿದರು .

## ಕನ್ಯೆ ಮನ ಪ್ರೌಢತ್ವಕ್ಕೆ ಬರುವುದಾದರೂ ಎಂದು

ಸೂರ್ಯೋದಯ ಇನ್ನೂ ಆಗಿಲ್ಲ. ಶರಣರು ಮಹಾ ಮನೆಯತ್ತಾ ನಡೆಯುತ್ತಿದ್ದಾರೆ. ಬಸವಣ್ಣ ಚನ್ನಬಸವಣ್ಣನವರಿಗೆ ಶರಣು ಹೇಳುತ್ತಾ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುತ್ತಾರೆ.

**ಬಸವಣ್ಣ:** ಸಕಲ ಶರಣರಿಗೂ ಶರಣು ಶರಣಾರ್ಥಿ.

ನಿನ್ನೆಯ ಸಭೆಯಲ್ಲಿ ಉದಕದ ಬಗ್ಗೆ ವಿವರವಾಗಿ ಹೇಳಲಾಯಿತು. ಇಂದು ಕೂಡ ಅದನ್ನೇ ಮುಂದುವರಿಸೋಣ.

ಜೀವ ಜಲದಿಂದಲೇ ಜನ್ಮ ತಳೆದ ತನು, ಆ ಜೀವ ಜಲದಿಂದಲೇ ಮನ ಕೂಡ ಜನ್ಮ ತಳೆದು ತನುವನ್ನು ಆವರಿಸಿದೆ.

ಅರಿವು ಎನ್ನುವ ಗುರುದೇವ ತನು ಮತ್ತು ಮನಕ್ಕೆ ಜನ್ಮ ನೀಡಿ,

ಜಲಭರಿತವಾದ ತನುವಿನಲ್ಲಿಯೇ ತನ್ಮಯವಾಗಿದ್ದಾನೆ.

ತನು ಒಂದೇ ಆಗಿ ಕಂಡರೂ ತನುವಿನಲ್ಲಿ ಅರಿವು ಮತ್ತು ಮನ ಎನ್ನುವ ಎರಡು ಪಾತ್ರಗಳಿವೆ. ಇವೆರಡೂ ಯಾವ ತನುವಿಗೂ ಕಾಣುವುದಿಲ್ಲ . ತನುವಿನ ಅನುಭವಕ್ಕೆ ಮಾತ್ರ ಬರುತ್ತದೆ .

ಅರಿವು ತನುವಿನ ಸಹಜ ಗುಣ. ಗುಣ ಅನ್ನುವುದಕ್ಕಿಂತ ಅದು ನಿರ್ಗುಣಿ ಎಂದು ಹೇಳಬಹುದು. ಅರಿವಿನಲ್ಲಿ ಯಾವ ಗುಣಗಳು ಇಲ್ಲ ಅದು ಗುಣಾತೀತ. ಹೀಗಾಗಿ ಅರಿವನ್ನು ಪುರಾತನರು ತ್ರಿಗುಣಾತೀತ ಎಂದು ಕರೆದಿದ್ದಾರೆ.

ಅರಿವು ಕಬ್ಬಿನಂತೆ ಸದಾ ಸಿಹಿ, ಹೂವಿನಂತೆ ಸದಾ ಪರಿಮಳ. ಮನವಾದರೂ ಬೇರೆಯಲ್ಲ ಅರಿವು ಎನ್ನುವ ಬೆಳಕಿನ ನೆರಳು ; ಅದು ತನುವನ್ನು ಆವರಿಸಿಕೊಂಡಿದೆ.

ಮನ ತನುವಿಗೆ ಅರಿವಿನ ಪಾತ್ರ ಹಾಕಿ ತನುವನ್ನು ಸದಾ ದುರ್ಬಳಕೆ ಮಾಡಿಕೊಳ್ಳುತ್ತದೆ . ಹೀಗಾಗಿ ನಾನು ಮನಕ್ಕೆ 'ಕನ್ಯೆ 'ಎಂದು ನಾಮಕರಣ ಮಾಡಿದ್ದೇನೆ. ತನು, ಅರಿವು ಮತ್ತು ಮನದ ತ್ರಿಕೂಟ ಸಂಗಮ. ಅರಿವು ತನುವಿನ ಕಣ ಕಣದಲ್ಲಿ ಸಂಗಮವಾಗಿದೆ . ಹೀಗಾಗಿ ನಾನು ಅರಿವು ಎಂಬ ಗುರುದೇವನನ್ನು 'ಕೂಡಲಸಂಗಮದೇವ 'ಎಂದು ಕರೆದಿದ್ದೇನೆ.

**ಬೊಂತಾದೇವಿ :** ಮನವನ್ನು 'ಕನ್ಯೆ' ಎಂದು ಏಕೆ ಕರೆದಿರುವಿರಿ ಬಸವರಸ?

**ಬಸವಣ್ಣ :** ಸುಂದರವಾದ ಪ್ರಶ್ನೆಯನ್ನೇ ಕೇಳಿರುವಿರಿ ತಾಯಿ.

ಕನ್ಯೆ ಎಳೆತನದಲ್ಲಿ ಏನೆಲ್ಲಾ ಆಟಗಳನ್ನು ಮಕ್ಕಳೊಂದಿಗೆ ಆಡುತ್ತಾಳೆ. ಕನ್ಯೆ ಪ್ರೌಢತ್ವಕ್ಕೆ ಬಂದ ಮೇಲೆ ತಂದೆ ತಾಯಿ ಮತ್ತು ಪತಿಯ ಆಶ್ರಯದಲ್ಲಿ ಬೆಳೆಯುತ್ತಾಳೆ . ಮನ ಪ್ರೌಢತ್ವಕ್ಕೆ ಬರುವುದು ಬಲು ಜಟಿಲ. ಅದು ಪ್ರೌಢತ್ವಕ್ಕೆ ಬರದ ವಿನಃ ಅರಿವು ಎಂಬ

ಗುರುದೇವ ಆ ಮನವನ್ನು ಸತಿಯನ್ನಾಗಿ ಸ್ವೀಕರಿಸುವುದಿಲ್ಲ .

ಮನ ಪ್ರೌಢತ್ವಕ್ಕೆ ಬಂದಾಗ, ತನಗೆ ತಾನೇ ಅರಿವಿನಿಂದ ಅರಳಿ, ತನುವಿನೊಂದಿಗೆ, ಸಂಗ ಮಾಡುವುದನ್ನು ಬಿಟ್ಟು , ತನುವಿನಲ್ಲಿಯೇ ತನ್ಮಯವಾದ ಅರವಿನ ಲಿಂಗಯ್ಯನನ್ನೇ ಪತಿಯನ್ನಾಗಿಸಿಕೊಳ್ಳುತ್ತಾಳೆ.

ಆ ಲಿಂಗಯ್ಯನಿಗೆ ಶರಣು ಹೋಗಿ ಶರಣಾಗತಳಾಗಿ ತಾನು ಸತಿಯಾಗುತ್ತಾಳೆ.

''ಶರಣಸತಿ ಲಿಂಗಪತಿ''ಯಾಗಿ, ಸತಿಪತಿಗಳಿಬ್ಬರೂ ಅಂಗದಲ್ಲಿಯೇ ಅರಿವಿನ ಸಂಸಾರ ಹೂಡುತ್ತಾರೆ.

ಹರಿಯುವ ನದಿ ಸಾಗರವನ್ನು ಹುಡುಕಿಕೊಂಡು ತೆರಳುತ್ತಾ ತೆರಳುತ್ತಾ ಸಾಗರದಲ್ಲಿ ಸಂಗಮವಾಗಿ ನದಿ ಎಂಬ ಹೆಸರು ಕಳೆದುಕೊಂಡು ಸಾಗರವಾದಂತೆ !

ಹಾಗೆಯೇ ಹರಿದಾಡುವ ಮನ, ಅತ್ತ ಇತ್ತ ಹರಿದಾಡದೇ ತನುವಿನಲ್ಲಿಯೇ ತನ್ಮಯವಾದ ಅರಿವಿನತ್ತ ಹರಿದು ಆ ಅರಿವಿನಲ್ಲಿಯೇ ಸಂಗಮವಾಗಿ ಆ ಅರಿವೇ ತಾನಾ ದಂತೆ.

**ಬೊಂತಾದೇವಿ :** ಧನ್ಯನಾದೆ ಬಸವರಸ ! ನಾನೊಬ್ಬಳೇ ಅಲ್ಲ, ಇಡೀ ಶರಣ ಕುಲವೇ ಧನ್ಯವಾಯಿತು. ತನುವಿನಲ್ಲಿಯೇ ತನ್ಮಯವಾದ ಗುರುದೇವನ ದರ್ಶನವನ್ನು ತನುವನ್ನು ಆವರಿಸಿದ ಮನಕ್ಕೆ ಮತ್ತು ತನುವಿಗೂ ಬಹಳ ಸರಳವಾಗಿ ಮಾಡಿಸಿದಿರಿ ಎನ್ನೊಡೆಯ!

ಆ ಗುರುದೇವ ಬೇರಲ್ಲ, ನಮ್ಮೆಲ್ಲರಿಗೂ ಕಂಡುಬರುವ ತಾವು ಕೂಡ ಬೇರಲ್ಲ . ಸಾಕ್ಷತ್ ಗುರುದೇವನೇ ಮಹಾದೇವನಾಗಿ, ಸದಾಶಿವನಾಗಿ, ಪರಬ್ರಹ್ಮನಾಗಿ ನಮ್ಮೆಲ್ಲರಿಗೂ ಬ್ರಹ್ಮರಸ ಪಾನ ಮಾಡಿಸಿದಿರಿ ಬಸವರಸ ನಿಮಗೆ ನಾವೆಲ್ಲರೂ ಚಿರಋಣಿ.

**ಬಸವಣ್ಣ:** ಅಷ್ಟು ದೊಡ್ಡ ಮಾತನ್ನು ಆಡಬೇಡಿ ತಾಯಿ . ನಾನು ನಿಮಗೆ ಬ್ರಹ್ಮರಸ ಪಾನ ಮಾಡಿಸಲಿಲ್ಲ, ನಿಮಗೆ ತಿಳಿಯದಂತೆ, ನಿಮಗೆ ನೀವೇ ಬ್ರಹ್ಮರಸ ಪಾನ ಮಾಡಿರುವಿರಿ. ಈ ಸತ್ಸಂಗದಲ್ಲಿ ತಮ್ಮೆಲ್ಲರನ್ನೂ ಪಡೆದ ನಾನು ಧನ್ಯ.

ಸಕಲ ಭ್ರಮೆ ಕಳೆದುಕೊಂಡು ಬ್ರಹ್ಮರಸ ಪಾನ ಮಾಡುವುದು ಸಣ್ಣ ಮಾತಲ್ಲ, ದೇವಾನುದೇವತೆಗಳಿಗೂ ಸಾಧ್ಯವಾಗದ್ದನ್ನು ತಾವೆಲ್ಲರೂ ಸಾಧಿಸಿರುವಿರಿ.

ಸತ್ಸಂಗಕ್ಕೆ ಆಸಕ್ತಿಯಿಂದ ಬಂದು ಕುಳಿತುಕೊಂಡು ಸತ್ಯದ ಜೊತೆಗೆ ಸಂಗ ಮಾಡುವ ಆಸಕ್ತಿಯನ್ನು ಸದಾ ತೋರಿಸುತ್ತಿರುವಿರಿ.

ಮೇಲಿಂದ ಮೇಲೆ ಪ್ರಶ್ನೆಗಳನ್ನು ಕೇಳುತ್ತಾ, ಚನ್ನಬಸವಣ್ಣನಿಂದ ಮತ್ತು ನನ್ನಿಂದ ಉತ್ತರ ಪಡೆದು ಆಸಕ್ತಿ ತೋರುವ ತಮ್ಮೆಲ್ಲರಿಗೂ ಆ ಗುರುದೇವ ದರುಶನ ನೀಡಿ ಸನ್ಮಂಗಲ ಉಂಟು ಮಾಡಲಿ ಎಂದು ಆಶಿಸಿ ಇಂದಿನ ಸಭೆಗೆ ಮಂಗಲ ಹಾಡುವೆ.

# ಮನುಷ್ಯ ಹುಡುಕುವ ದೇವರು ದೇವರಲ್ಲ ದೇಹದಲ್ಲಿದ್ದ ಅರಿವಿನ ದೇವರೇ ದೇವರು

ಸಂಜೆ ಸಮಯ ಸತ್ಸಂಗಿಗಳು ಮಹಾ ಮನೆಯಲ್ಲಿ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡಿದ್ದಾರೆ. ಬಸವಣ್ಣ ಚನ್ನಬಸವಣ್ಣ ವೇದಿಕೆಗೆ ಬಂದು ಸಕಲ ಶರಣರಿಗೆ ಶರಣು ಶರಣಾರ್ಥಿ ಎಂದು ಹೇಳುತ್ತಾ ಕುಳಿತುಕೊಂಡರು.

**ರಾಯಮ್ಮ:** ಎದ್ದು ನಿಂತು ಬಸವಣ್ಣ ಚನ್ನಬಸವಣ್ಣನವರಿಗೆ ಹಾಗೂ ಸಕಲ ಶರಣರಿಗೆ ಶರಣು ಶರಣಾರ್ಥಿ ಎನ್ನುತ್ತಾ ಬಸವರಸರೇ

''ಅಂದಿಂಗೆ ಎಳೆಯ ನೀನು ಹಳೆಯ ನಾನು'' ಎನ್ನುವ ಸೂತ್ರವೊಂದು ತಮ್ಮ ವಚನದಲ್ಲಿ ಬರುತ್ತದೆ. ಈ ಮಾತು ದೇವರಿಗೆ ಹೇಳಿರುವಿರೋ ಹೇಗೆ?

**ಬಸವಣ್ಣ:** ಇಂದಿನ ಸಭೆಯಲ್ಲಿ ಅಮುಗೆ ರಾಯಮ್ಮ ಸುಂದರವಾದ ಪ್ರಶ್ನೆಯನ್ನೇ ಕೇಳಿದ್ದಾಳೆ. ನಿಮಗೂ ಸಕಲ ಶರಣರಿಗೂ ಶರಣು ಶರಣಾರ್ಥಿ.

ದೇವರು ಅನ್ನುವವನು ಈ ಜಗತ್ತಿನಲ್ಲಿ ಯಾರೂ ಇಲ್ಲ. ಹೀಗೆಂದ ಮಾತ್ರಕ್ಕೆ ದೇವರು ಇಲ್ಲವೇ ಇಲ್ಲ ಎಂದರ್ಥವಲ್ಲ, ದೇವರಿಲ್ಲದೇ ಮನುಷ್ಯನೇ ಇಲ್ಲ, ಪಶು, ಪಕ್ಷಿ, ಪ್ರಾಣಿ, ಉರಗ, ಕೀಟ ಜಲರಾಶಿಗಳೂ ಇಲ್ಲ, ಸಸ್ಯಕಾಶಿಯೂ ಇಲ್ಲ. ಗಿಡ, ಮರ, ಬಳ್ಳಿ ಫಲ ಪುಷ್ಪಗಳು ಇಲ್ಲ. ಆಯಾ ಜೀವ ಕುಲದಲ್ಲಿ ಆಯಾ ರೀತಿಯಲ್ಲಿ ದೇವರು ಸಂಗಮವಾಗಿದ್ದಾನೆ. ಮನುಷ್ಯನ ಹೊರತಾಗಿ ದೇವರನ್ನು ಯಾವ ಪ್ರಾಣಿಗಳು ತಿಳಿಯಲು ಸಾಧ್ಯವಿಲ್ಲ.

ಆದರೂ ಮನುಷ್ಯ ಹೆದರಿಕೆಯಿಂದ ದೇವರನ್ನು ವಿಪರೀತವಾಗಿ ತಿಳಿದಿದ್ದಾನೆ.

ಮನುಷ್ಯ ತಿಳಿದ ದೇವರು ದೇವಾಲಯಗಳಲ್ಲಿ ಇದ್ದಾನೆ. ಕಲ್ಲು , ಬೆಟ್ಟ , ಗುಡ್ಡ, ನದಿ, ಹಳ್ಳ, ಕೊಳ್ಳ ಗಿಡ ಮರಗಳಲ್ಲಿ ಮನುಷ್ಯ ದೇವರನ್ನು ಹುಡುಕುತ್ತಿದ್ದಾನೆ.

ಮನುಷ್ಯ ಹುಡುಕುವ ದೇವರು, ಮನುಷ್ಯಆರಾಧಿಸುವ ದೇವರು ದೇವರಲ್ಲ.

ದೇವರು ಸಕಲ ಮನುಷ್ಯರಲ್ಲಿ ತನ್ಮಯವಾಗಿದ್ದಾನೆ. ಸಕಲ ಮನುಕುಲವನ್ನು ಕೈ ಹಿಡಿದು ನಡೆಸುತ್ತಿದ್ದಾನೆ. ಹೀಗೆ ತನ್ನೊಂದಿಗೆ ಇದ್ದ ದೇವರ ದರುಶನ ದೇಹಕ್ಕೆ ಆಗುತ್ತಿಲ್ಲ.

ಹೀಗಾಗಿ ದೇಹದಿಂದಲೇ ನಿರ್ಮಾಣವಾದ ದೇವರನ್ನು ದೇಹ ಪೂಜಿಸುತ್ತಾ, ಆರಾಧಿಸುತ್ತಾ, ಕಾಲ ಕಳೆಯುತ್ತಲಿದೆ. ದೇಹದಲ್ಲಿಯೇ ಇರುವ ದೇವರನ್ನು ದೇಹಗಳಿಗೆ ಪರಿಚಯಿಸಿದ ಜ್ಞಾನಿಗಳನ್ನೇ ದೇವರನ್ನಾಗಿಸಿ, ದೇಹ ಆರಾಧಿಸುತ್ತಲಿದೆ. ಇದು ದೇಹದ ದುರ್ದೈವ .

ದೇಹದಲ್ಲಿಯೇ ಇದ್ದ ದೇವರನ್ನು ಮರೆತ ದೇಹದ ದುರ್ದೈವ .

**ರಾಯಮ್ಮ :** ಸಾಕಷ್ಟು ಪುರಾಣಗಳಲ್ಲಿ ದೇವರನ್ನು ಚಿತ್ರಿಸಲಾಗಿದೆಯಲ್ಲ ಬಸವರಸ. ಹಾಗೆಯೇ ದೇವರ ಕಥೆಗಳನ್ನು ಪುರಾಣಗಳಲ್ಲಿ ಹೇಳುತ್ತಾರಲ್ಲ ಇವು ಸುಳ್ಳೇ ?

**ಬಸವಣ್ಣ :** ಇದು ಪುಣ್ಯ ಭೂಮಿ. ಮನುಷ್ಯ ತನ್ನೊಳಗೆ ಇದ್ದ ಸತ್ಯವನ್ನು ತಾನು ಬೇಗ ತಿಳಿಯಲೆಂದು ಶಿವ ಪುರಾಣ, ವಿಷ್ಣು ಪುರಾಣ, ಬ್ರಹ್ಮ ಪುರಾಣಗಳನ್ನು ಬರೆಯಲಾಗಿದೆ. ಆದರೆ, ಮನುಷ್ಯ ಅದೇ ದಿಟವೆಂದು ತಿಳಿದು, ಆ ಕಥೆಗಳನ್ನೇ ಸಂಗ್ರಹ ಮಾಡಿಕೊಂಡು ಆ ಕಥೆಗಳನ್ನೇ ಹೇಳಿ ಕಾಲ ಕಳೆಯಲು ಶುರು ಮಾಡಿದನು.

**ರಾಯಮ್ಮ:** ಬ್ರಹ್ಮ , ವಿಷ್ಣು, ಶಿವ ಎನ್ನುವುದು ಸುಳ್ಳೇ ಬಸವಣ್ಣ.

**ಬಸವಣ್ಣ:** ಬ್ರಹ್ಮ ಎನ್ನುವವನು ಹೊರಗಿಲ್ಲ, ಮನಸ್ಸು ತನ್ನ ಭ್ರಮೆ ಕಳೆದುಕೊಂಡರೆ ಸಾಕು ತಾನೇ ಬ್ರಹ್ಮನಾಗುತ್ತದೆ. ವಿಷ್ಣು ಎನ್ನುವುದು ಕೂಡಾ ಸುಳ್ಳಲ್ಲ. ಕಾಯ ತಾನಾರೆಂದು ತನ್ನನ್ನು ಹುಡುಕಲು ಹೋದರೆ, ಕಾಯವೇ ವಿಷ್ಣುವಾಗುತ್ತದೆ.

ಮಹೇಶ್ವರ (ಶಿವ) ಎನ್ನುವುದು ಕೂಡಾ ಸುಳ್ಳಲ್ಲ . ಕಾಯದಲ್ಲಿಯೇ ಸಂಗಮವಾದ ಅರಿವನ್ನು ತಿಳಿಯಲು ಮನ ಮತ್ತು ತನು ಆಸೆಪಟ್ಟರೆ, ಆ ಅರಿವೇ ಗುರುವಾಗುತ್ತಾನೆ. ಆ ಗುರುದೇವನೇ ಮಹಾದೇವನಾಗುತ್ತಾನೆ. ಆ ಮಹಾದೇವನೇ ಸದಾಶಿವನಾಗುತ್ತಾನೆ. ಸಾಕ್ಷತ್ ಪರಬ್ರಹ್ಮನೂ ಆಗುತ್ತಾನೆ .

**ಸತ್ಯಕ್ಕ :** ಮನುಷ್ಯನಿಗೆ ತನ್ನನ್ನು ತಾನು ತಿಳಿಯಲು ತನಗೆ ಏಕೆ ಸಾಧ್ಯವಾಗುತ್ತಿಲ್ಲ ಬಸವರಸ.

**ಬಸವಣ್ಣ :** ಕಾಯವನ್ನು ಮನಸ್ಸು ಆವರಿಸಿದೆ. ಕಾಯದಲ್ಲಿ ಅರಿವು ಸಂಗಮವಾಗಿದೆ. ಅರಿವು ಗುರುವಾಗಿ, ತನ್ನನ್ನು ತಿಳಿಯಲು ಕಾಯವನ್ನು ಮತ್ತು ಮನವನ್ನು ತನ್ನತ್ತ ಸೆಳೆದರೆ, ಮನ ತನಗೆ ಬೋಧೆಮಾಡುವ ಅರಿವನ್ನು ದೂರ ತಳ್ಳಿ ಕಾಯವನ್ನು ತನ್ನತ್ತ ಸೆಳೆಯುತ್ತಲಿದೆ.

ಏಕೆಂದರೆ, ಮನ ಭ್ರಮೆಯಿಂದ ಭರಿತವಾಗಿದೆ. ಸ್ವತಃ ತಾನು ಬ್ರಹ್ಮನೆಂಬುದನ್ನು ಮರೆತು ಹೋಗಿದೆ. ಭ್ರಮೆಯಿಂದಾಗಿ ಕಾಯದೊಂದಿಗೆ ಮನ ಕ್ಷಣಿಕ ಸುಖಗಳನ್ನು ಅನುಭವಿಸುತ್ತಲಿದೆ. ಕಲ್ಲು , ಮಣ್ಣು, ಲೋಹ ಮತ್ತು ತನ್ನಂತೆ ಇರುವ ಕಾಯಗಳು ಮನಕ್ಕೆ ಸುಖದ ವಸ್ತುಗಳಾಗಿವೆ. ಈ ಭ್ರಮಾಸುಖವನ್ನು ನಷ್ಟಮಾಡಿಕೊಳ್ಳಲು ಮನಕ್ಕೆ ಇಷ್ಟವಾಗುತ್ತಿಲ್ಲ. ಹೀಗಾಗಿ ಮನ ತನ್ನದೇ ಆದ ಭ್ರಮಾಲೋಕವನ್ನು ಸೃಷ್ಟಿಮಾಡಿದೆ.

**ಸತ್ಯಕ್ಕ :** ಅದು ಹೇಗೆ ಬಸವಣ್ಣ ವಿವರಿಸಿ ಹೇಳಿ.

**ಬಸವಣ್ಣ :** ಕಾಯ ರಾಜನದ್ದಾದರೇನು, ಸೈನಿಕನದ್ದಾದರೇನು ಶ್ರೀಮಂತನದ್ದಾದರೇನು, ಬಡವನದಾದರೇನು, ಹೆಣ್ಣಾದರೇನು, ಗಂಡಾದರೇನು, ಕಾಯ ಯಾವ ಭಾಷೆ ಮಾತನಾಡಿದರೇನು ? ಯಾವ ದೇಶದ್ದಾದರೇನು, ಕಾಯ ಕಾಯವೇ ಆಗಿದೆ.

ಭ್ರಮೆಯಿಂದಾಗಿ ಕಾಯ ರಾಜನಾಗಿ ಆಡಳಿತ ಮಾಡುತ್ತದೆ. ಆ ಆಡಳಿತಕ್ಕೆ ಗುರಿಯಾದದ್ದು ಕೂಡ ಕಾಯವೇ ಆಗಿದೆ. ಕಾಯ ಕಾಯಗಳೊಂದಿಗೆ ಯುದ್ಧ ಮಾಡಿ ತನ್ನ ಪ್ರಭುತ್ವವನ್ನು ಬೆಳೆಸುವುದು ಮತ್ತೊಂದು ಪ್ರಭುತ್ವವನ್ನು ಅಳಿಸಿ ಹಾಕುವುದು ತಪ್ಪು ಎಂದು ಕಾಯಗಳಿಗೆ ಅನ್ನಿಸುವುದೇ ಇಲ್ಲ.

ಕಾಯ ರಾಜನಾದದ್ದು , ಗುರುವಾದದ್ದು, ಶಿಷ್ಯನಾದದ್ದು, ಮಂತ್ರಿ, ಪ್ರಧಾನಿ, ಶಾಸಕ, ಅಧಿಕಾರಿಯಾಗಿ, ಕಾಯದ ಮೇಲೆ ಕಾಯದ ಒಡೆತನವನ್ನು ಹೇರುವುದು ಕಾಯದ ಕುಚೋದ್ಯ

ತನವೆಂದು ಕಾಯಗಳಿಗೆ ಅನ್ನಿಸುತ್ತಲೇ ಇಲ್ಲ.

**ರಾಯಮ್ಮ:** ಇದು ತಪ್ಪೇ ಬಸವಣ್ಣ.

**ಬಸವಣ್ಣ:** ಸ್ವಾನುಭಾವದಿಂದ ಆಲೋಚನೆ ಮಾಡಿ, ತಪ್ಪಲ್ಲದಿದ್ದರೆ ಮತ್ತೇನು? ಕಾಯ ಕಾಯವನ್ನೇ ಉತ್ತಮ ಕುಲವೆಂದು, ಹೀನ ಕುಲವೆಂದು ತನ್ನನ್ನು ತಾನು ಸೀಳಿಕೊಳ್ಳುವುದು ತಪ್ಪಲ್ಲವೇ? ಈ ಎಲ್ಲಾ ಆಲೋಚನೆಗಳು ಪ್ರತಿ ಕಾಯದಲ್ಲಿ ಇದ್ದರೂ ಕೂಡ , ಹೇಳಿದ ಕಾಯವನ್ನು ಕೇಳಿದ ಕಾಯ ಗುರುವೆಂದು ಸ್ವೀಕರಿಸುತ್ತದೆ. ತಿಳಿ ಹೇಳಿದ ಕಾಯವನ್ನು ಗುರುವೆಂದು ಆರಾಧಿಸುತ್ತದೆ. ಆ ಕಾಯ ಸತ್ತಾಗ, ಸಮಾಧಿ ಕಟ್ಟಿ ಪಲ್ಲಕ್ಕಿ ಉತ್ಸವಗಳನ್ನು ಮಾಡಿ ಸಂಭ್ರಮಿಸುತ್ತದೆ. ಈ ಅಜ್ಞಾನ ಕಾಯದಿಂದ ತೊಲಗುವುದಾದರೂ ಹೇಗೆ?

ತಿಳಿಹೇಳಿದ ಕಾಯ ಬೇರಲ್ಲ, ಆ ತಿಳುವಳಿಕೆಯನ್ನು ಕೇಳಿದ ಕಾಯವೂ ಬೇರಲ್ಲ. ಕೇಳಿದ ತಕ್ಷಣ ತಿಳಿಯುವ ಶಕ್ತಿ ಪ್ರತಿ ಕಾಯದಲ್ಲಿಯೂ ಇದೆ. ಅದನ್ನು ತನಗೆ ತಾನೇ, ಆಚರಣೆಗೆ ತರುವುದನ್ನು ಬಿಟ್ಟು ತಿಳಿಹೇಳುವ ಕಾಯವನ್ನೇ ಗುರು ಕಾಯವೆಂದು ನಂಬಿ, ಕಾಯ ಕಾಯಕ್ಕೆ ಸಂಪೂರ್ಣ ಶರಣು ಹೋಗುವುದು ಮನ ತನುವಿಗೆ ಮಾಡುವ ಮೋಸ, ವಂಚನೆ. ಈ ವಂಚನೆಯನ್ನು ತನು ಪ್ರತಿಭಟನೆ ಮಾಡುವ ಮೂಲಕ ಮನವನ್ನು ತಡೆಯದಿದ್ದರೆ,ಕಾಯ ತನಗೆ ತಾನೇ ಎಂದಿಗೂ ಸದೃಢವಾಗಲು ಸಾಧ್ಯವಿಲ್ಲ.

**ಸತ್ಯಕ್ಕ:** ಬಸವರಸ ತಮ್ಮ ಮಾತು ಕೇಳಿ ರೋಮಾಂಚನವಾಗುತ್ತದೆ. ನಮ್ಮನ್ನು ಯಾರೂ ತುಳಿಯುತ್ತಿಲ್ಲ, ತನುವನ್ನು ಆವರಿಸಿದ ರಕ್ಕಸ ಮನಕ್ಕೆ ತನುವೇ ತುತ್ತಾಗಿದೆ ಎಂಬುದು ತಮ್ಮ ಮಾತಿನ ತಿರುಳಲ್ಲವೇ ಬಸವರಸ ?

**ಬಸವಣ್ಣ** : ಹೌದು ತಾಯಿ . ತಾವು ಸರಿಯಾಗಿಯೇ ತಿಳಿದುಕೊಂಡಿರಿವಿರಿ .

ಈಗ ನಮ್ಮನ್ನು ನಾವು ತಿಳಿಯುವ ಕಾಲ ಬಂದಿದೆ. ಮನ ಕಾಯಕ್ಕೆ ಮಾಡುವ ಮೋಸವೆಂದು ವಂಚನೆಯೆಂದು ತಾವು ತಿಳಿಯಬೇಕಿಲ್ಲ .

ಮನದ ಉಪಾಯವೆಂದು ಏಕೆ ತಿಳಿಯಬಾರದು ?

ಮನ , ಕಾಯವನ್ನು ಹಿಂಸೆ ಮಾಡುವ ಮೂಲಕ ತನ್ನ ಗೆಳೆತನ ಬಿಡಲು ಕಾಯಕ್ಕೆ ಸೂಚನೆ ನೀಡಿದಂತೆ .

ಕಾಯಕ್ಕೆ ಮೋಸ ಮಾಡುವ ಮನವೆಂಬ ಗೆಳೆಯನನ್ನು ಬಿಟ್ಟು , ಕಾಯ ಸದಾ ಅರಿವಿನಿ ಪಾಠ ಮಾಡುವ ಗುರುದೇವನ ಗೆಳೆತನ ಮಾಡುವುದಕ್ಕೋಸ್ಕರ ; ಮನ ಕಾಯಕ್ಕೆ ತೊಂದರೆ ಕೊಡುತ್ತಿರಬಹುದು ಎಂದು ಏಕೆ ತಿಳಿಯಬಾರದು? ಹೀಗಾಗಿ ಕಾಯಕ್ಕೆ ತೊಂದರೆ ಕೊಡುವ ಮನವನ್ನೇ ಸತಿಯನ್ನಾಗಿಸಿ, ಅರಿವನ್ನೇ ಪತಿಯನ್ನಾಗಿಸಿ, ಸತಿ ಪತಿಗಳಿಬ್ಬರೂ ಕಾಯದಲ್ಲಿ ಅರಿವಿನ ಮೂಲಕ ವಾಸ ಮಾಡುವ ಪದ್ಧತಿಯನ್ನು ನಾವು ಆಚರಣೆಗೆ ತಂದುಕೊಳ್ಳಬಹುದಲ್ಲ!

**ಸತ್ಯಕ್ಕ** : ಬಹಳ ಸುಂದರವಾದ ಸೂತ್ರವನ್ನೇ ಹೇಳಿದಿರಿ ಬಸವರಸ. ಸತಿಪತಿಗಳು ಒಂದಾದ ಭಕ್ತಿ ಹಿತವಾಗಿರುವುದು ಎನ್ನುವ ಮಾತು ತಮ್ಮ ಮಾತಿಗೆ ಸರಿ ಹೋಗುತ್ತದಲ್ಲ ಬಸವರಸ.

**ಬಸವಣ್ಣ** : ಹೌದು ತಾಯಿ. ಕಾಯ ಹೆಣ್ಣು ಅಲ್ಲ ಗಂಡೂ ಅಲ್ಲ.

ಕಾಯವನ್ನು ಆವರಿಸಿದ ಮನವೇ ಹೆಣ್ಣು . ಆ ಹೆಣ್ಣನ್ನೇ ಸತಿಯನ್ನಾಗಿಸಿ, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನೇ ಪತಿಯನ್ನಾಗಿಸಿ, ಇವರಿಬ್ಬರೂ ಕಾಯದಲ್ಲಿ ಒಂದಾದರೆ , ಆ ಕಾಯಕ್ಕೆ ಇಡೀ ಜಗತ್ತು ಸುಂದರವಾಗಿ ಕಾಣುತ್ತದೆ. ಇವರಿಬ್ಬರನ್ನು ಹೊತ್ತುಕೊಂಡ ಕಾಯ ಕೈಲಾಸವೇ ಆಗುತ್ತದೆ.

ಈ ಕೈಲಾಸದಲ್ಲಿ ವಾಸ ಮಾಡುವ ಸತಿ ಪತಿಗಳಿಬ್ಬರೂ, ಶಿವ ಪಾರ್ವತಿಯರಾಗಿತ್ತಾರೆ. ಈ ಸತ್ಯ ತಿಳಿಯಲೆಂದು ಪೂರ್ವಜರು, ಪುರಾಣಗಳ ಮೂಲಕ ಕಥೆ ಹೇಳಿದರು. ಇದು ತನಗೆ ಸಂಬಂಧಪಟ್ಟ ಕಥೆ ಎಂದು ಕಾಯ ಊಹಿಸಲೇ ಇಲ್ಲ . ಕಾಯ ಕಾಯವನ್ನೇ ಸೀಳಿಕೊಂಡು ಶಿವ ಮೇಲೊ, ಬ್ರಹ್ಮ ಮೇಲೊ, ಎಂದು ಕಾಯ ಕಾಯಗಳೊಂದಿಗೆ ಯುದ್ದ ಮಾಡಲು ಶುರುವಾಯಿತು. ಈ ಎಲ್ಲಾ ಕಥೆಗಳನ್ನು ಬರೆದವನು ಮನುಷ್ಯನೇ ಆಗಿದ್ದಾನೆ. ಹೀಗಾಗಿ ಮನುಷ್ಯ ದೊಡ್ಡವನೇ ಹೊರತು ಕಥೆಗಳಲ್ಲಿ ಬರೆಯಲ್ಪಟ್ಟ ದೇವರು ದೊಡ್ಡವರಲ್ಲ.

ಮನುಷ್ಯ ಹಳೆಯನಾದರೆ, ದೇವರು ಎಳೆಯನಾಗಿದ್ದಾನೆ. ಏಕೆಂದರೆ, ಅರಿವನ್ನು ಗುರುದೇವನನ್ನಾಗಿಸಿದವನು ಅರಿವನ್ನು ಮಹಾದೇವನ್ನಾಗಿಸಿದವನೂ ಅರಿವನ್ನು ಸದಾಶಿವನನ್ನಾಗಿಸಿದವನೂ ಅರಿವನ್ನು ಬ್ರಹ್ಮನನ್ನಾಗಿಸಿದವನೂ ಹೀಗೆಂದು ಹೆಸರು ಕೊಟ್ಟವನು ಮನುಷ್ಯನೇ ಆಗಿದ್ದಾನೆ.

ಈ ಎಲ್ಲವನ್ನು ತಿಳಿಯುವವನು ಕೂಡ ಮನವೆಂಬ ಮನುಷ್ಯನೇ ಆಗಿದ್ದಾನೆ. ಹೀಗಾಗಿ ಮನುಷ್ಯ ಹಳೆಯ. ದೇವರು ಎಳೆಯ. ಇದು ಮನುಕುಲ ತಿಳಿಯಲೆಂದೇ

''ಕಾಳಿ ಕಂಕಾಳದಿಂದ ಮುನ್ನ ,
ತ್ರಿಪುರ ಸಂಹಾರದಿಂದ ಮುನ್ನ
ಹರಿವಿರಂಚಿಗಳಿಂದ ಮುನ್ನ
ಉಮೆಯ ಕಲ್ಯಾಣದಿಂದ ಮುನ್ನ ,
ಮುನ್ನ ಮುನ್ನ ಮುನ್ನ ಅಂದಿಂಗೆಳೆಯ ನೀನು
ಹಳೆಯ ನಾನು ಮಹಾದಾನಿ ಕೂಡಲಸಂಗಮದೇವಾ''
ಎಂದು ಹೇಳಲಾಗಿದೆ ತಾಯಿ .

**ಚನ್ನಬಸವಣ್ಣ:** ಇಷ್ಟೊಂದು ದೀರ್ಘವಾಗಿ ಮತ್ತು ಸಕಲ ಶರಣರಿಗೆ ತಿಳಿಯುವಂತೆ, ಕಾಯದ ಶಕ್ತಿ ಕಾಯಗಳಿಗೆ ಪರಿಚಯಿಸಿದಿರಿ ಬಸವರಸ. ನಾನು ಮತ್ತು ಸಕಲ ಶರಣರೂ ತಮಗೆ ಚಿರ ಋಣಿಯಾಗಿರುತ್ತೇವೆ.

ಪುನಃ ನಾಳೆ ಸಭೆಯಲ್ಲಿ ದಯವಿಟ್ಟು ಇದೇ ವಿಷಯವನ್ನು ಮುಂದುವರಿಸಿ ಬಸವರಸ ಎಂದು ಬಿನ್ನವಿಸಿಕೊಂಡು

ಸಭೆಗೆ ಮಂಗಲ ಹಾಡಿದರು.

## ದೇವರು ಸಾಕಾರವೂ ಹೌದು ನಿರಾಕಾರವೂ ಹೌದು

ಸೂರ್ಯೋದಯವಾಗುವ ಮುನ್ನ ಸತ್ಸಂಗಕ್ಕಾಗಿ ಮಹಾ ಮನೆಯಲ್ಲಿ ಶರಣರು ಕಾದು ಕುಳಿತಿದ್ದಾರೆ. ಬಸವಣ್ಣ ಚನ್ನಬಸವಣ್ಣ ವೇದಿಕೆಗೆ ಆಗಮಿಸಿ, ಸಕಲ ಶರಣರಿಗೆ ಶರಣು ಶರಣಾರ್ಥಿ ಎಂದು ಕುಳಿತುಕೊಳ್ಳುತ್ತಾರೆ.

**ಬಸವಣ್ಣ :** ದೇವರು ಸಾಕಾರನು ಹೌದು ನಿರಾಕಾರನು ಹೌದು.

**ಸೋಮಯ್ಯ:** ಅದು ಹೇಗೆ ಬಸವಣ್ಣ ? ವಿವರಿಸಿ ಹೇಳಿ.

**ಬಸವಣ್ಣ :** ಲೋಕ ದೇವರನ್ನು ಸಾಕಾರವೆಂದು ಭಾವಿಸಿ, ಕಲ್ಲು, ಕಟ್ಟಿಗೆ , ಲೋಹದಲ್ಲಿ ದೇವರನ್ನು ನಿರ್ಮಾಣ ಮಾಡಿ ಆರಾಧಿಸುತ್ತಲಿದೆ. ಆ ದೇವರಿಗೆ ಭವ್ಯವಾದ ಮಂದಿರಗಳನ್ನು ನಿರ್ಮಾಣ ಮಾಡಿ ಪ್ರಾರ್ಥಿಸುತ್ತಲಿದೆ. ಹೀಗೆ ಲೋಕ ನಿರ್ಮಾಣ ಮಾಡಿದ ದೇವರು ದೇವರಲ್ಲ, ಕಾಯವನ್ನು ನಿರ್ಮಾಣ ಮಾಡಿ ಕಾಯದಲ್ಲಿಯೇ ನಿರಾಕಾರವಾಗಿ ಸಂಗಮವಾದ ಅರಿವಿನ ದೇವರೇ ದೇವರು ಆಗಿದ್ದಾನೆ. ಈ ದೇವರು ನಿರಾಕಾರ. ಈತನು ಆರಾಧಿಸುವ ಮನವೆಂಬ ಭಕ್ತನು ಕೂಡ ನಿರಾಕಾರ. ಇವರಿಬ್ಬರೂ ವಾಸವಾಗಿದ್ದ ಕಾಯ ಮಾತ್ರ ಸಾಕಾರ.

ನಿರಾಕಾರ ಭಕ್ತ ಸಾಕಾರ ಕಾಯದೊಂದಿಗೆ, ಕಾಯದಲ್ಲಿಯೇ ಸಂಗಮವಾದ ನಿರಾಕಾರನೆಂಬ ಜ್ಞಾನೇಶ್ವರನಿಗೆ, ಭಕ್ತ ಕಾಯದೊಂದಿಗೆ ವಾಹನವಾಗಬಹುದು. ಹೀಗಾಗಿ ನನ್ನ ವಚನದ ಸೂತ್ರದಲ್ಲಿ ''ಅಯ್ಯಾ, ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿದ್ದೆ ಕಾಣಾ'' ಎಂದಿದ್ದೇನೆ.

''ಅಯ್ಯಾ, ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿದ್ದೆ ಕಾಣಾ''

ಕಾಯದ ಮೂಲಕ ನಟರಾಜನಾಗಿ , ಮಹಾಜ್ಞಾನೇಶ್ವರ ನಾಟ್ಯಕ್ಕೆ ನಿಂದಲ್ಲಿ ಮನವೆಂಬ ನಾನು ಭಕ್ತನಾಗಿ, ಚೈತನ್ಯವೆಂಬ ವಾಹನವಾಗಿದ್ದೆ ಎಂದು ಹೇಳಿರುವೆ.

ಅಯ್ಯಾ, ನೀನು ಆಕಾರವಾಗಿದ್ದಲ್ಲಿ , ನಾನು ವೃಷಭನೆಂಬ ವಾಹನವಾಗಿದ್ದೆ ಕಾಣಾ.

ಕಾಯದಲ್ಲಿ ಸಂಗಮವಾದ ಅರಿವು ಎನ್ನುವ ಶಿವ ಕಾಯದೊಂದಿಗೆ ಆಕಾರವಾಗಿ ಕಂಡಲ್ಲಿ ಆತನಿಗೆ ಮನವೆಂಬ ನಾನು ವೃಷಭನೆಂಬ ವಾಹನವಾಗಿ, ಆ ಪರಮಾತ್ಮನ ಸೇವೆಗಾಗಿ ಸದಾ ನಿಂತಿರುವೆ.

ಆತನಿಗೂ ನನಗೂ ಅವಿನಾಭಾವ ಸಂಬಂಧ. ಆತ ನನ್ನ ಹುಟ್ಟು ಸಾವುಗಳನ್ನು ಕೊಂದು ಹಾಕಲು ಜಂಗಮ ಲಾಂಛನ ಧರಿಸಿ ಬಂದಾಗ

ಮನವೆಂಬ ನಾನು ಭಕ್ತನೆಂಬ ವಾಹನವಾಗಿ ಆ ಪರಮಾತ್ಮನ ಸೇವೆಗಾಗಿ ಸದಾನಿಲ್ಲುವೆ.

**ಸೋಮಯ್ಯ:** ದೇವರು ಸಾಕಾರನು , ನಿರಾಕಾರನು ಹೌದು . ಈ ಬಗ್ಗೆ ಸಕಲ ಶರಣರಿಗೆ ತಿಳಿಯುವಂತೆ ಹೇಳಿದಿರಿ ಬಸವರಸ. ಆ ದೇವರನ್ನು ಸಕಾರನಾಗಿ ಕಾಯದಲ್ಲಿಯೇ ತೋರಿದಿರಿ. ನಿರಾಕಾರವಾಗಿ ನಮ್ಮೆಲ್ಲರ ಸ್ವಾನುಭಾವಕ್ಕೆ ಬರುವಂತೆ ನಮ್ಮ ನಮ್ಮ

ಕಾಯಗಳಲ್ಲಿಯೇ ನಾವು ನಮ್ಮ ನಮ್ಮ ಅರಿವಿನ ದೇವರನ್ನು ದೇಹದಲ್ಲಿಯೇ ಕಾಣುವಂತೆ ಹೇಳಿದಿರಿ ಬಸವರಸ. ನಾವು ತಮಗೆ ಚಿರಋಣಿ.

**ಚನ್ನಬಸವಣ್ಣ:** ಸಕಲ ಕಾಯಗಳಲ್ಲಿ ನಿರಾಕಾರವೆಂಬ ದೇವರು ಸಂಗಮವಾಗಿದ್ದಾನೆ.

ಆ ದೇವರನ್ನು ಆರಾಧಿಸುವ ಮನವೆಂಬ ಭಕ್ತನು ಕೂಡಾ ನಿರಾಕಾರನೇ ಆಗಿದ್ದಾನೆ.

ಅವರಿಬ್ಬರೂ ಇದ್ದ ಕಾಯ ಸಾಕಾರವೆಂದು ಸಕಲ ಕಾಯಗಳಿಗೂ ದೇವರನ್ನು ತೋರಿಸಿದ ಬಸವ ದೇವರಿಗೆ , ಶರಣು ಶರಣಾರ್ಥಿ.

ಇದುವರೆಗೆ ಲೋಕದ ಜನ ಇಲ್ಲದ ಬ್ರಹ್ಮನನ್ನು ಆರಾಧಿಸಿ, ತಮ್ಮ ಅಮೂಲ್ಯವಾದ ಕಾಯದೊಂದಿಗೆ ಇಲ್ಲವಾದರು.

ಇಲ್ಲದ ವಿಷಯವನ್ನು ಆರಾಧಿಸಿ ಮತ್ತೆ ಮತ್ತೆ ಹುಟ್ಟಿ ಬಂದರು. ಭೈರವನನ್ನು ಆರಾಧಿಸಿ, ಬಾಹಿರವಾಗಿಯೇ ಹೋದರು.

ಮೈಲಾರನನ್ನು ಆರಾಧಿಸಿ ಕುರುಡ ಬೆರಳ ಕಡಿಸಿಕೊಂಡು ನಾಯಿಯಾಗಿ ಬೊಗಳುತಿತ್ತು.

ಜಿನನನ್ನು ಆರಾಧಿಸಿ, ನಾಚಿಕೆ ತೊರೆದು ಬೆತ್ತಲಾದರು.

ಕೂಡಲಚನ್ನಸಂಗಯ್ಯನನ್ನು ಆರಾಧಿಸಿ, ದೇವ ಭಕ್ತ ಎಂದು ಕರೆಸಿಕೊಂಡರು ನೋಡಯ್ಯ.

ಲೋಕಕ್ಕೆ ಬ್ರಹ್ಮನು ಯಾರು ಎಂದು ಗೊತ್ತಿಲ್ಲ , ವಿಷ್ಣು ಯಾರು ಎಂದು ಗೊತ್ತಿಲ್ಲ, ಭೈರವ ಮೈಲಾರ ಯಾರು ಎಂದು ಕೂಡ ಗೊತ್ತಿಲ್ಲದೇ ಇತರರು ಹೇಳಿದ್ದನ್ನೇ ಕೇಳಿ ನುಡಿಯುತ್ತಾರೆ ಹೊರತು ಸ್ವಾನುಭಾವಕ್ಕೆ ಹೋಗಿ ಆಲೋಚನೆ ಮಾಡುವ ಶಕ್ತಿ ಲೋಕ ಕಳೆದುಕೊಂಡಿದೆ.

ಜಿನನನ್ನು ಆರಾಧಿಸಿ ಬೆತ್ತಲಾಗುವುದು ನಾಚಿಕೆಗೇಡು ಅಲ್ಲವೇ ? ಸ್ವತಃ ತಾನೇ ಜಿನನಾಗಲು ಅರಿಯದಿದ್ದರೆ, ಜಿನನಂತೆ ಆಗಿ ಜಿನನನ್ನು ಆರಾಧಿಸುವುದು ಅದೊಂದು ನಾಚಿಕೆಯ ಸಂಪ್ರದಾಯ.

ಅಂಗದಲ್ಲಿಯೇ ಸಂಗಮವಾದ ಕೂಡಲ ಚನ್ನ ಸಂಗಯ್ಯನೆಂಬ ಅರಿವಿನ ದೇವರನ್ನು ಮನವೆಂಬ ಭಕ್ತನ ಮೂಲಕ ಆರಾಧಿಸಿ, ಭಕ್ತನೆಂದು ಕರೆಸಿಕೊಂಬುದು ಸೊಗಸಾದ 'ಕಾಯಕ '.

ಈ 'ಕಾಯಕ 'ದಲ್ಲಿ ಸಕಲ ಕಾಯಗಳು ನಿರತವಾಗಲಿ ಎಂದು ಆಶಿಸಿ, ಇಂದಿನ ಸಭೆಯನ್ನು ಇಲ್ಲಿಗೆ ಮುಕ್ತಾಯ ಮಾಡೋಣ. ಎಂದು

ಸಭೆಗೆ ಮಂಗಲ ಹಾಡಿದರು.

ಸಕಲ ಶರಣರು ಅರಿವಿನ ಅಮೃತವನ್ನು ಪಾನ ಮಾಡಿ , ಓಲಾಡುತ್ತಾ ತಮ್ಮ ತಮ್ಮ ಮನೆಗೆ ನಡೆದರು.

## ಆಲಯ ಕಟ್ಟಿದಾಗ ದೇವರು ಆಶೀರ್ವದಿಸಲಿಲ್ಲ ಅದು ಅವಸಾನಕ್ಕೆ ಒಳಗಾದಾಗ ಶಾಪ ನೀಡಲಿಲ್ಲ

ಸೂರ್ಯಾಸ್ತವಾಗುತ್ತಲಿದೆ. ಶರಣರು ಮಹಾ ಮನೆಯತ್ತ ನಡೆದು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಳ್ಳುತ್ತಾರೆ. ಬಸವಣ್ಣ ಚನ್ನಬಸವಣ್ಣ ವೇದಿಕೆಗೆ ಆಗಮಿಸಿ, ಸಕಲ ಶರಣರಿಗೆ ಶರಣು ಶರಣಾರ್ಥಿ ಎಂದು ಹೇಳುತ್ತ, ಕುಳಿತುಕೊಳ್ಳುತ್ತಾರೆ.

**ಕೊಟ್ಟಣದ ಸೋಮಮ್ಮ** : ದೇಹವೇ ದೇವಾಲಯ , ದೇಹದಲ್ಲಿರುವ ಅರಿವೇ ಶಿವ. ಆ ಶಿವನನ್ನು ತಿಳಿಯುವ ಮನವೇ ಶಿವೆಯಾಗಿರುವಾಗ, ದೇವಾಲಯವನ್ನು ಏಕೆ ಕಟ್ಟಿದರು?

ಊರ ಹಿರಿಯರಿಗೂ ರಾಜನಿಗೂ ಇದು ಶೋಭೆ ತರುವ ಕೆಲಸವೇ ಬಸವರಸ?

**ಬಸವಣ್ಣ** : ಇದು ಪುಣ್ಯ ಭೂಮಿ . ಜ್ಞಾನಪ್ರಧಾನವಾದ ರಾಷ್ಟ್ರ .

ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ತನು ಸರಳವಾಗಿ ಪಡೆದು ಶಾಶ್ವತ ಅರಿವಿನ ಸುಖ ಅನುಭವಿಸುವುದಕ್ಕಾಗಿ, ಅನೇಕ ಸತ್ಪುರುಷರು, ಸಂತ ಮಹಾಂತರು, ತತ್ವಪದಕಾರರು , ಶರಣರು ಸರಳವಾಗಿ ಸಕಲರಿಗೂ ಅರಿವಿನ ಪಾಠ ಮಾಡಿ, ತಿಳಿಯಲೆಂದು ಸರಳ ಸೂತ್ರಗಳನ್ನು ರಚಿಸಿದ್ದಾರೆ.

ಜ್ಞಾನಿಗಳು ವೈಜ್ಞಾನಿಕವಾಗಿ ತನುವಿನ ತತ್ವ ತನುವೇ ಪಡೆಯಲು ರಚಿಸಿದ ಪುಸ್ತಕಗಳೆಲ್ಲ ಈ ದೇಶದಲ್ಲಿ ಧರ್ಮಗ್ರಂಥಗಳಾದವು.

ಸರಳವಾಗಿ ತಿಳಿಯಲು ಕಥೆ ಮಾಡಿ ಹೇಳಿದ ಪಾತ್ರಗಳೆಲ್ಲ ಪುರಾಣಗಳಾದವು. ದೇವಾನು ದೇವತೆಗಳು ಆದವು .

ಪೂಜಿಸಿ ಆಲಯಗಳನ್ನು ನಿರ್ಮಿಸಿ, ಆರಾಧಿಸುವ ರೋಗ ಭೂಮಿಯ ತುಂಬಾ ವ್ಯಾಪಿಸಿತು.

ಒಬ್ಬ ರಾಜನಿಂದ ಪೂಜೆಗೊಳಗಾದ ದೇವಾಲಯ ಮತ್ತೊಬ್ಬ ರಾಜನಿಂದ ಅವಸಾನಕ್ಕೆ ಒಳಾಗಾಯಿತು. ಕಟ್ಟಿದಾಗ ದೇವರು ಅಶಿರ್ವಾದ ಮಾಡಲಿಲ್ಲ; ಅವಸಾನಕ್ಕೆ ಒಳಗಾದಾಗ ದೇವರು ಶಾಪ ನೀಡಲಿಲ್ಲ, ಇವೆರಡೂ ಇತಿಹಾಸ ಸೇರಿದವು. ನೋಡಿದ ಓದಿದ ಕಣ್ಣುಗಳು ಹೌದು ಅಲ್ಲವೆಂದು ಹೇಳಿದವೆ ಹೊರತು ನಿಜ ತಿಳಿಯಲಿಲ್ಲ.

**ಕೊಟ್ಟಣದ ಸೋಮಮ್ಮ**: ನಿಜ ತಿಳಿಯುವುದು ಹೇಗೆ ಪ್ರಭು?

**ಬಸವಣ್ಣ**: ನಿಜ ಎನ್ನುವುದು ತನುವಿನಲ್ಲಿಯೇ ಅಡಗಿದೆ. ಕಾಲುಗಳೇ ಕಂಬ , ದೇಹವೇ ದೇಗುಲ. ಶಿರವೇ ಹೊನ್ನ ಕಳಶ . ದೇಹವೆಂಬುದು ಮಾತನಾಡುವ ದೇವಾಲಯ. ಇಡೀ ಬ್ರಹ್ಮಾಂಡದ ಸೌಂದರ್ಯವನ್ನು ನೋಡುವ ದೇವಾಲಯ .

ಶಬ್ದವನ್ನು ನಿಶಬ್ದ ಮಾಡಿ ಅರಿವಿನಿಂದ ಕೇಳಿ ಪ್ರಸಾದದಂತೆ ಸ್ವೀಕರಿಸುವ ದೇವಾಲಯ. ಸಕಲ ವಾಸನೆಯನ್ನು ಅರಿವಿನಿಂದ ಮೂಸಿಸಿ, ಅರಿವಿನ ಪರಿಮಳದಂತೆ ಸ್ವೀಕರಿಸುವ ಜಗದ

ಸಕಲ ಕಾಯಗಳೆಲ್ಲ ಶಿವಮಯ .

ಸಕಲ ಕಾಯಗಳಿಗೆ ಅರಿವೆಂಬ ಗುರುದೇವನ ಪರಿಚಯವಾಗಲೆಂದು ಪುರಾಣಿಕರು ಕಾಲಘಟ್ಟದಲ್ಲಿ ಆಯಾ ಹೆಸರಲ್ಲಿ ಪುರಾಣಗಳನ್ನು ರಚಿಸಿದರು .

ಪುರಾಣಗಳನ್ನು ಓದಿದ ತನುಗಳಿಗೆ, ಇಲ್ಲದ ಪುರಾಣಗಳೇ ನಿಜವಾದವು. ಕಾಯದಲ್ಲಿಯೇ ಇದ್ದ ಅರಿವು ಎನ್ನುವ ಶಿವನೇ ಕಾಯಕ್ಕೂ ಕಾಯವನ್ನು ಆವರಿಸಿ ಮನಕ್ಕೆ ಬಹಳ ದೂರವಾದನು .

**ದುಗ್ಗಳೆ** : ದೇಹ ದೇವಾಲಯವೆಂಬುದನ್ನು ಮರೆತು, ಸ್ವತಃ ದೇಹವೇ ದೇವಾಲಯಗಳನ್ನು ನಿರ್ಮಾಣ ಮಾಡಿ , ದೇವತೆಗಳನ್ನು ಸೃಷ್ಟಿಮಾಡಿದ್ದು ದೇಹದ ಅಜ್ಞಾನದಿಂದಲೇ ಎಂಬುದನ್ನು ಸವಿವರವಾಗಿ ಹೇಳಿದಿರಿ ಬಸವರಸ . ನಾವೆಲ್ಲರೂ ತಮಗೆ ಚಿರಋಣಿ .

**ಚನ್ನಬಸವಣ್ಣ** : ದೇಹದಲ್ಲಿ ದೇವರಿದ್ದರು ದೇವರನ್ನು ಅರಿಯದ ದೇಹ ಕುರುಡು ದೇಹವೇ ಸರಿ ಎಂಬುವುದನ್ನು ಸಕಲ ಶರಣರಿಗೆ ತಿಳಿಯುವಂತೆ ಸರಳವಾಗಿ ಉಪನ್ಯಾಸ ನೀಡಿದ ಬಸವರಾಜ ದೇವರಿಗೆ

ಶರಣು ಶರಣಾರ್ಥಿ

ಪುನಃ ನಾಳೆ ಬೆಳಿಗ್ಗೆ ಸತ್ಸಂಗದಲ್ಲಿ ಸರ್ವರು ಸೇರೋಣ ಎಂದು ಸಭೆಗೆ ಮಂಗಲ ಹಾಡಿದರು.

## ಅಜ್ಞಾನದ ಕುರುಡುತನಕ್ಕೆ ಹದಿನೆಂಟು ಅಕ್ಷೋಹಿಣಿ ಸೈನ್ಯ ಬಲಿಯಾಯಿತು

ಇನ್ನೂ ಸೂರ್ಯೋದಯವಾಗಿಲ್ಲ , ಶರಣರು ಮಹಾ ಮನೆಯತ್ತ ನಡೆದು ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳುತ್ತಾರೆ. ಬಸವಣ್ಣ ಚನ್ನಬಸವಣ್ಣ ಸಭೆಗೆ ಆಗಮಿಸಿ, ಸಕಲ ಶರಣರಿಗೂ ಕೈಮುಗಿದು ಶರಣು ಶರಣಾರ್ಥಿ ಎನ್ನುತ್ತ ಕುಳಿತುಕೊಳ್ಳುತ್ತಾರೆ.

**ರೇಚದ ಬಂಕಣ್ಣ:** ಬಸವರಸ , ನಿನ್ನೆ ಸಂಜೆಯ ಸಭೆಯಲ್ಲಿ ; ಜಗತ್ತಿನಾದ್ಯಂತ ಕಣ್ಣಿದ್ದ ಕುರುಡು ತನುಗಳೇ ಇವೆ ಎಂದು ಹೇಳಿದಿರಿ. ದಯವಿಟ್ಟು ವಿವರಿಸಿ ಹೇಳಿ ಬಸವರಸ.

**ಬಸವಣ್ಣ:** ಸರಿಯಾದ ಪ್ರಶ್ನೆಯನ್ನೇ ಕೇಳಿದಿರಿ ಬಂಕಣ್ಣ ಶರಣರೇ.

ನೋಡುವುದನ್ನು ನೋಡಲು ಸಾಧ್ಯವಾಗದಿದ್ದರೆ, ಕಣ್ಣಿದ್ದರೂ, ಕುರುಡು ಕಣ್ಣೇ ಆಗಿದೆ.

ಧೃತರಾಷ್ಟ್ರನಿಗೆ ಕಣ್ಣಿದ್ದವು. ಆತನ ಕಣ್ಣು ಕಾಣುತ್ತಿತ್ತು. ಮಗನ ಮೇಲಿನ ಕುರುಡು ಮೋಹ ಆತನನ್ನು ಕುರುಡನನ್ನಾಗಿಸಿತು. ಹೀಗಾಗಿ ಹದಿನೆಂಟು ಅಕ್ಷೋಹಿಣಿ ಸೈನ್ಯ ಧೃತರಾಷ್ಟ್ರನ ಮಗನ ಮೋಹಕ್ಕಾಗಿ ಬಲಿಯಾಯಿತು. ತನ್ನ ನೂರು ಜನ ಮಕ್ಕಳು ಸತ್ತು ಹೋದರೂ , ಕಣ್ಣಲಿರುವ ಸತ್ಯ ಕಣ್ಣಲ್ಲಿಯೇ ಮರೆಯಾಯಿತು . ಕಣ್ಣನ್ನು ಆವರಿಸಿದ ಅಜ್ಞಾನದ ಕುರುಡುತನ ರಾಜ್ಯವನ್ನು ಆಳಿತು.

ಹೀಗಾಗಿ ತನ್ನ ಪರವಾಗಿದ್ದ ಹನ್ನೊಂದು ಅಕ್ಷೋಹಿಣಿ ಸೈನ್ಯ ಪಾಂಡವರ ಪರವಾಗಿದ್ದ ಏಳು ಅಕ್ಷೋಹಿಣಿ ಸೈನ್ಯ ಧೃತರಾಷ್ಟ್ರನ ಕುರುಡುತನಕ್ಕೆ ಬಲಿಯಾಗಿ ರಕ್ತದ ಕಾಲುವೆಯೇ ಹರಿಯಿತು.

**ಲದ್ದೆಯ ಸೋಮಯ್ಯ:** ಧರ್ಮರಾಜನದು ಕೂಡ ಒಂದು ತರಹದ ಕುರುಡಲ್ಲವೇ ಬಸವರಸ.

**ಬಸವಣ್ಣ:** ಹೌದು, ಧೃತರಾಷ್ಟ್ರನದು ಸಂಪೂರ್ಣ ಕುರುಡುತನವಾದರೆ ಧರ್ಮರಾಜನದು ಸಾತ್ವಿಕ ಕುರುಡುತನ ಎಂದು ಹೇಳಬಹುದಾಗಿದೆ.

**ವಚನ ಭಂಡಾರಿ ಶಾಂತರಸ :** ಸಾತ್ವಿಕ ಕುರುಡು ಕೂಡ ಕುರುಡುತನವಲ್ಲವೇ ಬಸವರಸ?

**ಬಸವಣ್ಣ:** ಹೌದು ಸತ್ಯವಾಗಿಯೇ ಹೇಳಿದಿರಿ ಶಾಂತರಸ ಶರಣರೇ. ಸಾತ್ವಿಕ ಕುರುಡುತನ ಮತ್ತೊಬ್ಬರಿಗೆ ಹಾನಿ ಮಾಡುವುದಿಲ್ಲ. ತನಗೆ ತಾನು ಹಾನಿಮಾಡಿಕೊಳ್ಳದೇ ಇರುವುದು ಸಾಧ್ಯವಾಗುವುದಿಲ್ಲ.

**ಶಿವಲೆಂಕ ಮಂಚಣ್ಣ:** ಅದು ಹೇಗೆ ಬಸವರಸ?

**ಬಸವಣ್ಣ :** ಮಹಾಭಾರತದ ಕಥೆ, ಸಾತ್ವಿಕ, ರಾಜಸ, ತಾಮಸ ಹಾಗೂ ಮಹಾಜ್ಞಾನದ

ವೃತ್ತಾಂತವನ್ನು ಬಿತ್ತರಿಸುತ್ತದೆ. ವ್ಯಾಸರು ಮಹಾಜ್ಞಾಣರು.

ದೇಹದಲ್ಲಿರುವ ಜ್ಞಾನದ ಪಾತ್ರವನ್ನು ಕೃಷ್ಣನ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

ತಾಮಸ ಮತ್ತು ರಾಜಸ ಗುಣವನ್ನು ಕೌರವರ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

ಸಾತ್ವಿಕ ಗುಣವನ್ನು ಪಾಂಡವರ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

**ಸಕಲೇಶ ಮಾದರಸ :** ಅದು ಹೇಗೆ ಬಸವಣ್ಣ? ವಿವರಿಸಿ ಹೇಳಿ ಎನ್ನೊಡೆಯ.

**ಬಸವಣ್ಣ :** ಆಗಲಿ ಶರಣರೇ,

ಒಂದು ದೇಹದಲ್ಲಿ ಪಂಚೇಂದ್ರಿಯಗಳಿವೆ , ಪ್ರತಿಯೊಂದು ಇಂದ್ರಿಯದ ಪಕ್ಕದಲ್ಲಿಯೆ ಅಂದರೆ ಇಂದ್ರಿಯಕ್ಕೆ ಹೊಂದಿಕೊಂಡು ಜ್ಞಾನೇಂದ್ರಿಯವೂ ಇದೆ. ಜ್ಞಾನೇಂದ್ರಿಯ ಕೃಷ್ಣನಾದರೆ, ಇಂದ್ರಿಯಗಳು ಸಾತ್ವಿಕ ಪಾಂಡವರು ಹೌದು.

ಕಣ್ಣಿದ್ದು ಕುರುಡನಾದ ಧೃತರಾಷ್ಟ್ರನ ಕುಲದ ಕೌರವರು ಹೌದು.

ಪ್ರತಿ ನಿತ್ಯ ಸಾತ್ವಿಕ, ರಾಜಸ, ತಾಮಸ ಮತ್ತು ಜ್ಞಾನದೊಂದಿಗೆ, ದೇಹದಲ್ಲಿ ಮಹಾಯುದ್ಧ ನಡೆದೇ ಇರುತ್ತದೆ.

**ಸಗರದ ಬೊಮ್ಮಣ್ಣ :** ಇಂದ್ರಿಯಗಳು ಸಾತ್ವಿಕ ಕೆಲಸದಲ್ಲಿ ಇದ್ದರೆ, ಅದು ಪಾಂಡವರು ಹೇಗೆ ಬಸವರಸ ?

**ಬಸವಣ್ಣ :** ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ, ಇವು ಇಂದ್ರಿಯಗಳು. ಮನಸ್ಸು ದ್ರೌಪದಿಯಾಗಿ ಈ ಐದು ಇಂದ್ರಿಯಗಳ ಜೊತೆಗೆ ಸಂಗ ಮಾಡುತ್ತಾಳೆ. ಈಕೆ ಸಾತ್ವಿಕತನವನ್ನು ತೋರಬಹುದು ಪಾಂಡವರಂತೆ! ದುಷ್ಟತನವನ್ನು ತೋರಬಹುದು ಕೌರವರಂತೆ!

ಹೀಗಾಗಿ ವ್ಯಾಸ ಮಹರ್ಷಿಗಳು ಲೋಕ ಸರಳವಾಗಿ ಜ್ಞಾನ ತಿಳಿಯಲೆಂದು ಐದು ಇಂದ್ರಿಯಗಳ ಮೂಲಕ ಮನವನ್ನೇ ದ್ರೌಪದಿಯಾಗಿಸಿ, ಪಂಚೇಂದ್ರಿಯಗಳನ್ನೆ ಪಾಂಡವರುಗಳಾಗಿಸಿದ್ದಾರೆ. ಅವರಿಗೆ ದ್ರೌಪದಿಯನ್ನೇ ಕೊಟ್ಟು ಮದುವೆ ಮಾಡಿದ್ದಾರೆ.

ದೇಹವನ್ನೇ ರಥವನ್ನಾಗಿಸಿದ್ದಾರೆ, ಶ್ರೀ ಕೃಷ್ಣನನ್ನು ಸಾರಥಿಯನ್ನಾಗಿಸಿದ್ದಾರೆ.

**ಸುಂಕದ ಬಂಕಣ್ಣ :** ಆಹಾ ! ಎಷ್ಟು ಸುಂದರವಾಗಿ ಮಹಾಭಾರತದ ಕಥೆಯನ್ನು ನಮಗೆಲ್ಲ ತಿಳಿಯುವಂತೆ ಹೇಳಿದಿರಿ ಬಸವರಸ ! ಇದನ್ನು ಮತ್ತಷ್ಟು ಮುಂದುವರಿಸಿ ಎನ್ನೊಡೆಯಾ.

**ಬಸವಣ್ಣ :** ಆಗಲಿ ಶರಣರೇ, ನಿಮ್ಮ ಉತ್ಸಾಹಕ್ಕೆ ನಾನು ಚಿರಋಣಿ.

ಮನಸ್ಸು ಕಣ್ಣಿನಲ್ಲಿ ಬೆರೆತು ನೋಡುವ ಗುಣವನ್ನು ಹೊಂದಿದೆ.

ಚರ್ಮದಲ್ಲಿ ಬೆರೆತು ಸ್ಪರ್ಶಿಸುವ ಗುಣವನ್ನು ಹೊಂದಿದೆ.

ಮೂಗಿನಲ್ಲಿ ಬೆರೆತು ಮೂಸಿಸುವ ಗುಣವನ್ನು ಹೊಂದಿದೆ .

ನಾಲಿಗೆಯಲ್ಲಿ ಬೆರೆತು ರುಚಿಸುವ ಗುಣವನ್ನು ಹೊಂದಿದೆ .

ಕಿವಿಯಲ್ಲಿ ಬೆರೆತು ಕೇಳುವ ಗುಣವನ್ನು ಹೊಂದಿದೆ .

ಆದರೆ ನೋಡುವ ಕಣ್ಣಿನ ಮೂಲಕ ಮನಸ್ಸು ದೃಶ್ಯವಾಗಿ ತನಗೆ ಬೇಕಾದಂತೆ ನೋಡುತ್ತದೆ. ಹೀಗೆ ನೋಡುವ ನೋಟಕ್ಕೆ ಸತ್ಯ ಕಾಣುವುದಿಲ್ಲ, ಹೀಗಾಗಿ ಇಂತಹ ದೃಶ್ಯವನ್ನು

ಮನೋಮಯ ದೃಶ್ಯವೆಂದು ಕರೆಯಬಹುದು.

**ಸೊಡ್ಡಳ ಬಾಚರಸ** : ಅದು ಹೇಗೆ ಬಸವಣ್ಣ?

**ಬಸವಣ್ಣ** : ಕಟೆದ ಕಲ್ಲನ್ನು ನೋಡುವ ಮನೋಮಯವಾದ ದೃಶ್ಯ, ಕಲ್ಲನ್ನೇ ದೇವರೆಂದು ದೇಹಕ್ಕೆ ತಿಳಿಹೇಳಿ, ದೇಹದಲ್ಲಿ ಸುಳ್ಳು ಭಕ್ತಿರಸವನ್ನು ಚಿಮ್ಮುತ್ತದೆ.

ದೇಹಕ್ಕೆ ತನ್ನದೇ ಆದ ಅರಿವಿದ್ದರೂ ಆ ಅರಿವನ್ನು ಬಳಸದೇ ಮನೋಮಯವಾದ ದೃಶ್ಯದ ಮಾತನ್ನೇ ಕೇಳಿ ಅದಕ್ಕೆ ತನ್ನನ್ನು ತಾನು ಅರ್ಪಿಸಿಕೊಳ್ಳುತ್ತದೆ.

ಆ ದೃಶ್ಯದ ಮಾತನ್ನು ಕೇಳಿ ಕಾಯ ಕಲ್ಲನ್ನು ದೇವರೆಂದು ತಿಳಿದು ಭಕ್ತಿ ಪೂರ್ವಕವಾಗಿ ನಮಸ್ಕರಿಸುತ್ತದೆ .

ಆ ಕಲ್ಲನ್ನೇ ದೇವರೆಂದು ತಿಳಿದು ಅರ್ಚನೆ, ಪೂಜೆ, ಅಭಿಷೇಕ, ದೀಡ ನಮಸ್ಕಾರ, ಉರುಳುಸೇವೆ ಮಾಡುತ್ತದೆ.

ಕಲ್ಲನ್ನೇ ಹೆಣ್ಣುದೇವರೆಂದು ತಿಳಿದು ಸೀರೆ, ರವಿಕೆ ಉಡಿಸಿ, ಕಾಲುಂಗುರ, ನತ್ತು ತೊಡಿಸಿ, ಭಕ್ತಿ ಪೂರ್ವಕವಾಗಿ ನಮಿಸಿ ಸಂಭ್ರಮಿಸುತ್ತದೆ .

ಹಾಗೆಯೇ ಕಲ್ಲನ್ನೇ ಗಂಡು ದೇವರೆಂದು ತಿಳಿದು ಪಂಚೆ, ಪಾದುಕೆ, ಮೀಸೆ, ಕಿರೀಟಗಳನ್ನು ತೊಡಿಸಿ ಛತ್ರಿ, ಚಾಮರ ಬೀಸಿ,

ಹೆಣ್ಣು ದೇವರಿಗೂ ಗಂಡೂ ದೇವರಿಗೂ ಕಲ್ಯಾಣೋತ್ಸವ ಮಾಡಿಸಿ, ಶಯನ ಗೃಹಕ್ಕೆ ಕಳುಹಿಸಿ ಶೋಬಾನೆ ಪದ ಹಾಡಿ, ಸಂಭ್ರಮಿಸುತ್ತದೆ .

ಇದು ಮನೋಮಯವಾದ ದೃಶ್ಯದ ಸಾತ್ವಿಕ ಕೆಲಸ. ಹೀಗೆ ಪಾಂಡವರು ಸಾತ್ವಿಕರಾಗಿ ಜೀವನ ಸಾಗಿಸುತ್ತಾರೆ.

**ಹಾವಿನ ಹಾಳ ಕಲ್ಲಯ್ಯ** : ಮನದ ಕ್ರೌರ್ಯದ ಕೆಲಸವನ್ನು ಹೇಳಿ ಬಸವರಸ.

**ಬಸವಣ್ಣ** : ಆಗಲಿ ಕಲ್ಲಯ್ಯ ಶರಣರೇ,

ಮನ, ಕಾಯ ಹಿಡಿದು ಐದು ಇಂದ್ರಿಯಗಳಲ್ಲಿ ಸಂಚರಿಸಿ ಸಾತ್ವಿಕನಾಗಿ ಹೇಗೆ ಪಾಂಡವರ ಪಾತ್ರದಲ್ಲಿ ಕಾಣುತ್ತದೆಯೋ ,

ಹಾಗೆಯೇ ಐದು ಇಂದ್ರಿಯಗಳನ್ನು ತನ್ನ ವಶಮಾಡಿಕೊಂಡು ಕೌರವರ ಪಾತ್ರದಲ್ಲಿ ಕಾಣುತ್ತದೆ. ತನು ಮತ್ತೊಂದು ತನುವಿನೊಂದಿಗೆ ದ್ವೇಷದೊಂದಿಗೆ ಯುದ್ಧ ಮಾಡಿ ಸುಖವನ್ನು ಅನುಭವಿಸುತ್ತದೆ. ಹಾಗೆಯೆ ತನುವಿಗೆ ದುಃಖವನ್ನು ಕೂಡಾ ಉಂಟು ಮಾಡುತ್ತದೆ. ತನುವಿನ ಸುಖ ದುಃಖಗಳು ಮನಕ್ಕೆ ಮುದ ನೀಡುತ್ತವೆ.

ತನು ಬಹು ಬೇಗ ಅರಿವಿನೊಂದಿಗೆ ಸಂಗಮವಾಗಿ , ಆ ಅರಿವೆ ತಾನಾಗಲಿ ಎನ್ನುವ ಬಯಕೆಯಿಂದಲೇ , ತನುವಿಗೆ ಮತ್ತೆ ಮತ್ತೆ, ದುಃಖವನ್ನು ಉಂಟು ಮಾಡುತ್ತದೆ. ಇದು ಮನದ ಉದ್ದೇಶ

**ಹೆಂಡದ ಮಾರಯ್ಯ** : ಬಸವರಸ, ಮನ ಅರಿವಿನೊಂದಿಗೆ ಸಂಗ ಮಾಡಲು ಬಯಕೆ ಮಾಡುವುದಿಲ್ಲವೇ ಹೇಗೆ?

**ಬಸವಣ್ಣ :** ಸುಂದರವಾದ ಮತ್ತು ಸೂಕ್ತವಾದ ಪ್ರಶ್ನೆಯನ್ನೇ ಕೇಳಿದಿರಿ ಮಾರಯ್ಯ.

ಮನಕ್ಕೆ ಭೌತಿಕ ವಿಷಯಗಳಲ್ಲಿ ಬೇಸರವಾದಾಗ ಅರಿವಿನ ಸುಖ ಉಣ್ಣುವುದಕ್ಕಾಗಿ ಅರಿವಿನ ಸಂಗ ಮಾಡಲು ಬಯಸುತ್ತದೆ. ಆ ಸುಖ ಉಣ್ಣಲು ಹೋಗಿ, ಆ ಅರಿವೇ ತಾನಾಗುತ್ತದೆ. ಆಗ ಮನ ಘನಮನವಾಗುತ್ತದೆ.

ವ್ಯಾಸ ಮಹರ್ಷಿಗಳ ದೃಷ್ಟಿಯಲ್ಲಿ ಶ್ರೀ ಕೃಷ್ಣನೇ ತಾನಾಗುತ್ತದೆ. ವಿರಾಟ ಸ್ವರೂಪವೇ ತಾನಾಗುತ್ತದೆ.

**ಆಯ್ದಕ್ಕಿ ಲಕ್ಕಮ್ಮ :** ಬಸವರಸ, ಇಡೀ ದೇಹದಲ್ಲಿಯೇ ಪಾಂಡವರ ಮತ್ತು ಕೌರವರ ಹಾಗೂ ಅರಿವು ಎನ್ನುವ ಶ್ರೀ ಕೃಷ್ಣನ ದರ್ಶನ ಮಾಡಿಸಿದಿರಿ. ವ್ಯಾಸ ಮಹರ್ಷಿಗಳಿಗೆ ಅರಿವು ಎನ್ನುವ ಗುರುದೇವ ಶ್ರೀ ಕೃಷ್ಣನಾಗಿ ಕಂಡರೆ, ಬಸವರಸ ತಮಗೆ ಅರಿವು ಎನ್ನುವ ಗುರುದೇವ ಕೂಡಲಸಂಗಮ ದೇವರ ರೂಪದಲ್ಲಿ ಲಿಂಗಯ್ಯನ ರೂಪದಲ್ಲಿ ದರುಶನ ನೀಡಿದ್ದಾನೆ.

ಶರಣರಿಗೆ ಅರಿವು ಎನ್ನುವ ಗುರುದೇವ ಬಸವಣ್ಣನ ರೂಪದಲ್ಲಿ ದರುಶನ ನೀಡಿದ್ದಾನೆ. ಹೀಗಾಗಿ ತಾವು ಶಿವ ಸ್ವರೂಪಿಗಳೇ ಆಗಿರುವಿರಿ. ತಮಗೆ ಶರಣು ಶರಣಾರ್ಥಿ ಬಸವಣ್ಣ.

**ಬಸವಣ್ಣ :** ಶಿವ, ಒಬ್ಬ ವ್ಯಕ್ತಿ ಅಲ್ಲ ಲಕ್ಕಮ್ಮ ! ಆತ ಸಕಲ ಕಾಯಗಳಲ್ಲಿಯೂ ತನ್ಮಯವಾದ ಅವ್ಯಕ್ತ ಶಕ್ತಿಯೇ ಆಗಿದ್ದಾನೆ. ಆ ಶಿವ ತಮ್ಮೆಲ್ಲಾ ಕಾಯಗಳಲ್ಲಿ ಅರಿವೆಂಬ ಗುರುದೇವನ ನಿರೂಪದ ಮೂಲಕ ಕಾಣುತ್ತಿದ್ದಾನೆ. ತಮ್ಮೆಲ್ಲರಿಗೂ ಶರಣು ಶರಣಾರ್ಥಿ ಎಂದು

ಸಭೆಗೆ ಮಂಗಲ ಹಾಡಿದರು.

## ಕೈಲಾಸವೇ ಆಗಬೇಕಾದ ಕಾಯ ನರಕಕ್ಕೆ ಭಾಜನವಾಗಿದೆ

ಸಂಜೆ ಸಮಯ, ಇನ್ನೂ ಸೂರ್ಯಾಸ್ತವಾಗಿಲ್ಲ . ಶರಣರು ಮಹಾಮನೆಯಲ್ಲಿ ತಮ್ಮ ತಮ್ಮ ಆಸನದಲ್ಲಿ ಕುಳಿತುಕೊಳ್ಳುವರು. ಬಸವಣ್ಣ, ಚೆನ್ನಬಸವಣ್ಣ ವೇದಿಕೆಯ ಮೇಲೆ ಕುಳಿತುಕೊಳ್ಳುತ್ತಾ, ಸಕಲ ಶರಣರಿಗೂ ಶರಣು ಶರಣಾರ್ಥಿ ಹೇಳಿದರು.

**ಚೆನ್ನಬಸವಣ್ಣ :** ನಿನ್ನೆ ಬೆಳಗಿನ ಸಭೆಯಲ್ಲಿ, ಬಸವರಸರು ತಮಗೆ ಅರಿವಿನ ದರುಶನವನ್ನು ಮಾಡಿಸಿದ್ದಾರೆ. ಆ ಅರಿವು ಎಂಬ ಗುರುದೇವನು ಇಲ್ಲದ ಅಂಗವೇ ಇಲ್ಲ ಈ ಜಗದೊಳಗೆ

ಆ ಗುರುದೇವ ಇಲ್ಲದ ಅಂಗವೇ ಪಂಚಮಹಾಪಾತಕ, ಏಳನೇಯ ನರಕ.
ಅರಿವೆಂಬ ಗುರುದೇವನು ಇದ್ದ ಅಂಗವೇ ಲಿಂಗಾಂಗ!
ಅವರ ಅಂಗವು ಲಿಂಗ. ಅವರು ಇದ್ದ ಅಂಗವೇ ವಾರಣಾಸಿಗೂ ಅಧಿಕ.
ಗುರುದೇವನು ಇದ್ದ ಅಂಗ ಅಮೃತದ ದಿವ್ಯ ಕ್ಷೇತ್ರದಿಂದಲೂ
ಮಂತ್ರದಿಂದಲೂ ಅಧಿಕ , ಕೂಡಲಚೆನ್ನ ಸಂಗಾ
ಆ ಗುರುದೇವನಿಗೆ ಶರಣು ಹೋದ ಶರಣರ ಸಂಗವೇ ಸುಸಂಗವು ನನಗೆ.

**ಕದಿರೆ ಕಾಯಕದ ಕಾಳವ್ವೆ :** ಚೆನ್ನ ಬಸವಣ್ಣ, ಸಕಲ ಅಂಗಗಳಲ್ಲಿಯೂ ಅರಿವೆಂಬ ಗುರುದೇವನು ಸಂಗಮವಾಗಿದ್ದಾನೆ. ಆತನು ಇಲ್ಲದ ಅಂಗ ನರಕ ಎಂದು ಹೇಳಿದಿರಿ. ಅದೆಂತಹ ಸೊಗಸಾದ ಮಾತು. ಆ ಪರಮಾತ್ಮನೇ ನಮ್ಮ ಉದ್ಧಾರಕ್ಕಾಗಿ ಬಸವಣ್ಣ, ಚೆನ್ನಬಸವಣ್ಣಾದಿಗಳನ್ನು ಕಳುಹಿಸಿದ್ದಾನೆ.

ಆತನಿಗೆ ನಮ್ಮ ಕೋಟಿ ಕೋಟಿ ನಮನ .

**ಚೆನ್ನಬಸವಣ್ಣ :** ತಾಯಿ ನಿಮಗೂ ಈ ಸಭೆಯಲ್ಲಿ ಸೇರಿದ ಸಕಲ ಶರಣರಿಗೂ ನಮ್ಮ ನಮನಗಳು.

ಎಷ್ಟೋ ಶಾಸ್ತ್ರಗಳ ಮೂಲಕ ಬ್ರಹ್ಮ ಜ್ಞಾನವನ್ನು ಹೇಳಿದರು ಕೂಡಾ ತಿಳಿಯಲು ಆಗಿರಲಿಲ್ಲ. ನಾವು ಹೇಳುವುದೊಂದೆ ತಡ ಕೂಡಲೇ ತಿಳಿದು ಕಾಯವನ್ನು ಮತ್ತು ಮನವನ್ನು,

ಅರಿವೆಂಬ ಗುರುದೇವನ ದರುಶನಕ್ಕಾಗಿ ಅಣಿ ಮಾಡುವ ಪ್ರಯೋಗದಲ್ಲಿ ನಿರತರಾದ ತಮ್ಮೆಲ್ಲರನ್ನು ಪಡೆದ ನಾವೇ ಧನ್ಯರು ತಾಯಿ.

**ಕಾಲಕಣ್ಣಿಯ ಕಾಮಮ್ಮ :** ಚೆನ್ನಬಸವಣ್ಣ, ಬಸವರಸರಿಗೆ ಹಾಗೂ ಸಕಲ ಶರಣರಿಗೂ ಶರಣು ಶರಣಾರ್ಥಿ.

ತಾವು ಗುರುದೇವರು ಇದ್ದ ಅಂಗವು ವಾರಣಾಸಿಗಿಂತಲೂ ಅಧಿಕ ಎಂದು ಹೇಳಿದಿರಿ ಚೆನ್ನಬಸವಣ್ಣ, ದಯವಿಟ್ಟು ವಿವರಿಸಿ.

**ಚೆನ್ನಬಸವಣ್ಣ :** ಅಂಗವೆಂದರೆ ಸಾಮಾನ್ಯವಲ್ಲ, ಅದು ಈ ದೇಶದ್ದಾದರೇನು?

ಪರದೇಶದ್ದಾದರೇನು ? ಹೆಣ್ಣಾದರೇನು ಗಂಡಾದರೇನು? ಅರಿವು ಎಂಬ ಗುರುದೇವನು ವಾಸ ಮಾಡಿದ ಪುಣ್ಯ ಕ್ಷೇತ್ರ.

ಆ ಗುರುದೇವನನ್ನು ಪುರಾತನರು ಮಹಾದೇವನೆಂದು ಕರೆದಿದ್ದಾರೆ. ಸದಾ ಶಿವನೆಂದು ಸಾಕ್ಷಾತ್ ಪರಬ್ರಹ್ಮನೆಂದು ಕೂಡಾ ಕರೆದಿದ್ದಾರೆ. ಈ ಮಹಾದೇವನಿದ್ದ ಕ್ಷೇತ್ರವೇ ಸುಕ್ಷೇತ್ರ. ಇದು ಕಾಯವೆಂಬ ಕೈಲಾಸವು ಹೌದು.

ಮಹಾದೇವ ಕಾಯಕ್ಕೆ ಜನ್ಮ ನೀಡಿ ಅರಿವು ಎಂಬ ಗುರುದೇವನಾಗಿ ಕಾಯವನ್ನು ತನ್ನಂತೆ ಮಾಡಿಕೊಳ್ಳಲು ಕಾಯದಲ್ಲಿಯೇ ವಾಸ ಮಾಡಿದ್ದಾನೆ.

ತನ್ನನ್ನು ತಿಳಿಯಲು ಕಾಯದಲ್ಲಿಯೇ ಮನವನ್ನು ಸೃಷ್ಟಿ ಮಾಡಿದ್ದಾನೆ.

ಮನ ಮಹಾದೇವನಿಗೆ ಶರಣು ಹೋಗಿ, ತಾನು ಮಹಾದೇವಿಯಾಗಿ, ಮಹಾದೇವನೊಂದಿಗೆ ಕಾಯದಲ್ಲಿಯೇ ಸಂಸಾರ ಹೂಡಬೇಕಾಗಿತ್ತು. ಆದರೆ ಮನ ಮಹಾದೇವನೊಂದಿಗೆ ಸಂಗ ಮಾಡದೇ ಕಾಯದೊಂದಿಗೆ ಸಂಗ ಮಾಡಿದ ಕಾರಣ ಕಾಯ ಪಂಚ ಮಹಾ ಪಾತಕಿಯಾಗಿದೆ.

ಏಳನೇಯ ನರಕಕ್ಕೆ ಮನ ಕಾಯವನ್ನು ತಳ್ಳಿದೆ. ಸ್ವತಃ ಕೈಲಾಸವೇ ಆಗಬೇಕಾದ ಕಾಯ ಪಂಚಮಹಾಪಾತಕಕ್ಕೆ ಭಾಜನವಾಗಿದೆ.

ಮನ ಅರಿವನ್ನು ಅರಿಯದೇ ಆ ಅರಿವೆಂಬ ಗುರುದೇವನ ಸಂಗ ಮಾಡದಿದ್ದಕ್ಕಾಗಿ ಕಾಯಕ್ಕೆ ಈ ಅವಸ್ಥೆ ಒದಗಿದೆ.

**ಬೊಂತಾದೇವಿ :** ಮನ ಅರಿವಿನ ಸಂಗ ಮಾಡಲು ಏನು ಮಾಡಬೇಕು? ಯಾರ ಮೊರೆ ಹೋಗಬೇಕು ದಯವಿಟ್ಟು ಹೇಳಿ ಚೆನ್ನಬಸವಣ್ಣ.

**ಚೆನ್ನಬಸವಣ್ಣ :** ಹೊರಗಿರುವ ಯಾರ ಮೊರೆ ಹೋದರು ಇದು ಸಾಧ್ಯವಾಗದ ಕೆಲಸ. ಹೊರಗಿರುವ ಯಾವ ಜಗದ್ಗುರುವು ಕೂಡಾ ಮನವನ್ನು ಗುರುವಿನ ಸಂಗಕ್ಕೆ ಕರೆದೊಯ್ಯಲಾರ. ಹೊರಗಿರುವ ಗುರುದೇವರು ಕೂಡಾ ಕಾಯ ಉಳ್ಳವರೇ ಆಗಿದ್ದಾರೆ. ಕಾಯವುಳ್ಳವರು ಕಾಯಕ್ಕೆ ಯಾವ ಮಂತ್ರವನ್ನು ಬೋಧಿಸಿದರು ಕೂಡಾ ಕಾಯ ಮತ್ತು ಮನಕ್ಕೆ ಇದು ಸಾಧ್ಯವಾಗದ ಮಾತು.

**ಸತ್ಯಕ್ಕ :** ಅದು ಹೇಗೆ ಚೆನ್ನಬಸವಣ್ಣ? ತಾವು ಹೇಳಿದರೆ, ಬಸವಣ್ಣ ಪ್ರಭುದೇವರು ಹೇಳಿದರೆ ನಮಗೆ ತಿಳಿಯುತ್ತಿದೆಯಲ್ಲ, ಹೀಗಾಗಿ ನಾವು ತಮ್ಮನ್ನು ಗುರುಗಳೆಂದು ಒಪ್ಪಿಕೊಂಡಿದ್ದೇವೆ.

**ಚೆನ್ನಬಸವಣ್ಣ :** ತಾವು ಹಾಗೆ ಭಾವಿಸಬೇಡಿ ತಾಯಿ, ನಾವು ಹೇಳಿದರೆ ತಮಗೆ ತಿಳಿಯುತ್ತದೆ. ಹಾಗೆಯೆ ಈ ಮಾತುಗಳು ಜಗದ ಸಕಲ ಕಾಯಗಳಿಗೂ ತಿಳಿಯುತ್ತವೆ. ಏಕೆಂದರೆ ಇವು ಅರಿವಿನ ಮಾತು.

ಸಕಲ ಕಾಯಗಳಲ್ಲಿಯೂ ಅರಿವು ಎಂಬ ಗುರುದೇವ ಇರುವುದರಿಂದ ಅರಿವಿನ ಮಾತುಗಳನ್ನು ಅರಿವೆಂಬ ಗುರುದೇವನೆ ಕೇಳುತ್ತಾನೆ. ಹೀಗಾಗಿ ಯಾರು ಹೇಳಿದರೂ ತಿಳಿದಂತೆ ಭಾಸವಾಗುತ್ತದೆ. ಪುನಃ ಮನ ಕಾಯದೊಂದಿಗೆ ಸಂಗ ಮಾಡಿ, ಮನ ಹೇಳಿದಂತೆ ಕಾಯ

ಕೇಳುತ್ತದೆಯೇ ಹೊರತು ಅರಿವು ಎಂಬ ಗುರುದೇವ ಹೇಳಿದಂತೆ ಕಾಯ ಕೇಳುವುದಿಲ್ಲ.

ಅರಿವಿನ ಮಾತನ್ನು ಮನ ಕಾಯದೊಂದಿಗೆ ತಿರಸ್ಕರಿಸಿ, ತನ್ನ ಅಜ್ಞಾನವನ್ನು ಕಾಯದ ಮೂಲಕ ತೋರಿಸುತ್ತದೆ.

ಹೀಗಾಗಿ ಪ್ರತಿ ಕಾಯಕ್ಕೆ ಕಾಯವುಳ್ಳ ಗುರುವಿನ ಅವಶ್ಯಕತೆ ಇಲ್ಲ. ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಕಾಯ ಮತ್ತು ಮನ ಶರಣು ಹೋದಾಗ, ಸಂಪೂರ್ಣ ಶರಣಾಗತಿ ಆದಾಗ , ಅರಿವೆಂಬ ಗುರುದೇವ ಕಾಯ ಮತ್ತು ಮನವನ್ನು ತನ್ನಂತೆ ಮಾಡಿಕೊಳ್ಳುತ್ತಾನೆ.

ಆಗ ಕಾಯವನ್ನು ಆವರಿಸಿದ ಮನ ಮಹಾದೇವನಿಗೆ ಸತಿಯಾಗಿ, ಮಹಾದೇವಿ ಆಗುತ್ತಾಳೆ.

ಕಾಯ ತನಗೆ ಇಟ್ಟ ಅಜ್ಞಾನದ ಹೆಸರನ್ನು ಕಳೆದುಕೊಂಡು ಕೈಲಾಸವಾಗುತ್ತದೆ. ಮಹಾದೇವ ಮಹಾದೇವಿಯರಿದ್ದ ಕಾಯವೇ ಕೈಲಾಸ, ವಾರಣಾಸಿ, ಅಮೃತದ ದಿವ್ಯ ಕ್ಷೇತ್ರಕ್ಕಿಂತಲೂ ಅಧಿಕವೆಂದು ಕರೆಯಿಸಿಕೊಳ್ಳುತ್ತದೆ.

ಇಂದಿನ ಸಭೆಯನ್ನು ಇಲ್ಲಿಗೆ ಮುಕ್ತಾಯ ಮಾಡೋಣವೆಂದು ಹೇಳುತ್ತಾ,

ಸಭೆಗೆ ಮಂಗಲ ಹಾಡಿದರು.

ಸಕಲ ಶರಣರು ಅರಿವೆಂಬ ಗುರುದೇವನ ದಿವ್ಯ ಅಮೃತರಸವನ್ನು ಪಾನಮಾಡಿದ ಪರಮ ಸುಖದಲ್ಲಿ ತೇಲಾಡುತ್ತಾ ತಮ್ಮ ತಮ್ಮ ಮನೆಗೆ ನಡೆದರು.

## ಕಲ್ಲನ್ನು ಕಲ್ಲು ಎಂದು ನೋಡುವ ಕಣ್ಣು ಅರಿವಿನ ಕಣ್ಣು ಕೆತ್ತಿದ ಕಲ್ಲನ್ನು ದೇವರು ಎಂದು ನೋಡುವ ಕಣ್ಣು ಅಜ್ಞಾನದ ಕಣ್ಣು

ಸೂರ್ಯೋದಯ ಇನ್ನೂ ಆಗಿಲ್ಲ . ಶರಣರು ಮಹಾ ಮನೆಯಲ್ಲಿ ಬಸವಣ್ಣ ಚನ್ನಬಸವಣ್ಣ ಅವರ ನಿರೀಕ್ಷೆಯಲ್ಲಿದ್ದಾರೆ. ಬಸವಣ್ಣ ಚನ್ನಬಸವಣ್ಣ ವೇದಿಕೆಗೆ ಆಗಮಿಸಿ ಸಕಲ ಶರಣರಿಗೆ ಶರಣು ಶರಣಾರ್ಥಿ ಹೇಳಿ ಕೈ ಮುಗಿದು ಕುಳಿತುಕೊಳ್ಳುತ್ತಾರೆ.

**ಚನ್ನಬಸವಣ್ಣ:** ನಿನ್ನೆಯ ಸಂಜೆಯ ಸಭೆಯಲ್ಲಿ ನಾನು ದೇವರ ಬಗ್ಗೆ ಹೇಳಿದೆ. ಆ ವಿಷಯವನ್ನು ಇಂದು ಬಸವಣ್ಣನವರು ಮುಂದುವರಿಸುತ್ತಾರೆ.

**ಬಸವಣ್ಣ :** ಆಗಲಿ ಚನ್ನಬಸವಣ್ಣನವರೇ,

ದೇವರು ಎಂದರೆ ಕಾಯವುಳ್ಳವನು ಅಲ್ಲ. ಮನುಷ್ಯ ತಿಳಿದಂತೆ ಅವನು ಆಕಾಶದಲ್ಲಿ ಇಲ್ಲ ಪಾತಾಳದಲ್ಲಿಯೂ ಇಲ್ಲ. ದೇವರು ಎಂದರೆ ಬಯಲು. ಅದು ಎಲ್ಲೆಲ್ಲೂ ಇದೆ. ಕಣ್ಣಿಗೆ ಕಾಣುವ ಸಕಲ ವಸ್ತುಗಳನ್ನು ನಿರ್ಮಾಣ ಮಾಡಿ, ಅವೆಲ್ಲವುಗಳನ್ನು ಬಯಲು ತನ್ನ ಗರ್ಭದಲ್ಲಿಯೇ ಇಟ್ಟುಕೊಂಡಿದೆ. ಬಯಲು ಆಮ್ಲಜನಕವನ್ನು ಜಲಜನಕವನ್ನು ಸೃಷ್ಟಿ ಮಾಡಿ ತನ್ನ ಗರ್ಭದಲ್ಲಿ ಇಟ್ಟುಕೊಂಡು ತನಗೆ ಬೇಕಾದಾಗ ಅವೆರಡನ್ನೂ ಕೂಡಿಸಿ ತಾನು ಅದರಲ್ಲಿ ಬೆರೆತು ಜಲಕ್ಕೆ ಜನ್ಮ ನೀಡುತ್ತದೆ. ಆ ಜಲವೇ ಗಟ್ಟಿಗೊಂಡು ಭೂಮಿಯಾಯಿತು. ಭೂಮಿಯ ಗರ್ಭದಲ್ಲಿಯ ಖನಿಜವಾಯಿತು. ಚಿನ್ನ, ಬೆಳ್ಳಿ, ತಾಮ್ರ, ಕಂಚು ನಾನಾ ಧಾತುಗಳಾಯಿತು. ಜೀವ ಜಲ ಭೂಮಿಯ ಮೇಲೆ ಹರಿದು ಸಸ್ಯಕಾಶಿಯಾಯಿತು. ಗಿಡ ಮರ ಬಳ್ಳಿಯಾಯಿತು. ಆ ಜೀವ ಜಲವೇ ಪ್ರಾಣಿ ಪಶು ಪಕ್ಷಿಗಳಿಗೆ, ಕೀಟ, ಉರಗ, ಜಲಚರಗಳಿಗೆ ಜನ್ಮ ನೀಡಿತು. ಆ ಜೀವ ಜಲವೇ ತನುವನ್ನು ಸೃಷ್ಟಿಮಾಡಿ ಆ ತನುವಿನಲ್ಲಿಯೇ ಸಂಗಮವಾಗಿ ಅರಿವು ಎನ್ನುವ ಗುರುದೇವನಾಯಿತು. ಆ ಅರಿವಿನ ಬೆಳಕಿನಿಂದಲೇ ಮನವೆಂಬ ನೆರಳು ತನುವಿನಲ್ಲಿಯೇ ಜನ್ಮ ಪಡೆಯಿತು.

ಬಯಲುದೇವ ಬ್ರಹ್ಮಾಂಡದಲ್ಲಿ ಇದ್ದ ಸಕಲ ಜೀವರಾಶಿಗಳಿಗೂ ಜನ್ಮ ನೀಡಿ ಅವೆಲ್ಲವುಗಳನ್ನು ಸಹಜವಾಗಿಟ್ಟ. ಏಕೆಂದರೆ ಅವುಗಳಲ್ಲಿ ಮನವಿಲ್ಲ. ಅವು ತಮ್ಮನ್ನು ತಿಳಿಯವು; ಇತರರನ್ನು ತಿಳಿಯವು ; ಹೀಗಾಗಿ ಸಹಜವಾಗಿವೆ. ಆಹಾರ, ನಿದ್ರೆ, ಭಯ ಇದೆ. ಸೃಷ್ಟಿಗಾಗಿ ಮೈಥುನ ಕ್ರಿಯೆಯಲ್ಲಿ ತೊಡಗುತ್ತವೆ. ಅವುಗಳಿಗೆ ಮನವಿಲ್ಲ ಹಾಗೆಯೇ ಅರಿವು ಕೂಡ ಇಲ್ಲ.

ತನುವಿನಲ್ಲಿ ಅರಿವು ತನ್ಮಯವಾಗಿದೆ. ತನುವನ್ನು ಮನ ಆವರಿಸಿತು. ಸಾಕ್ಷಿಯಾಗಿ ಸಕಲವನ್ನು ನೋಡಬೇಕಾದ ಮನ ನೋಡಿದ ವಸ್ತುಗಳನ್ನು ತನುವಿನೊಂದಿಗೆ ಪಡೆದು ಸುಖಿಸಬೇಕೆಂಬ ಬಯಕೆಯನ್ನು ಮನ ತನುವಿನಲ್ಲಿ ಸೃಷ್ಟಿ

ಮಾಡಿತು. ಹಗಲಿರುಳೆನ್ನದೇ, ಮನದ ಕಾಯದ ಆಸೆಯು ಬಯಕೆಗಳನ್ನು ತೀರಿಸುವುದಕ್ಕಾಗಿಯೇ ಕಾಲ ವ್ಯಯ ಮಾಡಿಸುತ್ತದೆ. ಬಯಕೆ ಈಡೇರದಿದ್ದರೆ, ಮನ ತನುವಿನಲ್ಲಿ ತನ್ನದೇ ಆದ ದೇವರನ್ನು ಸೃಷ್ಟಿಮಾಡಿ ತನ್ನ ಬಯಕೆಗಳನ್ನು ಈಡೇರಿಸುದಕ್ಕಾಗಿ ಆ ದೇವರನ್ನು ಪ್ರಾರ್ಥಿಸುತ್ತದೆ. ಮಳೆ ಹೆಚ್ಚಾದರೂ ಪ್ರಾರ್ಥನೆ, ಮಳೆ ಆಗದಿದ್ದರೂ ದೇವರ ಪ್ರಾರ್ಥನೆ, ಚಿನ್ನಕ್ಕಾಗಿ ದೇವರ ಪ್ರಾರ್ಥನೆ, ಚಿನ್ನ ಸಿಗದಿದ್ದರೆ ದೇಹಕ್ಕೆ ಮನ ರಾಜನ ವೇಷ ತೊಡಿಸಿ ಯುದ್ಧ ಮಾಡಿ ಮತ್ತೊಬ್ಬ ರಾಜನನ್ನು ಸೈನಿಕರನ್ನು ಕೊಂದು ಚಿನ್ನದ ಕಿರೀಟ ಧರಿಸಿ ಮೆರೆಯುತ್ತದೆ.

ಯುದ್ಧ ಗೆದ್ದ ತೃಪ್ತಿಗಾಗಿ ಪ್ರಾರ್ಥಿಸಿದ ದೇವರಿಗೆ ಆಲಯ ಕಟ್ಟಿಸಿ, ಹಗಲಿರುಳೆನ್ನದೇ ಕಾಯದ ಆಯುಷ್ಯವನ್ನು ಪೂಜಿಸುವ ಮೂಲಕ ವ್ಯರ್ಥ ಕಳೆಯುತ್ತದೆ. ಕಾಯದಲ್ಲಿಯೇ ಇದ್ದ ಅರಿವು ಎನ್ನುವ ಬಯಲು ದೇವರು, ಕಾಯಕ್ಕೂ ಮನಕ್ಕೂ 'ನೀನು ಪೂಜಿಸುವ ದೇವರು ದೇವರಲ್ಲ 'ಎಂದು ಹೇಳಿದರೂ. ಕಾಯ ಮತ್ತು ಮನ ಕಾಯದೊಳಗೆ ಇದ್ದ ಅರಿವೆಂಬ' 'ಬಯಲ ದೇವರ ' ಮಾತು ಕೇಳಲು, ಆತ ಹೇಳಿದಂತೆ ಕೇಳಿ ಕಟಿಬದ್ಧನಾಗಿ ನಡೆಯುವುದಕ್ಕೆ ಮನಕ್ಕೆ ಸಾಧ್ಯವಾಗುವುದೇ ಇಲ್ಲ.

ಕಾಯವನ್ನು ನಿರ್ಮಾಣ ಮಾಡಿ ಕಾಯದಲ್ಲಿಯೇ ಸಂಗಮವಾಗಿ ತನ್ನನ್ನು ಮತ್ತು ಕಾಯವನ್ನು ತಿಳಿದು ನಡೆಯುವುದಕ್ಕಾಗಿ ಮನವನ್ನು ಸೃಷ್ಟಿಮಾಡಿದರೆ, ಮನ ದೇವರ ಸಂಗ ಮಾಡದೇ ಕಾಯದ ಸಂಗ ಮಾಡಿ ತನಗೆ ಮತ್ತು ಕಾಯಕ್ಕೆ ಜನ್ಮ ಕೊಟ್ಟ ಕಾಯದಲ್ಲಿಯೇ ಇದ್ದ ದೇವರನ್ನು ಮನ ಮತ್ತು ಕಾಯ ಮರೆತು ಹೋಗಿದೆ.

ಹೀಗಾಗಿ ಮನ ಮತ್ತು ಕಾಯ ದೇವರನ್ನು ಅಲ್ಲಗಳೆಯುತ್ತಿಲ್ಲ . ಮನ ಮತ್ತು ಕಾಯದಿಂದ ಮಾಡಿದ ದೇವರನ್ನೇ ದೇವರೆಂದು ಪ್ರತಿಪಾದಿಸುತ್ತದೆ. ಜ್ಞಾನಿ ಇದೆಲ್ಲವನ್ನು ತಿಳಿದು ಕಲ್ಲು ದೇವರು ದೇವರಲ್ಲ ಎಂದು ಹೇಳಿದರೆ, ಕಲ್ಲನ್ನೇ ದೇವರೆಂದು ಪೂಜಿಸುವ ಕಾಯಗಳು ಕಲ್ಲಲ್ಲೇ ಹೊಡೆದು ಜ್ಞಾನಿಯನ್ನು ಕೊಂದು ಹಾಕುತ್ತಾರೆ.

ಕಲ್ಲನ್ನೇ ದೇವರೆಂದು ತಿಳಿದು ಕಾಶಿ, ಶ್ರೀಶೈಲ, ಕೇದಾರ, ಉಜ್ಜಯಿನಿ, ತಿರುಪತಿ, ವೈಷ್ಣವಿ ಹೀಗೆ ಬಹುದೂರ ಕ್ರಮಿಸಿ ಕಲ್ಲನ್ನೇ ನೋಡಿ ದೇವರೆಂದು ತಿಳಿದು ಸಂಭ್ರಮಿಸುತ್ತದೆ. ಕಾಯದಿಂದಲೇ ಮಾಡಿದ ದೇವರು ದೇವರಲ್ಲವೆಂದು ಕಾಯಗಳಿಗೆ ಹೊಳೆಯುವುದೇ ಇಲ್ಲ. ಕಾಯಕ್ಕೆ ಜನ್ಮಕೊಟ್ಟು ಕಾಯದಲ್ಲಿಯೇ ಇದ್ದು ಕಾಯವನ್ನು ಕೈ ಹಿಡಿದು ಮುನ್ನಡೆಸುವ ದೇವರು ದೇವರಲ್ಲವೆಂದು ಮನ ಮತ್ತು ಕಾಯಗಳೆರಡೂ ತಿಳಿದಿವೆ.

**ಸತ್ಯಕ್ಕ:** ಕಾಯದಲ್ಲಿ ದೇವರು ಇದ್ದಾನೆ ಎಂದು ಮನ ಮತ್ತು ಕಾಯ ತಿಳಿಯುವ ಬಗೆ ಹೇಗೆ ಬಸವರಸ ?

**ಬಸವಣ್ಣ:** ಶರಣೆ ಸತ್ಯಕ್ಕ , ಸುಂದರವಾದ ಪ್ರಶ್ನೆಯನ್ನೇ ಕೇಳಿದ್ದಾಳೆ. ದೇವರು ಕಾಣುವ ಕಣ್ಣಿನಲ್ಲಿದ್ದು ಕಣ್ಣಿಗೆ ಸತ್ಯ ನೋಡುವ ಶಕ್ತಿಯ ದೃಶ್ಯವಾಗಿದ್ದಾನೆ.

**ಸತ್ಯಕ್ಕ:** ಅದು ಹೇಗೆ ಬಸವರಸ ? ದೃಶ್ಯದಲ್ಲಿಯೇ ದೇವರಿದ್ದಾನೆ ಎನ್ನುವಿರಿ, ಆದರೆ ಆ ದೃಶ್ಯದಿಂದಲೇ ಕಣ್ಣು ಕಲ್ಲಿನಿಂದ ಆದ ದೇವರನ್ನು ನೋಡುವುದಲ್ಲ?

**ಬಸವಣ್ಣ:** ನಿಮ್ಮ ಪ್ರಶ್ನೆಯಲ್ಲಿ ಕೇಳುವ ಸತ್ಯ, ನೋಡುವ ಆಸಕ್ತಿ ಇದೆ. ನಿಧಾನವಾಗಿ ಸಕಲ ಶರಣರು ಆಲಿಸಿ .

ಕಲ್ಲನ್ನು ನೋಡಿದ ಕಣ್ಣು ಕಲ್ಲು ಎಂದು ನೋಡಿ ನಿರ್ಧರಿಸುತ್ತದೆ. ಆಗ ಕಾಯ ಸಹಜವಾಗಿಯೇ ಇರುತ್ತದೆ. ಕಲ್ಲು ಕೆತ್ತುವುದನ್ನು ನೋಡಿದರು ಕೂಡ ಕಣ್ಣಿನಲ್ಲಿ ಯಾವುದೇ ಬದಲಾವಣೆಯಾಗುವುದಿಲ್ಲ, ಕಲ್ಲು ಮೂರ್ತಿಯಾಗಿಸಿ, ಆ ಕಲ್ಲಿನಿಂದಲೇ ಆಲಯ ನಿರ್ಮಾಣ ಮಾಡಿ, ಆ ಕಲ್ಲಿನಿಂದಲೇ ಗರ್ಭ ಗುಡಿ ನಿರ್ಮಾಣ ಮಾಡಿ, ಆ ಕಲ್ಲಿನಿಂದಲೇ ಗೋಪುರ ನಿರ್ಮಾಣ ಮಾಡಿ, ಕಟೆದ ಕಲ್ಲನ್ನು ಒಂಬತ್ತು ಧಾನ್ಯಗಳಲ್ಲಿ ಇಟ್ಟು ಮನ ತನುವಿಗೆ ಪ್ರಾಣ ಪ್ರತಿಷ್ಠಾನದ ನೆಪ ಹೇಳಿ ಸ್ಥಾಪನೆ ಮಾಡಿದಾಗ ಅದು ದೇವರಾಗುತ್ತದೆ.

ಕಣ್ಣು ತನುವಿನೊಂದಿಗೆ ಮನೋಮಯವಾದ ದೃಶ್ಯದ ಮೂಲಕ ನೋಡಿ ದೇವರೆಂದು ಕಾಯಕ್ಕೆ ಕೈ ಮುಗಿಯಲು ಆದೇಶ ನೀಡುತ್ತದೆ.

ಕಲ್ಲು ನೋಡಿ ಸಹಜವಾಗಿದ್ದ ಕಣ್ಣಿನ ದೃಶ್ಯ ಕಣ್ಣಿನಲ್ಲಿಯೇ ಇದೆ. ಇದು ಅರಿವಿನ ದೃಶ್ಯ; ಇದು ಗುರುದೇವನ ದೃಶ್ಯ. ಈ ದೃಶ್ಯದಲ್ಲಿ ಬದಲಾವಣೆ ಆಗುವುದಿಲ್ಲ, ಕಲ್ಲು ಬದಲಾಗಿ ಮೂರ್ತಿಯಾದರೂ ಕೂಡ ಅದು ಕಲ್ಲೇ ಆಗಿದೆ. ಹೀಗಾಗಿ ಕಲ್ಲು ಕೆತ್ತಿದರೂ ಕೂಡ ಕಲ್ಲು; ಕೆತ್ತದಿದ್ದರೂ ಕೂಡ ಕಲ್ಲು .

ತನು ಮತ್ತು ಮನಕ್ಕೆ ಕೆತ್ತಿದ ಕಲ್ಲು ದೇವರಾದರೆ, ಅರಿವಿಗೆ ಕೆತ್ತಿದ ಕಲ್ಲು ಕೂಡ ಕಲ್ಲೇ ಆಗಿ ಕಾಣುತ್ತದೆ.

**ಸತ್ಯಕ್ಕ :** ನಮ್ಮೆಲ್ಲರಿಗೂ ನಿಮ್ಮ ಮಾತು ಕೇಳಿ ರೋಮಾಂಚನವಾಯಿತು ಬಸವರಸ. ಮನೋಮಯವಾದ ದೃಶ್ಯದಿಂದ ವಸ್ತುವನ್ನು ನೋಡದೆ, ಅರಿವಿನ ದೃಶ್ಯದಿಂದ ನೋಡಿದಾಗ ವಸ್ತುವಿನ ಸತ್ಯ ಕಾಣುತ್ತದೆ ಎಂದಂತಾಯಿತ್ತಲ್ಲ ಬಸವರಸ ! ದಯವಿಟ್ಟು ಮತ್ತೊಂದು ಉದಾಹರಣೆ ಯನ್ನು ಕೊಡುವಿರಾ?

**ಬಸವಣ್ಣ:** ಆಗಲಿ ತಾಯಿ .

ಮನೋಮಯವಾದ ದೃಶ್ಯದಿಂದ ಕಾಯವನ್ನು ನೋಡಿದರೆ, ನೋಡಿದ ಕಾಯ ಹೆಣ್ಣಾಗಿ ಇಲ್ಲ ಗಂಡಾಗಿ ಕಾಣುತ್ತದೆ. ನೋಡುವ ಕಣ್ಣು ಹೆಣ್ಣು ಅಲ್ಲ ಗಂಡೂ ಅಲ್ಲ. ಆದರೂ ಮನೋಮಯ ದೃಶ್ಯದಿಂದ ಹೆಣ್ಣನ್ನು ನೋಡಿ ಕಾಯದಲ್ಲಿ ಮನ ಉದ್ರೇಕ ಸೃಷ್ಟಿ ಮಾಡಿ, ಹಾದರಕ್ಕೆ ಒಳಗಾಗುತ್ತದೆ. ಏಕೆಂದರೆ ದೃಶ್ಯ ಗಂಡು ಅಲ್ಲದಿದ್ದರೂ , ಮನೋಮಯ ದೃಶ್ಯ ತಾನು ಗಂಡು ಎನ್ನುವ ಅಜ್ಞಾನ ಆಮಂತ್ರಣ ಮಾಡಿಕೊಂಡು ಹೆಣ್ಣನ್ನು ನೋಡಿ ಹಾದರದಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತದೆ. ಪುನಃ ಕಾಯದೊಂದಿಗೆ ಅಕ್ಕ ತಂಗಿ ಎಂದು ಸೋದರಭಾವದಿಂದ ನುಡಿಯುತ್ತದೆ. ಮನೋಮಯವಾದ ದೃಶ್ಯಕ್ಕೆ ನೋಡಿದಂತೆ ನುಡಿಯಲು ಸಾಧ್ಯವಾಗಲಿಲ್ಲ, ಈ ಎರಡೂ ಅಜ್ಞಾನವನ್ನು ಅರಿವು ಎನ್ನುವ ಗುರುದೇವನ

ದೃಶ್ಯ ನೋಡಿ ನೀನು ಸರಿಯಾಗಿ ನೋಡಲಿಲ್ಲವೆಂದು ಮನೋಮಯ ದೃಶ್ಯಕ್ಕೆ ತನ್ನ ಅರಿವಿನ ದೃಶ್ಯದ ಮೂಲಕ ಪಾಠ ಮಾಡುತ್ತಾನೆ.

**ಸತ್ಯಕ್ಕ** : ಇದನ್ನು ಮತ್ತಷ್ಟು ವಿವರಿಸಿ ಹೇಳಿ ಬಸವರಸ.

**ಬಸವಣ್ಣ:** ಆಗಲಿ ತಾಯಿ .

ಮನೋಮಯ ದೃಶ್ಯ ಕಾಯವನ್ನು ನೋಡಿ ತಾನು ಹೆಣ್ಣೆಂದು ತಿಳಿದು ಹಾದರದ ಸುಖದಲ್ಲಿ ಮಗ್ನವಾಗುತ್ತದೆ. ಆದರೂ ಅದಕ್ಕೆ ತಾನು ನೋಡಿದ್ದು ತಪ್ಪು ಎಂದು ಹೇಗೆ ತಿಳಿಯುತ್ತದೆ ? ತನಗೆ ತಾನೇ ತಿಳಿಯಲಿಲ್ಲ, ಏಕೆಂದರೆ ದೃಶ್ಯ ಹಾದರದ ಸುಖದಲ್ಲಿ ಮಗ್ನವಾಗಿದೆ. ಅರಿವೆಂಬ ಗುರುದೇವನ ದೃಶ್ಯ ಅದು ನಿನ್ನಂತೆಯೇ ಇರುವ ಕಾಯ. ಆ ಕಾಯದ ಚರ್ಮ ನಿನ್ನ ಕಾಯದ ಚರ್ಮ ಚರ್ಮವೇ ಆಗಿದೆ. ಆ ಕಾಯದಲ್ಲಿರುವ ಪದಾರ್ಥ ಮತ್ತು ನಿನ್ನ ಕಾಯದಲ್ಲಿರುವ ಪದಾರ್ಥ ಒಂದೇ ಆಗಿರುವಾಗ ಆ ಚರ್ಮ ಹೆಣ್ಣು ಹೇಗೆ ? ನಿನ್ನ ಚರ್ಮ ಗಂಡು ಹೇಗೆ ?

ಆ ಕಾಯದಲ್ಲಿರುವ ರಕ್ತ, ಮೂಳೆ, ಮಾಂಸ, ಮಜ್ಜ, ಮೇದಸ್ಸು , ನಿನ್ನ ಕಾಯದಲ್ಲಿಯೂ ಕೂಡ ಇರುವುದರಿಂದ ಆ ಕಾಯ ಹೆಣ್ಣಲ್ಲ, ನೋಡುವ ನಿನ್ನ ಕಾಯ ಕೂಡ ಗಂಡಲ್ಲ . ಎರಡೂ ಕಾಯಗಳು ಕೂಡ ಕಾಯಗಳೇ ಆಗಿವೆ .

ಹೀಗಾಗಿ ನಿನ್ನನ್ನು ನೀನು ಗಂಡು ಎಂದು ತಪ್ಪು ತಿಳಿದುಕೊಂಡು , ನೀನು ಹೆಣ್ಣು ಎಂದು ನೋಡಿರುವುದರಿಂದ ನಿನ್ನ ಕಾಯದಲ್ಲಿ ಅಜ್ಞಾನದ ಕಾಮದ ಉದ್ರೇಕ ಸೃಷ್ಟಿಯಾಯಿತು. ಹೀಗಾಗಿ ನೀನು ತಪ್ಪು ನೋಡಿದೆ ಎಂದು ಮನೋಮಯ ದೃಶ್ಯಕ್ಕೆ 'ಅರಿವು ' ಎಂಬ ಗುರುದೇವನ ದೃಶ್ಯ ಪಾಠ ಮಾಡುತ್ತದೆ.

ತಪ್ಪು ನೋಡಿದ್ದಲ್ಲದೇ ಮನೋಮಯವಾದ ದೃಶ್ಯ ಬಾಯಿಗೆ ಹರಿದು ತಪ್ಪು ನುಡಿಯುವಂತೆ ಮಾಡುತ್ತದೆ. ನೋಡಿದಂತೆ ನುಡಿಯಲಿಲ್ಲ ಎನ್ನುವ ತಪ್ಪು ನುಡಿದಂತೆ ನೋಡಲಿಲ್ಲ ಎನ್ನುವ ತಪ್ಪು ಈ ಎರಡೂ ತಪ್ಪುಗಳನ್ನು 'ಅರಿವು 'ಎಂಬ ಗುರುದೇವ ಕಾಯಕದಲ್ಲಿಯೇ ಇಟ್ಟು ಮತ್ತೇ ಮತ್ತೇ ನೆನಪಿಸಿ, ಮನವನ್ನು ಕಾಯವನ್ನು ನಾನು ತಪ್ಪು ನೋಡಿದೆ ತಪ್ಪು ನೋಡಬಾರದಿತ್ತು ಎಂದು, ನಾನು ತಪ್ಪು ನುಡಿದೆ ನೋಡಿದಂತೆ ನುಡಿಯಲಿಲ್ಲ ಎಂದು . ನುಡಿದಂತೆ ನೋಡಲು ನನಗೆ ಸಾಧ್ಯವಾಗಲಿಲ್ಲವಲ್ಲ ಎಂದು, ನೆನಪಾದಗೊಮ್ಮೆ ಕಾಯ ದುಃಖಕ್ಕೆ ಒಳಗಾಗುವಂತೆ ಮಾಡುತ್ತದೆ. ಇದೆಲ್ಲ ಕಣ್ಣಲ್ಲಿ ದೃಶ್ಯವಾಗಿ ಸಂಗಮವಾದ ಅರಿವೆಂಬ ಗುರುದೇವನ ಕೆಲಸ.

**ಅಕ್ಕಮ್ಮ:** ನನ್ನಯ್ಯ ಎಂತಹ ಅದ್ಭುತವಾದ ಸೂತ್ರವನ್ನು ನಮಗೆ ಹೇಳಿಕೊಟ್ಟಿರಿ ಬಸವರಸ; ಶರಣಕುಲ ಧನ್ಯವಾಯಿತು .

**ಬಸವಣ್ಣ:** ಇದೆಲ್ಲ ತಮ್ಮ ಆಶೀರ್ವಾದದಿಂದಲೇ ಸಾಧ್ಯವಾಯಿತು ಅಕ್ಕ . ಎಂದು ಹೇಳುತ್ತ ಸಕಲ ಶರಣರಿಗೂ ಶರಣು ಹೇಳಿ ,

ಸಭೆಗೆ ಮಂಗಲ ಹಾಡಿದರು .

## ಕಾಯ, ಮೂರು ಕಣ್ಣುಳ್ಳ ಮುಕ್ಕಣ್ಣ

ಇನ್ನೂ ಸೂರ್ಯಾಸ್ತವಾಗಿಲ್ಲ ಶರಣರು ಮಹಾ ಮನೆಯಲ್ಲಿ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡಿದ್ದಾರೆ. ಬಸವಣ್ಣ ಚನ್ನಬಸವಣ್ಣ ಸಕಲ ಶರಣರಿಗೂ ಕೈ ಮುಗಿದು ಶರಣು ಶರಣಾರ್ಥಿ ಹೇಳಿ ಕುಳಿತುಕೊಳ್ಳುತ್ತಾರೆ.

**ಅಕ್ಕಮ್ಮ:** ಬೆಳಗಿನ ಸಭೆಯಲ್ಲಿ 'ದೇವರು ' ಹೊರಗಿಲ್ಲ ಕಾಯದಲ್ಲಿಯೇ ಸಂಗಮವಾಗಿ ಕಾಯಕ್ಕೂ ಮನಕ್ಕೂ ಅರಿವಿನ ಪಾಠ ಮಾಡುವ ದೇವರೇ ದೇವರು ಎಂದು ನಮ್ಮೆಲ್ಲರಿಗೂ ತಿಳಿಯುವಂತೆ ಹೇಳಿದಿರಿ ಬಸವಣ್ಣ. 'ಬಯಲು ದೇವರು 'ಎಂಬುದನ್ನು ಮತ್ತಷ್ಟು ವಿವರವಾಗಿ ಹೇಳಿ ಬಸವಣ್ಣ.

**ಬಸವಣ್ಣ :** ಆಗಲಿ ಅಕ್ಕ . ಕಲ್ಲಲ್ಲಿ ಬಯಲು ಸಂಗಮವಾಗಿರುವುದರಿಂದ ಕಲ್ಲ ಒಳ ಹೊರಗೂ ಬಯಲು ಇರುವುದರಿಂದ ಕಲ್ಲು ಅದು ಗಟ್ಟಿಯಾಗಿದೆ.

'ಬಯಲು' ಗಿಡಮರಗಳಲ್ಲಿ ಬಚ್ಚಿಟ್ಟುಕೊಂಡಿರುವುದರಿಂದ ಹೂವು ಹಣ್ಣು ಕಾಯಿ ಬಿಟ್ಟು ಬೀಜದಲ್ಲಿ ತನ್ನ ಸರ್ವಸ್ವವನ್ನೇ ತುಂಬಿ ಮತ್ತೆ ಹೆಮ್ಮರವಾಗುವ ಕಾಯಕದಲ್ಲಿ ಬಯಲು ತೊಡಗಿದೆ.

ಕಾಯದಲ್ಲಿ 'ಬಯಲು' ತನ್ನನ್ನು ತಿಳಿಯುವುದಕ್ಕಾಗಿ ಮನೋಕಾಯಕ್ಕೆ ಜನ್ಮ ನೀಡಿ ಕಾಯದಲ್ಲಿ ಬಯಲು ಅಕಾಯವಾಗಿ ಸಂಗಮವಾಗಿದೆ.

ಬಯಲು ಕಾಯದಲ್ಲಿ ಜೀವಕ್ಕೆ ಜೀವವಾಗಿದೆ. ಪ್ರಾಣಕ್ಕೆ ಪ್ರಾಣವಾಗಿದೆ. ಕಿವಿಯಲ್ಲಿ ಕಿವಿಯಾಗಿದೆ. ಮೂಗಿನಲ್ಲಿ ಮೂಗಾಗಿದೆ. ಬಯಲು ಕಣ್ಣಲ್ಲಿ ಕಣ್ಣಾಗಿ ಸಂಗಮವಾಗಿದೆ. ಚರ್ಮದಲ್ಲಿ ಚರ್ಮವಾಗಿ ಸಂಗಮವಾಗಿದೆ. ನಾಲಿಗೆಯಲ್ಲಿ ನಾಲಿಗೆಯಾಗಿ ಸಂಗಮವಾಗಿದೆ. ಭಾವದಲ್ಲಿ ನಿರ್ಭಾವವಾಗಿ ಸಂಗಮವಾಗಿದೆ. ಸಾತ್ವಿಕ, ರಾಜಸ, ತಾಮಸ, ಗುಣಗಳಲ್ಲಿ ನಿರ್ಗುಣಿಯಾಗಿ ಸಂಗಮವಾಗಿದೆ.

ಕಣ್ಣಿನೊಳಗೆ ಕಣ್ಣಿದ್ದರೂ, ಕಣ್ಣೊಳಗಣ ಕಣ್ಣಿನಿಂದ ನೋಡಲು ಕಣ್ಣಿಗೆ ಸಾಧ್ಯವಾಗುತ್ತಿಲ್ಲ . ಅರಿವಿನ ದರುಶನ ಮನಕ್ಕೆ ಸಾಧ್ಯವಾಗದ ಹೊರತು ಕಣ್ಣೊಳಗಣ ಒಳ ಕಣ್ಣಿನ ಮೂಲಕ ನೋಡಲು ಮನೋಮಯವಾದ ದೃಶ್ಯಕ್ಕೆ ಸಾಧ್ಯವಾಗುವುದಿಲ್ಲ . ಅಜ್ಞಾನದ ದೃಶ್ಯವನ್ನು ಅರಿವಿನ ದೃಶ್ಯದ ಮೂಲಕ ನೋಡಲು ಮಾತ್ರ ಸಾಧ್ಯವೇ ಹೊರತು ಅಜ್ಞಾನದ ದೃಶ್ಯ ತನಗೆ ತಾನೇ ಅರಿವಿನ ದೃಶ್ಯವಾಗಲು ಅರಿಯದು.

ಹೀಗಾಗಿ ಪೂರ್ವಜರು ಮನ್ಮಥನನ್ನು ಶಿವನ ಮೂರನೇ ಕಣ್ಣಿನ ಮೂಲಕ ಸುಡುವ ದೃಶ್ಯದ ಅರಿವಿನ ಕಥೆಯನ್ನು ಹೆಣೆದಿದ್ದಾರೆ. ಅದು ಅರಿವಿಗೆ ಸಂಬಂಧ ಪಟ್ಟ ಕಥೆಯಾದರೂ ಕೂಡ ಮನ ತನಗೆ ಬೇಕಾದಂತೆ ತನುವಿನಲ್ಲಿ ಸಂಗ್ರಹ ಮಾಡಿಕೊಂಡು ಮತ್ತೊಂದು ಕಾಯಕ್ಕೆ ಕಥೆ ಹೇಳುತ್ತದೆಯೇ ಹೊರತು, ತನ್ನದೇ ಆದ ಅರಿವಿನ

ಕಣ್ಣಿನ ಮೂಲಕ ಮರೆವಿನ ಕಣ್ಣನ್ನು ಹೇಗೆ ಸುಟ್ಟುಕೊಳ್ಳಬೇಕು ಎಂಬುದು ಮನಕ್ಕೆ ಹೊಳೆಯುವುದೇ ಇಲ್ಲ .

ತನ್ನ ಅಜ್ಞಾನದ ಬೇಡವಾದ ಕಣ್ಣನ್ನು ಕಣ್ಣಪ್ಪ ಶಿವನಿಗೆ ಅರ್ಪಿಸುವ ಅರಿವಿನ ಕಥೆ ಇದೆ. ಈ ಅರಿವಿನ ಕಥೆಯನ್ನು ಕೂಡ ಮನ ತನಗೆ ಬೇಕಾದಂತೆ ಸಂಗ್ರಹ ಮಾಡಿಕೊಂಡು ತನುವಿನಲ್ಲಿ ಇಟ್ಟುಕೊಂಡಿದೆ ಹೊರತು, ತನ್ನ ಅಜ್ಞಾನದ ಕಣ್ಣನ್ನು ತನ್ನದೇ ಆದ ಅರಿವಿನ ಶಿವನ ಕಣ್ಣಿಗೆ ಅರ್ಪಿಸಲು ಮನಕ್ಕೆ ಸಾಧ್ಯವಾಗುತ್ತಿಲ್ಲ.

**ಬಸವಣ್ಣ :** ಬಸರೆಯ ಬೀಜದಲ್ಲಿ ಬೃಹದಾಕಾರವಾದ ಮರ ಹೇಗೆ ಬಚ್ಚಿಟ್ಟುಕೊಂಡಿದೆಯೋ ಹಾಗೆಯೇ ಜೀವಜಲದಲ್ಲಿ ಇಡೀ ಬ್ರಹ್ಮಾಂಡವೇ ಬಚ್ಚಿಟ್ಟುಕೊಂಡಿದೆ. ಅದು ಬಯಲ ಬೀಜ .

ತನುವಿನಲ್ಲಿ ಬಯಲ ಬೀಜ ಜೀವಜಲಬಿಂದುವಾಗಿ ಬಚ್ಚಿಟ್ಟುಕೊಂಡು ತನುವಿನ ಮುಖಾಂತರ ತನುವಾಗಿ ಹೊರಬಂದಿದೆ .

ಆ ತನುವಿನಲ್ಲಿಯೇ ಬ್ರಹ್ಮಾಂಡವನ್ನು ಇಟ್ಟು ಹೊಲಿದುಕೊಂಡು ಬಯಲದೇವ ಆ ತನುವಿನಲ್ಲಿಯೇ ಬಚ್ಚಿಟ್ಟುಕೊಂಡು  ಆ ತನುವಿನಲ್ಲಿಯೇ ಬಂಧಿಯಾದ ತಂದೆ ಆತ.

ಇಲ್ಲದ ಕಂದನನ್ನು ಆ ತನುವಿನಲ್ಲಿಯೇ ಸೃಷ್ಟಿ ಮಾಡಿದ ತಂದೆ ಆತ. ಆತನಿಗೆ ಮನವೆಂಬ ನಾನು ಕಂದನಾಗಿದ್ದೇನೆ.

ಬಯಲ ಬೀಜದ ಗರ್ಭದಲ್ಲಿಯೇ ತಂದೆಯೂ ಇರುವನು ; ಆತನ ನೆರಳಾಗಿ ಮನವೆಂಬ ಕಂದನಾದ ನಾನು ಕೂಡಾ ಇರುವೆನು . ನನಗೂ ತಂದೆಗೂ ಅವಿನಾಭಾವ ಸಂಬಂಧ.

ತಂದೆ ತಾಯಿ ತನುವಿಗೆ ಜನ್ಮ ಕೊಟ್ಟರೇ ಹೊರತು ತನುವಿನಲ್ಲಿ ತನ್ಮಯವಾದ ಅರಿವಿನ ತಂದೆಗೆ ಮತ್ತು ಆತನನ್ನು ತಿಳಿಯುವ ಮನವೆಂಬ ನನಗೆ ಜನ್ಮ ಕೊಡಲಿಲ್ಲ . ನನ್ನ ತಂದೆ ನನಗೂ ತಂದೆ ! ನನ್ನ ತನುವಿಗೆ ಜನ್ಮ ಕೊಟ್ಟ ನನ್ನ ತಂದೆ ತಾಯಿಗಳಿಗೆಯೂ ತಂದೆ ! ಅಷ್ಟೇ ಏಕೆ ಇಡೀ ಬ್ರಹ್ಮಾಂಡದಲ್ಲಿರುವ ಸಕಲ ತನು ಮನಗಳಿಗೂ ತಂದೆಯಾಗಿದ್ದಾನೆ ಬಯಲ ತಂದೆಯೇ ಆ ಬಯಲ ದೇವರು ತನುವಿನಲ್ಲಿ ಅರಿವಿನ ತಂದೆಯಾಗಿ ಸಂಗಮವಾಗಿದ್ದಾನೆ .

ತಂದೆ ನೀನು , ತಾಯಿ ನೀನು
ಬಂಧು ನೀನು , ಬಳಗ  ನೀನು
ನೀನಿಲ್ಲದೆ ಮತ್ತಾರೂ ಇಲ್ಲವಯ್ಯಾ
ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು, ನೀರಲ್ಲಾದರೂ ಅದ್ದು ನಿನ್ನ ಧರ್ಮ.

**ವರದ ಸಂಕಣ್ಣ :** ಹಿರಿಯರು , ಜನ್ಮ ಕೊಟ್ಟ ತಂದೆ ತಾಯಿಗಳೇ ದೇವರೆಂದು ಹೇಳುತ್ತಾರಲ್ಲ , ಆ ದೇವನು ಬಯಲುದೇವ ಆಗಿರುವನೇ ಹೇಗೆ ?

**ಬಸವಣ್ಣ :** ಇದು ಲೋಕದ ಮಾತು. ಸಾವಿರಾರು ವರ್ಷಗಳಿಂದ ನಡೆಯಲ್ಲಿ ಬಂದ ಮಾತು. ಅನುಭವಕ್ಕೆ ಬಾರದ ವಿನಃ , ಜನ್ಮ ಕೊಟ್ಟ ತಂದೆ ತಾಯಿಗಳೇ ದೇವರೆಂದು ಮನ ತನುವಿನ ಮೂಲಕ ಸಂಪ್ರದಾಯದ ಮಾತನ್ನು ಆಡಿಸುತ್ತದೆ. ಆದರೆ, ತನ್ನ ಸುಖಕ್ಕೆ ತಂದೆ ತಾಯಿಗಳು ಅಡ್ಡಿಪಡಿಸಿದಾಗ ಮನ, ಕೊಲೆ ಮಾಡುವುದಕ್ಕೆ ತನುವಿನ ಮೂಲಕ ಸಿದ್ಧಗೊಳ್ಳುತ್ತದೆ. ತನುವಿನಲ್ಲಿಯೇ ತನ್ಮಯವಾದ ಅರಿವಿನ ತಂದೆಗೆ ಎಲ್ಲಿಯವರೆಗೆ ಮನ ಕಂದನಾಗುವುದಿಲ್ಲವೋ ಅಲ್ಲಿಯವರೆಗೆ ಮನ ತನಗೆ ಅಡ್ಡಿಪಡಿಸಿದ ಯಾವ ತನುವಿನೊಂದಿಗೂ ಸಂಬಂಧ ಬೆಳೆಸುವುದಿಲ್ಲ.

**ಸಂಕಣ್ಣ :** ಹಾಗಾದರೆ ಸಂಬಂಧಗಳು ಸುಳ್ಳು ಸಂಬಂಧಗಳೇ ಬಸವರಸ?

**ಬಸವಣ್ಣ :** ಮನಸ್ಸು ಮತ್ತೊಂದು ತನುವಿನೊಂದಿಗೆ ಭಾವದಿಂದ ಸಂಬಂಧ ಬೆಳೆಸುತ್ತದೆ. ಹೀಗೆ ಮಾಡುವ ಭಾವದಲ್ಲಿ ತನಗೆ ಲಾಭವಿದ್ದರೆ ಮಾತ್ರ ಸ್ನೇಹ ಮಾಡುತ್ತದೆ.

**ಸಂಕಣ್ಣ :** ಅದು ಹೇಗೆ ಬಸವಣ್ಣ ?

**ಬಸವಣ್ಣ:** 0ತಂದೆ ತಾಯಿಗಳು ಕಿರಿಯ ಮಗನನ್ನು ಪ್ರೀತಿಸಿದರೆ, ಹಿರಿಯ ಮಗನಿಗೆ ತೊಂದರೆ. ಹಿರಿಯ ಮಗನನ್ನು ಪ್ರೀತಿಸಿದರೆ ಕಿರಿಯ ಮತ್ತು ಮಧ್ಯಮ ಮಕ್ಕಳಿಗೆ ತೊಂದರೆ ಉಂಟಾಗುತ್ತದೆ. ದುಡಿಯಲಾರದ ಮಗನಿಗೆ ಹೆಚ್ಚು ಆಸ್ತಿ ಕೊಟ್ಟರೆ , ಉಳಿದ ಮಕ್ಕಳು ತೊಂದರೆ ಅನುಭವಿಸಿ, ತಂದೆ ತಾಯಿಗಳನ್ನು ಕೊಲ್ಲುವುದಕ್ಕೂ ಹೇಸುವುದಿಲ್ಲ. ಅಂದ ಮೇಲೆ ಹಡೆದ ತಂದೆ ತಾಯಿಗಳನ್ನು ಮನ ತನುವಿನೊಂದಿಗೆ ತೋರಿಕೆಗಾಗಿ ಮಾತಿನ ಮೂಲಕ ಗೌರವಿಸುತ್ತದೆಯೇ ಹೊರತು ನಿಜ ಅಲ್ಲ .

ಅಧಿಕಾರದ ಆಸೆಗಾಗಿ ರಾಜನ ಮಗ ರಾಜನನ್ನು ಕೊಲ್ಲಲು ಹೇಸುವುದಿಲ್ಲ . ರಾಜ್ಯ ವಿಸ್ತಾರಕ್ಕಾಗಿ ಚಿನ್ನಾಭರಣಗಳ ಆಸೆಗಾಗಿ ರಾಜ ತನ್ನ ಸೋದರ ರಾಜನನ್ನು ಕೊಲ್ಲಲು ಹೇಸುವುದಿಲ್ಲ.

ಲೋಕ ಈ ಎಲ್ಲಾ ವೃತ್ತಾಂತವನ್ನು ತನುವಿನ ಮೇಲೆ ಆರೋಪ ಮಾಡುತ್ತದೆ. ಮನ ಪ್ರೇರಣೆಯಿಂದ ತನು ಕೊಲೆ ಮಾಡಲು ಕಾರಣವಾಯಿತೆಂದು ಲೋಕ ಮನದ ಮೇಲೆ ಅಪರಾಧ ಹೊರಿಸುವುದೇ ಇಲ್ಲ. ಏಕೆಂದರೆ ತನುವನ್ನು ಕೊಂದ ತನು ಕಾಣುತ್ತದೆಯೇ ಹೊರತು ತನುವನ್ನು ಕೊಲ್ಲಲು ಅಣಿ ಮಾಡಿದ ಮನ ತನುವಿಗೆ ಕಾಣುವುದೇ ಇಲ್ಲ. ಇದಕ್ಕೆಲ್ಲ ಮನವೇ ಕಾರಣವೆಂದು ಜ್ಞಾನಿಗೆ ಗೊತ್ತಾಗುತ್ತದೆಯೇ ಹೊರತು ಲೋಕಕ್ಕೆ ಗೊತ್ತಾಗುವುದಿಲ್ಲ.

**ಚೆನ್ನಬಸವಣ್ಣ :** ಕತ್ತಲಾಗುತ್ತಲಿದೆ . ಈ ಸಭೆಯನ್ನು ಇಲ್ಲಿಗೆ ಮುಕ್ತಾಯ ಮಾಡೋಣ ಎಂದು

ಸಭೆಗೆ ಮಂಗಲ ಹಾಡಿದರು .

## ಪ್ರತಿ - ಕಾಯ ಜ್ಞಾನಿಯಾಗಬೇಕೆ ಹೊರತು ಜ್ಞಾನಿಯನ್ನು ಆರಾಧಿಸಬಾರದು

ಇನ್ನೂ ಸೂರ್ಯೋದಯವಾಗಿಲ್ಲ . ಬಸವಣ್ಣ ಚೆನ್ನಬಸವಣ್ಣ ಸಕಲ ಶರಣರು ಸಭೆ ಸೇರಿದ್ದಾರೆ .

**ಹಡಪದ ಅಪ್ಪಣ್ಣ:** ಎದ್ದು ನಿಂತು ಕೈ ಮುಗಿದು, ಮನ ಸ್ವತಃ ತಾನು ಅರಿವೆಂಬ ಗುರುದೇವನಿಗೆ ಶರಣು ಹೋಗಿ , ಆ ಗುರುದೇವನಿಗೆ ಭಕ್ತನಾಗಬೇಕು ಎಂದು ಮನಕ್ಕೆ ಏಕೆ ಹೊಳೆಯುತ್ತಿಲ್ಲ ಬಸವರಸ ?

**ಬಸವಣ್ಣ:** ಸುಂದರವಾದ ಪ್ರಶ್ನೆಯನ್ನೇ ಕೇಳಿದಿರಿ ಅಪ್ಪಣ್ಣ ;

ಮನ ಭೌತಿಕ ಸುಖಕ್ಕೆ ಆಸೆ ಪಡುತ್ತದೆ. ಚಿನ್ನ, ಬೆಳ್ಳಿ, ಭೂಮಿ ತನ್ನಂತೆಯೇ ಇರುವ ಕಾಯವನ್ನು ಹೆಣ್ಣೆಂದು ಗಂಡೆಂದು ತಿಳಿದು ಆ ಕಾಯದೊಂದಿಗೆ ಸುಖಿಸುವ ಆಸೆ ಪಡುತ್ತದೆಯೇ ಹೊರತು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನೊಂದಿಗೆ ಸಂಗ ಮಾಡಿ ಅರಿವಿನ ಸುಖ ಉಣ್ಣಬೇಕು ಎನ್ನುವ ಬಯಕೆ ಮನಕ್ಕೆ ಆಗುವುದಿಲ್ಲ .

**ಅಪ್ಪಣ್ಣ:** ನಿಜ ಬಸವರಸ ಕಲ್ಯಾಣದಲ್ಲಿ ಅದೆಷ್ಟೋ ಜನಸಂಖ್ಯೆ ಇದೆ. ಆದರೆ ಸತ್ಸಂಗದ ಅರಿವಿನ ಸುಖಕ್ಕಾಗಿ ಬಂದವರು ಇಷ್ಟೇ ಜನರಿದ್ದೇವೆ.

**ಬಸವಣ್ಣ:** ಮನ , ಜ್ಞಾನಿಯ ಮಾತು ಕೇಳಿ ಜ್ಞಾನಿಯನ್ನು ಆರಾಧಿಸುತ್ತದೆ. ಆ ಜ್ಞಾನಿಯನ್ನೇ ದೇವರನ್ನಾಗಿಸುತ್ತದೆ. ಆ ದೇವರಿಗೆ ಆಲಯ ಕಟ್ಟಿ ಉತ್ಸವಗಳನ್ನು ಮಾಡಿ ತನುವಿನೊಂದಿಗೆ ಸಂಭ್ರಮಿಸುತ್ತದೆ. ಮನ ಮತ್ತು ತನು ಸ್ವತಃ ತಾನೇ ಜ್ಞಾನಿಯಾಗಲು ಬಯಸುವುದಿಲ್ಲ.

**ಅಪ್ಪಣ್ಣ:** ತನು, ಮನ, ಅರಿವು ಇವು ಮೂರು ಒಂದೇ ಜಾಗದಲ್ಲಿ ಇದ್ದರೂ ಹೀಗೆ ಬೇರೆ ಬೇರೆಯಾಗಿ ಏಕೆ ವರ್ತಿಸುತ್ತದೆ ಬಸವರಸ.

**ಬಸವಣ್ಣ:** 'ಅರಿವು ' ಎಂದರೆ ತನುವಿನಲ್ಲಿದ್ದ ಬರೀ ಒಂದು ವಸ್ತುವಲ್ಲ , ಸಾಕ್ಷಾತ್ ಪರಮಾತ್ಮನೇ ಆಗಿದ್ದಾನೆ. ಆ ಪರಮಾತ್ಮನಿಗೆ ಸಂಪೂರ್ಣ ಶರಣು ಹೋದಾಗ ಮನ ಮತ್ತು ತನುವಿನ ಅನುಭವಕ್ಕೆ ಬರುವ ಮೂಲಕ ಪರಮಾತ್ಮ ದರುಶನ ನೀಡುತ್ತಾನೆ. ಆಗ ಮನ ಘನಮನವಾಗಿ ಪರಮಾತ್ಮನಿಗೆ ಮನ ಸತಿಯಾಗಿ ಪಾರ್ವತಿ ದೇವಿಯಾಗುತ್ತಾಳೆ. ಅವರಿಬ್ಬರಿದ್ದ ಕಾಯವೇ ಕೈಲಾಸವಾಗುತ್ತದೆ. ಇದು ನನ್ನ ಅನುಭವಕ್ಕೆ ಬಂದಿದೆ. ಚನ್ನಬಸವಣ್ಣನವರ ಅನುಭವಕ್ಕೂ ಬಂದಿದೆ. ತಮ್ಮೆಲ್ಲರ ಅನುಭವಕ್ಕೆ ಬರಲಿ ಎನ್ನುವ ಪ್ರಯತ್ನ ನಮ್ಮದಾಗಿದೆ.

ನಾನು ನಿಮಗೆ ಗುರುವಾಗಲಾರೆ, ನೀವು ಕೂಡ ಶಿಷ್ಯರಲ್ಲ, ನಾನು ಸ್ವತಃ ನನ್ನ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಶಿಷ್ಯನಾಗಿದ್ದೇನೆ. ನಾನು ಆತನೊಂದಿಗೆ ಮಾತನಾಡುತ್ತೇನೆ. ಆತ ಕೂಡ ನನ್ನೊಂದಿಗೆ ಮಾತನಾಡುತ್ತಾನೆ.

0

ಇದಕ್ಕೆ ಚನ್ನಬಸವಣ್ಣ ಕೂಡ ಹೊರತಾಗಿಲ್ಲ . ನಮ್ಮಿಬ್ಬರ ದೃಷ್ಟಿಯಲ್ಲಿ ನೀವೆಲ್ಲರೂ ಕೂಡ ನಮ್ಮ ಹಾಗೇ ಇರುವಿರಿ.

ನೀವಷ್ಟೇ ಏಕೆ ಇಡೀ ಜಗತ್ತಿನಲ್ಲಿರುವ ಸಕಲ ಕಾಯಗಳು ಕೂಡಾ ಹೀಗೆಯೇ ಇವೆ. ಈ ಸಂಗತಿಯನ್ನು ತಿಳಿಸಲು ಹೋದ ಮಹಾಜ್ಞಾನಿಗಳೆಲ್ಲ ಈ ಭೂಮಿಯ ಮೇಲೆ ದೇವರಾಗಿರುವುದು ಅವರದೇ ಆದ ಒಂದು ಧರ್ಮವಾಗಿರುವುದು ಕಾಯಗಳ ದುರ್ದೈವವೇ ಸರಿ.

**ಅಪ್ಪಣ್ಣ:** ಇದಕ್ಕೆ ಪರಿಹಾರವಿಲ್ಲವೇ ಬಸವರಸ ?

**ಬಸವಣ್ಣ:** ಪರಿಹಾರವಿದೆ. ತನ್ನರಿವೇ ತನಗೆ ಗುರುವೆಂದು ಅನುಭವಕ್ಕೆ ಬಂದ ಕಾಯಗಳು ಮತ್ತೊಂದು ಕಾಯಕ್ಕೆ ಗುರುವಾಗದೇ ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನನ್ನು ಕಾಯಕ್ಕೆ ಮತ್ತು ಮನಕ್ಕೆ ಪರಿಚಯ ಮಾಡಿಸಿ, ಹೊರಗಣ ದೇವರುಗಳಿಂದ ದೂರ ಉಳಿಯುತ್ತಾರೆ. ಸಕಲ ಕಾಯಗಳಲ್ಲಿ ಸಂಗಮವಾದ ಅರಿವಿನ ದೇವರುಗಳಿಗೆ ಶರಣು ಹೋಗಿ ಶರಣಾಗತನಾಗುತ್ತಾನೆ. ಸಕಲ ಕಾಯಗಳು ದೇವರನ್ನು ಹೊತ್ತ ಕಾಯಗಳೆಂದು ತಿಳಿದು ಪ್ರಪಂಚದಲ್ಲಿರುವ ಸಕಲ ಕಾಯಗಳನ್ನು ಗೌರವಿಸುತ್ತಾನೆ. ಜ್ಞಾನಿಗಳು ಮಾತ್ರ ಹೀಗೆ ಮಾಡಲು ಸಾಧ್ಯವಾಗುತ್ತದೆ. ಸಕಲ ಕಾಯಗಳಲ್ಲಿಯೂ ಜ್ಞಾನ ಇರುವುದರಿಂದ, ಮನ ಆ ಜ್ಞಾನಕ್ಕೆ ಶರಣು ಹೋದರೆ ಸಾಕು ಸಕಲ ಕಾಯಗಳಿಗೂ ಹೀಗೇ ಇರಲು ಸಾಧ್ಯವಾಗುತ್ತದೆ.

**ಅಪ್ಪಣ್ಣ :** ಬಸವರಸ ಬೆಳಗಿನ ಸಭೆಯಲ್ಲಿ ತಾವು ಗುರುದೇವ ಎನ್ನುವವನು ಕಾಯ ಉಳ್ಳವನಲ್ಲ ಎಂದು ಹೇಳಿದಿರಿ. ಆದರೂ ಎಲ್ಲಿ ನೋಡಿದರೂ ಗುರುಗಳು ಇದ್ದಾರಲ್ಲ . ಅವರಿಗೆ ಹಲವಾರು ಜನ ಶಿಷ್ಯರು ಇದ್ದಾರೆ. ಮಠ, ಆಶ್ರಮಗಳನ್ನು ಕಟ್ಟಿಕೊಂಡಿದ್ದಾರೆ. ಇವರು ಗುರುಗಳಲ್ಲವೇ ಹೇಗೆ ?

**ಬಸವಣ್ಣ:** ಇದು ಮನದ ಕೆಲಸ. ಮನ ತನುವಿಗೆ ಗುರುದೇವನ ವೇಷ ಧರಿಸಿ, ಹಲವುತನುಗಳನ್ನು ಶಿಷ್ಯರನ್ನಾಗಿ ಮಾಡಿಕೊಂಡು ಗುರು ವೇಷದ ಮೂಲಕ ಮನ ತನುವಿನೊಂದಿಗೆ ಸುಖಿಸುತ್ತದೆ. ಮನ ಗುರುವಲ್ಲ, ಆ ಗುರುದೇವನಿಗೆ ಶಿಷ್ಯನಾಗುವವನು ಶಿಷ್ಯನಲ್ಲ, ಗುರುದೇವ ವೇಷಧಾರಿಯಲ್ಲ , ಶಿಷ್ಯ ಕೂಡ ವೇಷಧಾರಿಯಲ್ಲ . ಕಾಯದಲ್ಲಿ ಅರಿವು ಎನ್ನುವ ಗುರುದೇವನಿದ್ದಾನೆ. ಹಾಗೆಯೇ ಮನವೆಂಬ ಶಿಷ್ಯನು ಇದ್ದಾನೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಗುರುದೇವನನ್ನು ಹುಡುಕಲೇಬೇಕು. ಇದು ಮನದ ಕರ್ತವ್ಯವಾಗಬೇಕು.

**ಅಪ್ಪಣ್ಣ:** ಲೋಕದಲ್ಲಿ ಗುರು ಶಿಷ್ಯ ವರ್ಗವಿದೆಯಲ್ಲ ಬಸವರಸ.

**ಬಸವಣ್ಣ:** ಗುರುವಾದಾತನು ಕೂಡ ಕಾಯದಲ್ಲಿಯೇ ಸಂಗಮವಾದ ಗುರುದೇವನನ್ನು ಹುಡುಕಲೇಬೇಕು . ಆ ಗುರುದೇವನ ದರುಶನ ಆದರೆ ಮಾತ್ರ ಗುರುದೇವನಿಗೆ ಮು ; ಇಲ್ಲದಿದ್ದರೆ ತನಗೆ ತಾನೇ ವಂಚನೆಗೆ ಒಳಗಾಗುತ್ತಾನೆ. ಗುರುದೇವ ವೇಷ ಧರಿಸಿ ಶಿಷ್ಯನನ್ನು ವಂಚಿಸುವುದಿಲ್ಲ, ಗುರುವೇಷದ ಕಾಯವನ್ನು

ಆವರಿಸಿದ ಮನ ತಾನಿದ್ದ ಕಾಯವನ್ನೇ ತಾನು ವಂಚಿಸಿಕೊಳ್ಳುತ್ತದೆ. ಶಿಷ್ಯನ ಕಾಯ ಕೂಡ ವೇಷ ಧರಿಸಿದ ಗುರುದೇವನ ಕಾಯಕ್ಕೆ ಶಿಷ್ಯನಾಗಿ ತನ್ನನ್ನು ತಾನು ವಂಚಿಸಿಕೊಳ್ಳುತ್ತದೆ.

**ಅಪ್ಪಣ್ಣ:** ಈ ಶಿಕ್ಷಣ ಯಾಕೆ ಜಾರಿಗೆ ಬಂದಿಲ್ಲ ಬಸವರಸ .

**ಬಸವಣ್ಣ :** ಜಾರಿಯಲ್ಲಿದೆ.

ಪ್ರತಿ ಕಾಯವನ್ನು ಆವರಿಸಿದ ಮನ ಗುರುದೇವನನ್ನು ತಿಳಿದುಕೊಳ್ಳುವುದರಲ್ಲಿ ತಡವಾಗುತ್ತದೆ.

ತನಗೆ ತಾನೇ ಅರಿವಿನ ಆಚರಣೆಯಲ್ಲಿದ್ದವರು ಸಿಕ್ಕುತ್ತಾರೆ. ಆದರೂ ಮನ ಹುಡುಕುವುದಕ್ಕೆ ಇಚ್ಛೆ ಮಾಡುವುದಿಲ್ಲ. ಈ ಸಂಖ್ಯೆ ಬಹಳಷ್ಟು ಕಡಿಮೆ ಇದೆ. ಆದರೂ ಆ ಪರಮಾತ್ಮನನ್ನು ಅರಿವೆಂಬ ಗುರುದೇವನನ್ನು ನೆನೆವ ಮನವನ್ನು ಕಿರಿದೆನ್ನಲು ಬರುವುದಿಲ್ಲ. ಕತ್ತಲು ಬೃಹದಾಕಾರವಾಗಿದ್ದರೂ ಬೆಳಗುವ ಜ್ಯೋತಿಯನ್ನು ಕಿರಿದೆನ್ನಲು ಬರುವುದಿಲ್ಲ. ಆನೆ ದೊಡ್ಡದಿದ್ದರೂ ಅಂಕುಶವನ್ನು ಕಿರಿದೆನ್ನಲು ಬರುವುದಿಲ್ಲ .

**ಅಪ್ಪಣ್ಣ:** ತನುವಿನಲ್ಲಿ ಅರಿವಿದ್ದರೂ ಅಜ್ಞಾನದ ಬಲವೇ ಹೆಚ್ಚಿದೆಯಲ್ಲ ಬಸವರಸ.

**ಬಸವಣ್ಣ:** ತನುವಿನಲ್ಲಿ ಆನೆಯ ಬಲದ ಅಜ್ಞಾನವು ಇದೆ. ಅಂಕುಶ ಗಾತ್ರದ ಅರಿವು ಇದೆ. ಅರಿವಿನ ಅಂಕುಶ ಅಜ್ಞಾನದ ಆನೆಗೆ ಬಳಕೆಯಾಗಬೇಕು. ಆಗ ಅರಿವು ಮಾತ್ರ ಉಳಿಯುತ್ತದೆ. ಬೃಹದಾಕಾರದ ಕತ್ತಲು ಬೆಳಗುವ ಚಿಕ್ಕ ಜ್ಯೋತಿಯಲ್ಲಿ ಸಂಗಮವಾಗಿ ಆ ಬೆಳಕೇ ಆದಂತೆ. ಮನ ಮತ್ತು ತನು 'ಅರಿವು ' ಎಂಬ ಗುರುದೇವನಲ್ಲಿ ಸಂಗಮವಾಗಿ ಕೂಡಲ ಸಂಗಯ್ಯನೇ ತಾನಾಗಬೇಕು.

**ಅಕ್ಕಮ್ಮ:** ಈ ಹಿಂದೆ ಕಾಯವುಳ್ಳವನು ಗುರುದೇವನಲ್ಲ ಕಾಯದಲ್ಲಿದ್ದವನು ಗುರುದೇವ ಎನ್ನುವ ವಿಷಯ ಪ್ರಸ್ತಾಪವಾಗಿದ್ದರೂ ಕೂಡ ಇಂದಿನ ಈ ವಿಷಯ ಈ ಸಭೆಯಲ್ಲಿ ಭಾಗವಹಿಸಿದ ಸಕಲ ಶರಣರ ಕಣ್ಣು ತೆರೆಯಿಸಿತು ಬಸವಣ್ಣ. ನಿನಗೆ ಶರಣು ಶರಣಾರ್ಥಿ.

**ಬಸವಣ್ಣ:** ಹಾಗೆ ಹೇಳಬೇಡಿ ಅಕ್ಕ ನಾನೇನಿದ್ದರೂ ನಿಮ್ಮ ಆಶ್ರಯದಲ್ಲಿ ಬೆಳೆದವನು. ಈ ಸತ್ಸಂಗಕ್ಕೆ ನಿಮ್ಮ ಕೆಲಸದ ಅವಶ್ಯಕತೆ ಇದೆ. ಸಾಕಷ್ಟು ಶರಣೆಯರು ಜಾತಿ, ಮತ, ಪಂಥ, ಕುಲವೆನ್ನದೇ ಬರುತ್ತಿದ್ದಾರೆ. ಶರಣ ಶರಣೆಯರ ಸಂಖ್ಯೆ ಕೂಡ ಹೆಚ್ಚಾಗುತ್ತಲಿದೆ. ಆದರೂ ಕೂಡ ಪಣ್ಯಾಂಗನೆ (ವೇಶ್ಯೆ) ಯರು ಸತ್ಸಂಗಕ್ಕೆ ಬರುತ್ತಿಲ್ಲ. ತಾವು ಅವರನ್ನು ಕರೆತರುವ ಕೆಲಸದಲ್ಲಿ ನಿರತರಾಗಬೇಕು ಅಕ್ಕ .

**ಅಕ್ಕಮ್ಮ:** ಆಗಲಿ ಬಸವಣ್ಣ ಇದಕ್ಕಿಂತ ದೊಡ್ಡ ಕೆಲಸ ಬೇರಾವುದಿದೆ. ಇದು ನಮ್ಮ ಭಾಗ್ಯವೆಂದು ತಿಳಿಯುತ್ತೇವೆ. (ಸಭೆಯಲ್ಲಿ ಗುಸುಗುಸು ಶಬ್ದವಾಗುತ್ತದೆ.)

**ಚನ್ನಬಸವಣ್ಣ:** (ಬಸವಣ್ಣನವರಿಗೆ ಕೈ ಮುಗಿದು ) ನಮ್ಮ ತಾಯಿಯವರಿಗೆ ಇಂದು ತಾವು ಅತ್ಯುತ್ತಮವಾದ ಕೆಲಸವನ್ನೇ ಹೇಳಿರುವಿರಿ ಬಸವರಸ. ತಮಗೆ ಹಾಗೂ ಸಕಲ ಶರಣರಿಗೂ ಶರಣು ಶರಣಾರ್ಥಿ. ತಮ್ಮ ಮಾತು ಕೇಳಿ ಸಭೆಯಲ್ಲಿ ಸ್ವಲ್ಪ ಮಟ್ಟಿಗೆ ಗುಸು ಗುಸು ಶಬ್ದವಾಯಿತು. ಕಾಯವುಳ್ಳವನು ಯಾವ ಕಾಯಕದಲ್ಲಿದ್ದರೂ ಕೂಡ

ಆ ಕಾಯದಲ್ಲಿ ಸಾಕ್ಷಾತ್ ಗುರುದೇವನೇ ಸಂಗಮವಾಗಿದ್ದಾನೆ. ಮಾಡುವ ಕೆಲಸದಿಂದಾಗಿ, ಕಾಯ ಜಾತಿಯ ಹಣೆಪಟ್ಟಿ ಹಚ್ಚಿಕೊಂಡಿದೆ. ಆಯಾ ವೃತ್ತಿಯಲ್ಲಿ ತೊಡಗಿದ ಕಾಯ ಯಾವುದಾದರೇನು? ಆಯಾ ಕಾಯಗಳಲ್ಲಿ ಸಂಗಮವಾದ ಅರಿವಿನ ಶಿವನನ್ನು ನೋಡಬೇಕೆ ಹೊರತು ಆ ಕಾಯ ಅರಿವಿನ ಶಿವನ ಸಂಪತ್ತೆಂದು ತಿಳಿಯಬೇಕೇ ಹೊರತು ಕೆಲಸದಿಂದ, ಜಾತಿ, ಧರ್ಮ, ಮತದಿಂದ ಹೆಣ್ಣೆಂದು ಗಂಡೆಂದು ಕಾಯವನ್ನು ಗುರುತಿಸುವುದು ಉಚಿತವಲ್ಲ . ಇದು ಶರಣ ಧರ್ಮ. ಅರಿವಿನ ಧರ್ಮ.

**ಕಿನ್ನರಿ ಬ್ರಹ್ಮಯ್ಯ:** ಜಾತಿ , ಮತ , ಪಂಥಗಳ ಮೂಲಕ ಹೆಣ್ಣೆಂದು ಗಂಡೆಂದು ಕಾಯವನ್ನು ಗುರುತಿಸುತ್ತಾರಲ್ಲ ಚನ್ನಬಸವಣ್ಣ?

**ಚನ್ನಬಸವಣ್ಣ:** ಹೌದು ಶರಣರೇ ಅದು ಲೋಕದ ಮಾತು. ಲೋಕದ ನಿಯಮ ಲೋಕದ ಸಂಪ್ರದಾಯ. ಈ ಸಂಪ್ರದಾಯ ಸತ್ಯವಲ್ಲ . ಸತ್ಯದ ಒರೆಗಲ್ಲಿಗೆ ಹಚ್ಚಿ ನೋಡಿದಾಗ ಮರೆವಿಗೆ ಹಿರಿ ಕಿರಿದೆನ್ನುವುದು ಉಂಟೇ ಹೊರತು, ಅರಿವಿಗೆ ಇಲ್ಲ ಎನ್ನುವುದನ್ನು ಹಲವಾರು ಸಭೆಗಳಲ್ಲಿ ಸತ್ಸಂಗದ ಮೂಲಕ ನಿರ್ಧರಿಸಲಾಗಿದೆ. ನಾವೆಲ್ಲರೂ ನಿರ್ಧರಿಸಿದಂತೆ ಅರಿವಿನ ಮೂಲಕ ನಡೆಯುವುದು ಅರಿವಿನಿಂದ ನೋಡುವುದು ಅರಿವಿನಿಂದಲೇ ಮಾತನಾಡುವುದು ಅರಿವಿನ ಮೂಲಕ ಮುಟ್ಟಿ ಮೂಸಿಸುವುದು ಶರಣ ಧರ್ಮದ ಉದ್ದೇಶವಾಗಿದೆ. ಇದು ಪ್ರತಿ ಕಾಯದ ಸಹಜ ಧರ್ಮ. ಪ್ರತಿ ಕಾಯದಲ್ಲಿಯೇ ಬಚ್ಚಿಟ್ಟುಕೊಂಡ ಅರಿವಿನ ಸಹಜ ಧರ್ಮವನ್ನು ಆಯಾ ಕಾಯಗಳಿಗೆ ಪರಿಚಯಿಸುವುದು ನಮ್ಮೆಲ್ಲರ ಗುರಿಯಾಗಬೇಕು.

ಕಾಯವನ್ನು ಕಾಯದಲ್ಲಿಯೇ ಸಂಗಮವಾದ ಅರಿವು ಎನ್ನುವ ಗುರುದೇವನು ಕಾಯವನ್ನು ಮುನ್ನಡೆಸಬೇಕೇ ಹೊರತು ಕಾಯವನ್ನು ಆವರಿಸಿದ ಮನವೆಂಬ ಅಜ್ಞಾನಕ್ಕೆ ಕಾಯ ಬಲಿಯಾಗಬಾರದು .

ಇದು ನಮ್ಮೆಲ್ಲರ ಕರ್ತವ್ಯವಾಗಬೇಕು. ನನ್ನ ಅರಿವಿನೊಂದಿಗೆ ನಾನು ಪರಮಸುಖದಿಂದ ಇರುವ ಇಚ್ಚೆಯೇ ನಮ್ಮೆಲ್ಲರದ್ದಾಗಿರಬೇಕು. ನಾವು ಮತ್ತೊಬ್ಬರಿಗೆ ಬೋಧಿಸುವಂತಿಲ್ಲ ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನ ಪರಿಚಯವನ್ನು ಕಾಯಕ್ಕೂ ಕಾಯವನ್ನು ಆವರಿಸಿದ ಮನಕ್ಕೂ ಮಾಡಿಸುವ ಕಾಯಕದಲ್ಲಿ ನಿರತರಾಗುತ್ತಿದ್ದೇವೆ ಅಷ್ಟೇ.

ಈ ಸಭೆಯನ್ನು ಇಲ್ಲಿಗೆ ಮುಕ್ತಾಯ ಮಾಡೋಣ ಎಂದು
ಸಭೆಗೆ ಮಂಗಲ ಹಾಡಿದರು .

ಸತ್ಯ ಸಂವಾದ - 32

# ಕಾಯ ಕೈಲಾಸ, ಮನ ವೇಶ್ಯೆ ಅರಿವೇ ಗುರು

(ಬೆಳಗಿನ ಸಮಯ ಬಸವಣ್ಣ ಅಕ್ಕಮ್ಮ ಚನ್ನಬಸವಣ್ಣ ಪಣ್ಯಾಂಗನೆಯರ ಮನೆಗಳಿಗೆ ಹೊರಡುವ ಸಿದ್ಧತೆಯಲ್ಲಿದ್ದಾರೆ. )ಸತ್ಯಕ್ಕ ಸಕಲರಿಗೂ ಶರಣು ಶರಣಾರ್ಥಿ ಎಂದು ಕೈ ಮುಗಿದು ಅವರೊಂದಿಗೆ ಸೇರಿಕೊಳ್ಳುವರು. ಕಾಳವ್ವೆಯ ಮನೆಗೆ ನಡೆದು ಎಲ್ಲರೂ ಕಾಳವ್ವೆಗೆ ಕೈ ಮುಗಿದು ಶರಣು ಶರಣಾರ್ಥಿ ಕಾಳವ್ವೆ ತಾಯಿ ಎಂದು ಹೇಳುತ್ತ ಬಾಗಿಲ ಬಳಿ ನಿಲ್ಲುವರು.

**ಕಾಳವ್ವೆ:** ಶರಣಾರ್ಥಿ ಎನ್ನೊಡೆಯ ಬಸವರಸ ! ನನ್ನಿಂದ ಏನಾದರೂ ಅಪಚಾರವಾಯಿತೆ? ತಾವು ಹೇಳಿ ಕಳಿಸಿದ್ದರೆ ಸಾಕಿತ್ತು , ನಾನೇ ಬರುತಿದ್ದೆ. ತಾವು ನಮ್ಮ ಮನೆ ಬಾಗಿಲವರೆಗೂ ಬಂದಿರುವುದು ನನ್ನಿಂದ ಅಪಚಾರವಾಯಿತು. ಮನ್ನಿಸಿ ಎನ್ನೊಡೆಯ.

**ಬಸವಣ್ಣ:** ಇಲ್ಲ ತಾಯಿ , ನಿನ್ನಿಂದ ಯಾವ ಅಪಚಾರವೂ ಆಗಿಲ್ಲ . ನಮ್ಮಿಂದಲೇ ಅಪಚಾರವಾಗಿದೆ. ಮಹಾ ಮನೆಯಲ್ಲಿ ಸತ್ಸಂಗ ನಡೆಯುತ್ತಿದ್ದು ಸಾಕಷ್ಟು ದಿನಗಳಾದರೂ ತಮ್ಮನ್ನು ಸತ್ಸಂಗಕ್ಕೆ ಬರ ಮಾಡಿಕೊಳ್ಳದಿರುವುದು ನನ್ನಿಂದ ಹಾಗೂ ಶರಣರಿಂದಲೇ ಅಪಚಾರವಾಗಿದೆ. ಈ ಅಪಚಾರವನ್ನು ಮನ್ನಿಸಿ ತಾಯಿ.

**ಕಾಳವ್ವೆ:** ಬೆಳಿಗ್ಗೆ ಮತ್ತು ಸಂಜೆ ಮಹಾ ಮನೆಯಲ್ಲಿ ಸತ್ಸಂಗಕ್ಕಾಗಿ ಸಾಕಷ್ಟು ಜನ ಸೇರುತಿದ್ದಾರೆ ಎನ್ನುವ ವಿಷಯ ನಮ್ಮ ಕುಲಕ್ಕೆ ತಿಳಿದಿದೆ ಬಸವರಸ.

ನಮಗೆ ಬರುವ ಆಸಕ್ತಿ ಇದ್ದರೂ ಕೂಡ ನಾವು ಮಹಾಮನೆಗೆ ಬಂದರೆ ತಪ್ಪಾಗುವುದೋ ಹೇಗೆ ಎನ್ನುವ ಬೇಗುದಿಯಲ್ಲಿ ಕಾಲ ಕಳೆಯುತಿದ್ದೇವೆ. ನಮ್ಮೆಲ್ಲರನ್ನು ಪಾವನ ಮಾಡಲು ಬಂದ ಪರಮಾತ್ಮರು ತಾವು. ಮಹಾ ಮನೆಗೆ ತಾವು ಕೂಡ ಬರಬಹುದೆಂದು ಹೇಳಿ ಕಳಿಸಿದ್ದರೆ ಸಾಕು ನಾವೆಲ್ಲರೂ ಬಂದು ಬಿಡುತಿದ್ದೆವು. ನಮ್ಮಂತಹ ಪಣ್ಯಂಗನೆಯರ ಮನೆಗೆ ತಾವು ಬಂದಿರುವುದು ನಮ್ಮನ್ನು ಮತ್ತಷ್ಟು ಪಾಪದ ಕೂಪಕ್ಕೆ ತಳ್ಳಿದಂತಾಗುತ್ತದೆ ಬಸವರಸ.

**ಬಸವಣ್ಣ:** ತಾಯಿ ಕಾಳವ್ವೆ, ತಾವು ಪಣ್ಯಾಂಗನೆಯರು (ವೇಶ್ಯೆ) ಅಲ್ಲ , ಸಾಕ್ಷಾತ್ ಪುಣ್ಯಾಂಗನೆಯರು . ಸಮಾಜದಲ್ಲಿ ತಮ್ಮಿಂದ ಬಹುಮುಖ್ಯವಾದ ಕೆಲಸ ಆಗಬೇಕಾಗಿದೆ. ಹೀಗಾಗಿ ನಾವು ನಿಮಗೆ ಸತ್ಸಂಗಕ್ಕಾಗಿ ಮಹಾ ಮನೆಗೆ ಬರಲು ತಮಗೆ ಆಮಂತ್ರಣ ಕೊಡಲು ಬಂದಿದ್ದೇವೆ. ನಮೆಲ್ಲರನ್ನೂ ನಿಮ್ಮ ಮನೆಯೊಳಗೆ ಕರೆಯುವುದಿಲ್ಲವೇ ತಾಯಿ.

**ಕಾಳವ್ವೆ:** ಅಯ್ಯೋ ಬಸವರಸ, ಜನ ಈ ಮನೆಯನ್ನು ಪಾಪದ ಕೂಪವೆಂದೇ ಭಾವಿಸಿದ್ದಾರೆ. ಈ ವೃತ್ತಿಯಲ್ಲಿ ತೊಡಗಿದ ನಮ್ಮನ್ನು ಸೂಳೆಯರು ಎಂದು ಮೂದಲಿಸಿ ನುಡಿಯುತ್ತಾರೆ. ಹಗಲು ನಾವು ಯಾರ ಮುಖವನ್ನು ನೋಡುವಂತಿಲ್ಲ, ತೋರಿಸುವಂತಿಲ್ಲ ನೋಡಿದರೆ, ನಮಗೆ ಶಾಪ ಕಟ್ಟಿಟ್ಟ ಬುತ್ತಿ. ಈ ಮನೆಗೆ ಬಂದವರು ರಾತ್ರಿ ಮಾತ್ರ ನಮ್ಮನ್ನು ಮಹಾರಾಣಿ ಎಂದೇ ಸಂಬೋಧಿಸುತ್ತಾರೆ. ಇಂತಹ ನರಕದ ವೃತ್ತಿಯಲ್ಲಿರುವ ನಮ್ಮನ್ನು 'ಪುಣ್ಯಾಂಗನೆಯರು ' ಎಂದು ತಮ್ಮಿಂದ ಕರೆಸಿಕೊಂಡಿರುವುದು ನಮ್ಮ ಪೂರ್ವ

ಜನ್ಮದ ಸುಕೃತವೇ ಸರಿ ಎಂದು ಸರಸರನೇ ಮನೆಯೊಳಗೆ ಹೋಗಿ, ಒಂದು ಬಿಂದಿಗೆಯಲ್ಲಿ ನೀರು ತಂದು ಬಸವಣ್ಣ , ಚನ್ನಬಸವಣ್ಣ, ಅಕ್ಕಮ್ಮ ಮತ್ತು ಸತ್ಯಕ್ಕಳ ಪಾದಗಳನ್ನು ತೊಳೆದು ನಮಸ್ಕರಿಸಿ ದಯವಿಟ್ಟು ಒಳಗೆ ಬನ್ನಿ ಬಸವರಸ. ಇಂದಿನಿಂದ ನಾನು ನನ್ನ ವೃತ್ತಿಯನ್ನು ಬಿಟ್ಟು ಬಿಡುತ್ತೇನೆ ಎಂದು ಅವರೆಲ್ಲರಿಗೂ ಕೈ ಮುಗಿದು ಭಾವುಕಳಾಗಿ ನುಡಿದಳು.

**ಬಸವಣ್ಣ:** ತಾಯಿ ಕಾಳವ್ವೆ ನೀನು ಮಾಡುವ ವೃತ್ತಿ ಪವಿತ್ರವಾದದ್ದು, ಅದನ್ನು ನೀನು ಬಿಡುವಂತಿಲ್ಲ. ನೀನು ಮಾಡುತ್ತಿರುವ ವೃತ್ತಿಯಲ್ಲಿ ನಾನು ಹೇಳಿದಂತೆ ಸ್ವಲ್ಪ ಬದಲಾವಣೆ ಮಾಡಿ ಕೊಳ್ಳಬೇಕು ಅಷ್ಟೇ ಎಂದು ಬಸವಣ್ಣ ಕೈ ಮುಗಿದು ಹೇಳಿದರು .

**ಕಾಳವ್ವೆ :** ಅಯ್ಯೋ ಪರಮಾತ್ಮನೇ ಈ ಭುವಿಯ ಜನರನ್ನು ಪಾವನ ಮಾಡಲು ಬಂದ ಬಸವರಸ ನೀನು. ನೀವು ಎನಗೆ ಕೈ ಮುಗಿಯುವುದೇ ತಂದೆ ಅಪಚಾರ, ಅಪಚಾರ. ನನ್ನಿಂದ ಘೋರ ಅಪಚಾರವಾಯಿತು. ಮನ್ನಿಸಿ ಶರಣರೇ ಎಂದು ಸರ್ವರಿಗೂ ಕೈ ಮುಗಿದು, ಶಿರಸಾಷ್ಟಾಂಗ ನಮಸ್ಕಾರ ಮಾಡುವಳು .

**ಬಸವಣ್ಣ:** ಎದ್ದೇಳು ತಾಯಿ. ನಾಳೆ ಬೆಳಗಿನ ಸತ್ಸಂಗಕ್ಕಾಗಿ ಮಹಾಮನೆಗೆ ಬಂದರೆ ನೀನು ಮಾಡುವ ಕೆಲಸದ ಬದಲಾವಣೆಗಳನ್ನು ನಾನು ನಿಮಗೆ ವೈಯಕ್ತಿಕವಾಗಿ ಹೇಳುವೆ ಅದನ್ನು ತಪ್ಪದಂತೆ ಪಾಲಿಸು ಎಂದು ಮನವಿ ಮಾಡಿಕೊಂಡರು.

**ಕಾಳವ್ವೆ :** ಬಸವರಸ , ದಯವಿಟ್ಟು ಹೀಗೆ ಮಾತನಾಡಬೇಡಿ . ನಾನು ಮಾಡಬೇಕಾದ ಕೆಲಸಕ್ಕಾಗಿ ಆದೇಶ ನೀಡಿ ನನ್ನೊಡೆಯ ಶಿರಸಾವಹಿಸಿ ಪಾಲಿಸುವೆ.

**ಬಸವಣ್ಣ :** ಮಸಣಮ್ಮ ತಿಮ್ಮವ್ವ ,ರೇಚವ್ವ , ಲಕ್ಕಮ್ಮ , ಕೇತಲದೇವಿ ಇವರೆಲ್ಲರ ಮನೆಗಳಿಗೆ ಸತ್ಸಂಗಕ್ಕಾಗಿ ಆಮಂತ್ರಣ ನೀಡಲು ಹೋಗೋಣವೇ ತಾಯಿ ಕಾಳವ್ವೆ.

**ಕಾಳವ್ವೆ :** ತಂದೆ ಬಸವರಸ, ತಾವು ಇಲ್ಲಿಗೂ ಬರದೇ ಹೇಳಿ ಕಳಿಸಿದ್ದರೂ ಸಾಕಿತ್ತು ನಾವೆಲ್ಲರೂ ಬರುತ್ತಿದ್ದೆವು. ಈಗ ನಾವೆಲ್ಲರೂ ಹೋಗುವುದು ಬೇಡ. ತಾವು ತಮ್ಮ ಅಮೂಲ್ಯವಾದ ಕೆಲಸದಲ್ಲಿ ಮುಂದುವರೆಯಿರಿ. ನಾನು ಈಗಲೇ ಹೋಗಿ ಎಲ್ಲರನ್ನು ಭೇಟಿಯಾಗಿ ತಾವು ನೀಡಿದ ಆಮಂತ್ರಣವನ್ನು ಅವರೆಲ್ಲರಿಗೂ ತಲುಪಿಸಿ, ಅವರೆಲ್ಲರನ್ನು ಬೆಳಗಿನ ಸತ್ಸಂಗಕ್ಕೆ ಕರೆದುಕೊಂಡು ಬರುವೆ ಎಂದು ಹೇಳಿ ಸಕಲ ಶರಣರಿಗೂ ನಮಸ್ಕರಿಸಿ, ಅವರೆಲ್ಲರನ್ನು ಬೀಳ್ಕೊಟ್ಟಳು.

ಈ ಸುದ್ದಿ ಕಾಡ್ಗಿಚ್ಚಿನಂತೆ ಕಲ್ಯಾಣದ ತುಂಬಾ ಹಬ್ಬಿತು. ಪಣ್ಯಸ್ತ್ರೀ ಕಾಳವ್ವೆಯ ಮನೆಗೆ ಮಂತ್ರಿ ಬಸವಣ್ಣನವರು ತಮ್ಮೆಲ್ಲ ಶರಣರೊಂದಿಗೆ ಹೋಗಿದ್ದರಂತೆ ಎಂದು ಕಲ್ಯಾಣದ ತುಂಬಾ ಜನ ಮಾತನಾಡತೊಡಗಿದರು. ಏಕಾದರು ಹೋಗಿರಬಹುದು ಎಂಬ ಆಲೋಚನೆಯಲ್ಲಿ ಇಡೀ ಕಲ್ಯಾಣದ ಜನ ತೊಡಗಿತು.

# ಕಲ್ಯಾಣದ ಪುಣ್ಯಾಂಗನೆಯರು

ಇನ್ನೂ ಸೂರ್ಯೋದಯವಾಗಿಲ್ಲ , ಸಕಲ ಶರಣ ಶರಣೆಯರು ಬಸವಣ್ಣ ಚನ್ನಬಸವಣ್ಣರ ಬರುವಿಕೆಗಾಗಿ ಕಾದು ಕುಳಿತಿದ್ದಾರೆ. ಒಂದೆಡೆ ಪಣ್ಯಾಂಗನೆಯರು ಕುಳಿತಿದ್ದಾರೆ. ಬಸವಣ್ಣ ಚನ್ನಬಸವಣ್ಣ ಆಗಮಿಸುವುದೊಂದೆ ತಡ , ಸಕಲ ಶರಣರು ಎದ್ದು ನಿಂತು ಶರಣು ಶರಣಾರ್ಥಿ ಎಂದು ಒಕ್ಕೊರಲಿನಿಂದ ಹೇಳುತ್ತಾರೆ. ಬಸವಣ್ಣ ಚನ್ನಬಸವಣ್ಣ ಪ್ರತಿಯಾಗಿ ಸಕಲ ಶರಣರಿಗೆ ಕೈ ಮುಗಿದು ಶರಣು ಶರಣಾರ್ಥಿ ಎಂದು ಹೇಳುತ್ತಾರೆ.

**ಬಸವಣ್ಣ:** ಇಂದಿನ ವಿಶೇಷ ಸಭೆಗೆ ಕಲ್ಯಾಣದ ಪುಣ್ಯಾಂಗನೆಯರೆಲ್ಲ ಆಗಮಿಸಿದ್ದಾರೆ. ಅವರೆಲ್ಲರಿಗೂ ನನ್ನ ಹೃದಯಪೂರ್ವಕ ಸ್ವಾಗತ ಎಂದ ತಕ್ಷಣ ; ಶರಣರು ತಮ್ಮ ತಮ್ಮಲ್ಲಿಯೇ ಪಿಸುಧ್ವನಿಯಲ್ಲಿ ಮಾತನಾಡಿಕೊಳ್ಳುತ್ತಾರೆ.

ಕುತೂಹಲ ತಡೆಯದೇ

**ಸೂಜಿಕಾಯಕದ ರಾಮಿತಂದೆ :** ಬಸವರಸ ಇಲ್ಲಿ ಸೇರಿದಂತಹ ಶರಣ ಶರಣೆಯರಲ್ಲಿ ತಾವು ಸಂಭೋದಿಸಿದ ಪುಣ್ಯಾಂಗನೆಯರು ಯಾರು ಇಲ್ಲ . ಇಂದಿನ ಸಭೆಗೆ ಕಲ್ಯಾಣದ ಪಣ್ಯಾಂಗನೆಯರು ಮಾತ್ರ ಬಂದಿದ್ದಾರೆ. ಹೀಗಾಗಿ ಶರಣರು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತಿದ್ದಾರೆ.

**ಬಸವಣ್ಣ:** ರಾಮಿತಂದೆ ತಾವು ಮತ್ತು ಶರಣರು ತಪ್ಪಾಗಿ ನೋಡಿರುವಿರಿ. ಹಾಗೆಯೇ ತಪ್ಪಾಗಿ ಭಾವಿಸಿರುವಿರಿ. ಅವರೆಲ್ಲ ಕಲ್ಯಾಣದ ಪುಣ್ಯಾಂಗನೆಯರು . ಇಂದಿನ ವಿಶೇಷ ಸಭೆಯನ್ನು ಅವರಿಗೆ ಮಾತ್ರ ಏರ್ಪಡಿಸಲಾಗಿದೆ. ಪುಣ್ಯಾಂಗನೆಯರನ್ನು ಬಿಟ್ಟು ತಾವೆಲ್ಲ ಇಂದು ವಿಶ್ರಾಂತಿ ತೆಗೆದುಕೊಳ್ಳಿ. ನಾಳೆಯಿಂದ ನಿಮ್ಮೊಂದಿಗೆ ಅವರು ಕೂಡ ಸತ್ಸಂಗದಲ್ಲಿ ಪಾಲ್ಗೊಳ್ಳುತ್ತಾರೆ.

**ರಾಮಿ ತಂದೆ :** ಆಗಲಿ ಎನ್ನೊಡೆಯ ತಾವು ಹೇಳಿದಂತೆ ನಾವು ಇಂದು ಸಂಜೆ ಸಭೆಗೆ ಆಗಮಿಸುತ್ತೇವೆ. ಎಂದು ಪುಣ್ಯಾಂಗನೆಯರು ಬಿಟ್ಟು ಸಕಲ ಶರಣರು ತಮ್ಮ ತಮ್ಮ ಮನೆಗೆ ಮರಳಿದರು. (ನಂತರ ಬಸವಣ್ಣ ಪುಣ್ಯಾಂಗನೆಯರನ್ನು ಉದ್ದೇಶಿಸಿ)

**ಬಸವಣ್ಣ:** ನಾನು ಮತ್ತು ಅಕ್ಕ , ಚನ್ನಬಸವಣ್ಣ , ಸತ್ಯಕ್ಕಳ ಮನವಿಯ ಮೇರೆಗೆ ತಾವೆಲ್ಲರೂ ಇಂದಿನ ವಿಶೇಷ ಸಭೆಗೆ ಆಗಮಿಸಿರುವಿರಿ. ತಮ್ಮೆಲ್ಲರಿಗೂ ಹೃದಯಪೂರ್ವಕ ಸ್ವಾಗತ .

**ಕಾಳವ್ವೆ :** ತಂದೆ ಬಸವರಸ ನಮ್ಮನ್ನು ಅಷ್ಟೊಂದು ಗೌರವದಿಂದ ಮಾತನಾಡಿಸಬೇಡಿ. ನಾವು ಈ ಸಮಾಜದಲ್ಲಿ ಅತ್ಯಂತ ಹೀನ ದೃಷ್ಟಿವುಳ್ಳವರು. ತಾವು ಹೇಳಿದಂತೆ ನಾವೆಲ್ಲರೂ ಇಲ್ಲಿಗೆ ಬಂದಿದ್ದೇವೆ. ಇವರೆಲ್ಲರ ಪರಿಚಯ ಮಾಡಿ ಕೊಡುವೆ ಎಂದು ಹೇಳುತ್ತ: ನಾನು ಕಾಳವ್ವೆ ,ಇವರು ಮಸಣಮ್ಮ, ಇವರು ರೇಚವ್ವೆ ,ಇವರು ಲಕ್ಷ್ಮಮ್ಮ ; ಇವರು ಗುಡ್ಡವೆ ,ಇವರು ರಾಯಮ್ಮ ,ಇವರು ರೇಖಮ್ಮ,ಇವರು ಸಂಕವ್ವೆ ,ಇವರು ಲಿಂಗಮ್ಮ, ಇವರು ಗಂಗಮ್ಮ

(ಎಂದು ಪರಿಚಯಿಸಿದಳು.)

**ಬಸವಣ್ಣ:** ಕಾಳವ್ವೆ ಈ ಎಲ್ಲಾ ಶರಣೆಯರನ್ನು ಇಂದಿನ ವಿಶೇಷ ಸಭೆಗೆ ಕರೆತಂದು ಉತ್ತಮ ಕೆಲಸವನ್ನೇ ಮಾಡಿರುವಿರಿ. ತಮ್ಮೆಲ್ಲರಿಂದ ಇಡೀ ಸಮಾಜದಲ್ಲಿ ತಮ್ಮ ಅಜ್ಞಾನವನ್ನು ತಾವೇ ತಿದ್ದಿಕೊಳ್ಳುವ ಒಂದು ಅತ್ಯುತ್ತಮವಾದ ಕೆಲಸ ಆಗಲೇಬೇಕಾಗಿದೆ .

ಒಂದು ಕಾಯ ಮತ್ತೊಂದು ಕಾಯವನ್ನು ತನ್ನ ಅಜ್ಞಾನದ ಕಾಮ ಸುಖಕ್ಕಾಗಿ ಬಳಕೆ ಮಾಡಿಕೊಳ್ಳುತ್ತಿದೆ. ಇದು ಅಪಚಾರದ ಕೆಲಸ. ಕಾಯ ಕಾಯದೊಂದಿಗೆ ಕಾಮ ಕ್ರೀಡೆಯಲ್ಲಿ ಮುಳುಗುವುದನ್ನು ಸಮಾಜ 'ಸುಖವೆಂದು'ತಿಳಿದಿದೆ. ಹಾಗೆಯೇ ಕಾಯದ ಸುಖಕ್ಕಾಗಿ ಬಳಕೆಯಾಗುವ ಸತಿಯಲ್ಲದ ಅನ್ಯ ಕಾಯವನ್ನು ವೇಶ್ಯೆ ಎಂದು 'ಪಣ್ಯಸ್ತ್ರೀ 'ಎಂದು ಸಮಾಜ ಹಣೆಪಟ್ಟಿ ಕಟ್ಟಿದೆ. ಒಂದು ಕಾಯವನ್ನು ವೇಶ್ಯೆ ಎಂದು ತುಚ್ಛೀಕರಿಸಿ ಆ ಕಾಯವನ್ನು ಬಳಕೆ ಮಾಡಿದ ಕಾಯ ಶ್ರೇಷ್ಠವೆಂದು ತನಗೆ ತಾನೇ ಬೀಗುತ್ತದೆ. ಹೀಗೆ ತಪ್ಪಾಗಿ ತಿಳಿದುಕೊಂಡ ಸಕಲ ಕಾಯಗಳನ್ನು ತಾವೆಲ್ಲರೂ ತಮ್ಮ ತಮ್ಮ ಕೆಲಸಗಳ ಮೂಲಕ ಜ್ಞಾನಕ್ಕೆ ಕರೆದುಕೊಂಡು ಹೋಗಬೇಕಾಗಿದೆ.

**ಕಾಳವ್ವೆ :** ಅದು ನಮ್ಮಿಂದ ಸಾಧ್ಯವೇ ಬಸವರಸ ? ನಾವು ನಮ್ಮ ಉಪಜೀವನಕ್ಕಾಗಿ ಮೈ ಮಾರಿಕೊಳ್ಳುತ್ತಿದ್ದೇವೆ. ಅವರು ತಮ್ಮ ಕಾಮದ ಸುಖಕ್ಕಾಗಿ ನಮ್ಮನ್ನು ಬಳಕೆ ಮಾಡಿಕೊಳ್ಳುತ್ತಿದ್ದಾರೆ. ಹೀಗಿದ್ದ ಮೇಲೆ ಅವರಿಗೆ ನಾವು ಏನನ್ನು ಭೋದಿಸಿ ಜ್ಞಾನಕ್ಕೆ ಕರೆದುಕೊಂಡು ಹೋಗಬಹುದು? ಅದು ನಮಗೆ ತಿಳಿದಿಲ್ಲ ಬಸವರಸ.

**ಬಸವಣ್ಣ:** ಚರ್ಮ ಹೆಣ್ಣು ಅಲ್ಲ ಗಂಡೂ ಅಲ್ಲ, ನೋಡುವ ಕಣ್ಣು ಕೂಡ ಹೆಣ್ಣು ಅಲ್ಲ ಗಂಡು ಕೂಡ ಅಲ್ಲ . ಕಾಯ ತಪ್ಪಾಗಿ ತಾನು ಗಂಡು ಎಂದು, ಹೆಣ್ಣು ಎಂದು ತಿಳಿದುಕೊಂಡಿದೆ. ಹೀಗಾಗಿ ಒಂದು ಕಾಯದ ಶೋಷಣೆಯನ್ನು ಮತ್ತೊಂದು ಕಾಯ ಮಾಡುತ್ತಲಿದೆ.

**ಕಾಳವ್ವೆ:** ನಮ್ಮ ಮನೆಗೆ ಬರುವವರೆಲ್ಲ ಕಾಮದ ಕಣ್ಣುಳ್ಳವರು . ನಮ್ಮ ಕಾಯದೊಂದಿಗೆ ತಮ್ಮ ಕಾಯದ ಮೂಲಕ ಕಾಮದ ಸುಖ ಪಡೆಯಲು ಬರುತ್ತಾರೆ. ಅದು ತೀರುವವರೆಗೆ ನಾವು ಅವರಿಗೆ ರಂಭೆ ರತಿಯರಾಗಿ ಕಾಣುತ್ತೇವೆ . ಅವರ ಸುಖ ತೀರಿದ ಮೇಲೆ ಪುನಃ ನಮ್ಮನ್ನು ನಿಕೃಷ್ಟವಾಗಿ ನೋಡುತ್ತಾರೆ . ಸಮಾಜ ನಮ್ಮನ್ನು ನೋಡುವ ದೃಷ್ಟಿಕೋನವೇ ಬೇರೆ. ಸಮಾಜದ ಕಾಮದ ಸುಖಕ್ಕಾಗಿ ಸಮಾಜವೇ ನಮಗೆ ವೇಶ್ಯೆ ಎಂದು ಹಣೆಪಟ್ಟಿ ಕಟ್ಟಿದೆ. ಅತ್ಯಂತ ನೀಚ ದೃಷ್ಟಿಯಿಂದ ನೋಡುವ ಸಮಾಜ ಪುನಃ ನಮ್ಮನ್ನು ಉತ್ತಮರೆಂದು ನೋಡಲು ಸಾಧ್ಯವೇ ಬಸವರಸ? ನಮ್ಮನ್ನು ಗೌರವಿಸಿ, ನಾವು ಕೂಡ ಅವರಂತೆ ಇದ್ದೇವೆ ಎಂದು ತಿಳಿದು ಅವರಲ್ಲಿ ನಮ್ಮನ್ನು ಒಂದು ಮಾಡಿಕೊಳ್ಳಲು ಸಾಧ್ಯವೇ ಎನ್ನೊಡೆಯ?

**ಬಸವಣ್ಣ:** ಕಾಯದಲ್ಲಿ ಸಂಗಮವಾದ ಸತ್ಯವನ್ನು ಕಾಯವನ್ನು ಆವರಿಸಿದ ಮನ ಗಮನಿಸಿದಾಗ ಇವು ತನಗೆ ತಾನೇ ಎಷ್ಟೊಂದು ಶ್ರೇಷ್ಠ ಎಂದು ಗಮನಕ್ಕೆ ಬರುತ್ತದೆ . ಮತ್ತೊಬ್ಬರಿಗೆ ತಾವು ಶ್ರೇಷ್ಠ ಅಲ್ಲದಿದ್ದರೂ ತಮಗೆ ತಾವು ಶ್ರೇಷ್ಟವೆಂದು ತಿಳಿಯುವ

ಕಾಲ ಸನ್ನಿಹಿತವಾಗಿದೆ .

**ಕಾಳವ್ವೆ:** ಮತ್ತೊಬ್ಬರು ನಮಗೆ ಗೌರವ ಕೊಡದಿದ್ದರೆ, ನಮಗೆ ನಾವು ಶ್ರೇಷ್ಠ ಎಂದು ತಿಳಿಯುವುದರಲ್ಲಿ ಅರ್ಥವೇನಿದೆ ಬಸವರಸ ?

**ಬಸವಣ್ಣ:** ನನಗೆ ನಾನು ಶ್ರೇಷ್ಠ. ಏಕೆಂದರೆ , ನನ್ನ ದೇಹ ಬರೀ ದೇಹವಲ್ಲ ಅದು ಅರಿವಿನ ದೇವರಿದ್ದ ದೇವಾಲಯ .ಆ ದೇವರನ್ನು ನನ್ನ ದೇಹವೆಂಬ ದೇವಾಲಯದಲ್ಲಿಯೇ ಮನವೆಂಬ ನಾನು ದರುಶನ ಮಾಡಿಕೊಳ್ಳಬೇಕಾಗಿದೆ.

ಕಾಯಕ ಎನ್ನುವುದು ಉಪಜೀವನಕ್ಕಾಗಿ. ಜೀವನ ಎನ್ನುವುದು ಬೇರೆಯೇ ಇದೆ. ಆ ಜೀವನಕ್ಕೆ ಬೇಕಾದ ದಾರಿಯನ್ನು ದೇಹವುಳ್ಳ ಪ್ರತಿಯೊಬ್ಬನು ದೇಹದಲ್ಲಿಯೇ ಕಂಡುಕೊಳ್ಳಬೇಕಾಗಿದೆ. ತಾನು ಕಂಡುಕೊಂಡ ಅರಿವಿನ ದಾರಿಯಲ್ಲಿ ತಾನೇ ಸ್ವತಃ ನಡೆದರೆ, ಪ್ರತಿ ದೇಹಕ್ಕೂ ದೇಹವನ್ನು ಆವರಿಸಿದ ಮನಕ್ಕೂ ದೇಹದಲ್ಲಿಯೇ ಇದ್ದ ದೇವರ ದರುಶನ ಸುಲಭವಾಗಿಯೇ ಆಗುತ್ತದೆ.

**ಕಾಳವ್ವೆ:** ದೇವಾಲಯಗಳಲ್ಲಿಯ ದೇವರ ದರುಶನವು ಹೀನ ಕುಲದ ಜನರಿಗೆ ಸಾಧ್ಯವಾಗುತ್ತಿಲ್ಲ ಬಸವರಸ. ಅಂದ ಮೇಲೆ ನಮ್ಮನ್ನು ಗೌರವಿಸುವುದು ಬಹಳ ದೂರದ ಮಾತು.

**ಬಸವಣ್ಣ:** ನಮ್ಮನ್ನು ಗೌರವಿಸಬೇಕೆಂಬುದು ಮನದ ಕೆಲಸ. ಮಾನ ಅಪಮಾನ ಒಂದು ನಾಣ್ಯದ ಎರಡು ಮುಖಗಳಿದ್ದಂತೆ . ಜ್ಞಾನಿಗಳು ಮಾನಕ್ಕೆ ಹಿಗ್ಗುವುದಿಲ್ಲ, ಅಪಮಾನಕ್ಕೆ ಕುಗ್ಗುವುದಿಲ್ಲ . ಮಾನ ಅಪಮಾನ ಎನ್ನುವ ರೋಗ ಸಮಾಜದಲ್ಲಿ ಮಹಾಮಾರಿಯಾಗಿ ಹಬ್ಬಿದೆ. ಅವೆರಡನ್ನೂ ಸಹಜವಾಗಿ ಸ್ವೀಕರಿಸುವ ಅರಿವಿನ ಶಕ್ತಿ ಪ್ರತಿ ಕಾಯದಲ್ಲಿ ಇದ್ದರೂ ಕಾಯ ಮತ್ತು ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವಿನ ಮಹಾ ಶಕ್ತಿಯನ್ನು ಮರೆತು ಹೋಗಿರುವುದರಿಂದ ಮಾನ ಅಪಮಾನಗಳ ಯುದ್ದವೇ ನಡೆದಿದೆ.

**ಕಾಳವ್ವೆ:** ಬಸವರಸ , ನಮ್ಮ ಮನೆಗೆ ಬಂದ ಅತಿಥಿಗಳನ್ನು ನಾವು ನೋಡಿಕೊಳ್ಳುವ ಬಗೆ ಹೇಗೆ ತಂದೆ ? ಪುನಃ ಅವರನ್ನು ಸರಿ ದಾರಿಗೆ ಕಳಿಸುವ ಬಗೆಯಾದರೂ ಹೇಗೆ?

**ಬಸವಣ್ಣ:** ಅದನ್ನು ಹೇಳುವುದಕ್ಕಾಗಿಯೇ ತಮ್ಮನ್ನು ಈ ಸಭೆಗೆ ಕರೆಯಲಾಗಿದೆ ತಾಯಿ. ಇನ್ನು ಮುಂದಿನ ಎಲ್ಲಾ ಸಭೆಗಳಿಗೆ ತಾವು ತಪ್ಪದೇ ಬರುವುದಾಗಿ ತಮ್ಮಿಂದ ಹೇಳಲು ಸಾಧ್ಯವೇ?

**ಕಾಳವ್ವೆ:** ಬಸವರಸ ಆದೇಶ ನೀಡಿ , ನಮ್ಮೆಲ್ಲರನ್ನೂ ಈ ಸಭೆಗೆ ಕರೆಯಿಸಿಕೊಳ್ಳಿ,ತಾವು ನಮ್ಮ ಪ್ರಭುಗಳು. ಕಲ್ಯಾಣದ ಭಂಡಾರಿ. ಭಕ್ತಿ ಭಂಡಾರಿ ಎಂದು ಕರೆಯಿಸಿಕೊಂಡ ಮಹಾತ್ಮರು ತಾವು. ತಮ್ಮ ಸಭೆಗೆ ಪ್ರತಿನಿತ್ಯ ಬರುವುದೆಂದರೆ, ನಮಗೆ ಹೆಮ್ಮೆಯ ವಿಷಯ. ಬೆಳಗಿನ ಸತ್ಸಂಗದ ಸಭೆಗೆ ನಾವೆಲ್ಲರೂ ಹಾಜರಾಗುತ್ತೇವೆ. ಸಂಜೆಯ ಸಭೆಗೆ ನಮಗೆ ಬರಲು ಸಾಧ್ಯವಾಗುವುದಿಲ್ಲ .

**ಬಸವಣ್ಣ:** ಆಗಲಿ ತಾಯಿ . ಸಂಜೆಯ ಸಭೆಗೆ ತಾವುಗಳು ಯಾರು ಬರುವುದು ಬೇಡ. ತಾವೆಲ್ಲರೂ ತಮ್ಮ ತಮ್ಮ ಮನೆಯಲ್ಲಿಯೇ ಸತ್ಸಂಗಕ್ಕಾಗಿ ಅಣಿಗೊಳ್ಳಿ.

**ಕಾಳವ್ವೆ:** ಮನ್ನಿಸಿ ಬಸವಣ್ಣ ಸಂಜೆ ನಮ್ಮೊಂದಿಗೆ ಕಲ್ಯಾಣದ ಯುವಕರು ಕಾಮ ಕ್ರೀಡೆಯಾಡಲು ಬರುತ್ತಾರೆ. ನಮ್ಮೊಂದಿಗೆ ಸರಸವಾಡಲು ಬರುತ್ತಾರೆ. ಅವರೊಂದಿಗೆ ಸತ್ಸಂಗ ಮಾಡಲು ಹೋದರೆ ಅವರು ಕೇಳಲು ಸಾಧ್ಯವೇ? ಉದ್ರೇಕದಿಂದ ರಕ್ಕಸರೂಪ ತಾಳಿರುತ್ತಾರೆ. ನಮ್ಮ ಮೇಲೆ ನಾಯಿಗಳಂತೆ ಹಾರಿ ಹರಿದು ತಿನ್ನುತ್ತಾರೆ. ಅವರೊಂದಿಗೆ ಸತ್ಸಂಗ ಮಾಡುವುದಾದರೂ ಹೇಗೆ ಬಸವರಸ ?

**ಬಸವಣ್ಣ :** ಅದನ್ನೇ ಹೇಳಿದೆ ತಾಯಿ .

ಯುವಕರು ತಮ್ಮ ಹತ್ತಿರ ಬಂದಾಗ ತಾವು ಅವರನ್ನು ದೂರ ನಿಲ್ಲಿಸಿ , ವಿವಸ್ತ್ರರಾಗಿ. ಅವರನ್ನು ನಿಮ್ಮ ಹತ್ತಿರ ಬರಗೊಡಬೇಡಿ ಕ್ಷಣಾರ್ಧದಲ್ಲಿ ಯುವಕರ ಕಾಮದ್ರವ್ಯ ತನಗೇ ತಾನೇ ನಷ್ಟವಾಗುತ್ತದೆ. ಆಗ ಅವರನ್ನು ಆದರದಿಂದ ಮಾತನಾಡಿಸಿ . ಮತ್ತೇ ಆಲಿಂಗನಕ್ಕೆ ಕರೆದು ಅಪ್ಪಿಕೊಳ್ಳಲು ಪ್ರಯತ್ನಿಸಿ ಯುವಕರು ಆಲಿಂಗನಕ್ಕೆ ಒಪ್ಪಿಕೊಳ್ಳುವುದಿಲ್ಲ . ಏಕೆಂದರೆ ಅವರ ಕಾಮದ್ರವ್ಯ ಅವರಿಂದಲೇ ನಷ್ಟವಾಗಿ ಅವರಿಗೆ ಸುಖವಾದದ್ದು ಅವರ ಗೋಚರಕ್ಕೆ ಬರುತ್ತದೆ . ಅವರು ನಾಳೆ ಬರುವುದಾಗಿ ಹೇಳಿದಾಗ , ಅವರನ್ನು ಪುನಃ ಮೃದುವಾಗಿ ಮಾತನಾಡಿಸಿ ; ಉತ್ತಮವಾದ ಹಾಸಿಗೆಯಲ್ಲಿ ಕೂರಿಸಿ, ನಿಮ್ಮ ಕಾಯದಲ್ಲಿದ್ದ ಕಾಮದ ಸುಖ ನಿಮ್ಮ ಕಾಯದಿಂದಲೇ ನಷ್ಟವಾಯಿತು. ಆಯಾ ಕಾಯದ ಸುಖ ಆಯಾ ಕಾಯದಲ್ಲಿಯೇ ಇದ್ದರೂ ಕೂಡ ಮತ್ತೊಂದು ಕಾಯದಿಂದ ಕಾಯಕ್ಕೆ ಸುಖವಾಗುತ್ತದೆ. ಎಂದು ತಪ್ಪಾಗಿ ಭಾವಿಸಿರುವಿರಿ ಎಂದು ಹೇಳಿ .

ಸುಖ ನಿಮ್ಮಲ್ಲಿದೆ ಎಂದು ಯುವಕರು ತಿಳಿದಿರುತ್ತಾರೆ. ನೀವು ಅವರಲ್ಲಿದ್ದ ಸುಖವನ್ನು ಅವರಿಗೆ ಪರಿಚಯಿಸಿ ಸಮಾಧಾನಪಡಿಸಿ .

ಹೆಚ್ಚಿನ ಅರಿವಿನ ವಿಷಯವನ್ನು ತಿಳಿದುಕೊಳ್ಳಲು ಆ ಯುವಕರನ್ನು ''ಮಹಾ ಮನೆ ''ಗೆ ಕಳಿಸುವ ಜವಬ್ದಾರಿಯನ್ನು ನಿಮ್ಮೆಲ್ಲರಿಗೂ ಒಪ್ಪಿಸುತ್ತಿದ್ದೇನೆ ಕಾಳವ್ವೆ, ತಾವೆಲ್ಲರೂ ಈ ಕೆಲಸವನ್ನು ಮಾಡಿ ತಮ್ಮ ಅಜ್ಞಾನವನ್ನು ತಾವೇ ಕಳೆದುಕೊಂಡು ತಾವೇ ಮುಕ್ತರಾಗಬೇಕೆಂದು ನಿಮ್ಮೆಲ್ಲರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

**ಕಾಳವ್ವೆ:** ಬಸವರಸ ಅಜ್ಞಾನದಿಂದಾಗಿ ನಮ್ಮ ನಮ್ಮ ಹೊಟ್ಟೆಪಾಡಿಗಾಗಿ ನಾವು ಈ ಕಾಯಕದಲ್ಲಿ ಮುಂದುವರೆದು ನಿಕೃಷ್ಠ ಜೀವನವನ್ನು ಮುಂದುವರೆಸಿದ್ದೇವೆ. ಇಂದು ತಮ್ಮ ಒಂದೇ ಒಂದು ಸೂತ್ರದಿಂದ ನಮ್ಮ ಕಣ್ಣು ತೆರೆಯಿತು. ಈ ಕೆಲಸಕ್ಕೆ ಅಣಿ ಮಾಡಿದ ನಿಮ್ಮ ಅರಿವಿನ ಮಾತುಗಳಿಂದ ನಮ್ಮ ಅಜ್ಞಾನ ಸುಟ್ಟು ಬೂದಿಯಾಯಿತು. ನೀವು ಹೇಳಿದ ಕೆಲಸವನ್ನು ನಾವೆಲ್ಲರೂ ಚಾಚೂ ತಪ್ಪದೇ ಮಾಡುತ್ತೇವೆಂದು ನಿಮ್ಮ ಮುಂದೆ ಪ್ರತಿಜ್ಞೆ ಮಾಡುತ್ತೇವೆ.

**ಬಸವಣ್ಣ:** ನಾನು ಧನ್ಯನಾದೆ ತಾಯಿ. ನಿಮ್ಮ ಮಾತು ಕೇಳಿ ನನಗೆ ಆನಂದವಾಯಿತು. ಇನ್ನು ಮುಂದೆ ತಾವೆಲ್ಲರೂ ಪುಣ್ಯಾಂಗನೆಯರು. ಸಾಕ್ಷಾತ್ ಕೂಡಲ ಸಂಗಯ್ಯನ ಮಕ್ಕಳು. ತಮ್ಮೆಲ್ಲರಿಗೂ ಶರಣು ಶರಣಾರ್ಥಿ.

**ಚನ್ನಬಸವಣ್ಣ:** ಬಸವರಸರ ಮಾತು ಕೇಳಿ ನಮ್ಮ ಕಣ್ಣಲ್ಲಿ ಆನಂದ ಬಾಷ್ಪಗಳು ಉದುರಿದವು. ಕಾಯದಲ್ಲಿ ಅದ್ಭುತವಾದ ಅರಿವಿನ ಶಕ್ತಿ ಬಚ್ಚಿಟ್ಟುಕೊಂಡಿದೆ ಎಂಬುದನ್ನು ಸವಿವರವಾಗಿ ತಮಗೆ ಮಾಹಿತಿ ನೀಡಿದರು. ನಾನು ನನ್ನ ತಾಯಿ ಅಕ್ಕಮ್ಮ ಈ ಸಭೆಯಲ್ಲಿ ಸಾಕ್ಷಿಯಾದಂತಹ ಶರಣೆ ಸತ್ಯಕ್ಕ ಧನ್ಯರು . ತಮ್ಮೆಲ್ಲರಿಗೂ ಶರಣು ಶರಣಾರ್ಥಿ ಎಂದು

ಸಭಗೆ ಮಂಗಲ ಹಾಡಿ, ಕಲ್ಯಾಣದ ಸಕಲ ಪುಣ್ಯಾಂಗನೆಯರನ್ನು ಬೀಳ್ಕೊಟ್ಟರು.

## ಸಂತಾನಕ್ಕಾಗಿ ಸಂಗವೇ ಹೊರತು ಕಾಮ ತೃಪ್ತಿಗಾಗಿ ಅಲ್ಲ ಎನ್ನುವುದನ್ನು ಕಾಯ ಮರೆತುಹೋಗಿದೆ

ಇನ್ನೂ ಸೂರ್ಯಾಸ್ತವಾಗಿಲ್ಲ ಸಕಲ ಶರಣ ಶರಣೆಯರು ಕುತೂಹಲದಿಂದ ಬಂದು ಮಹಾಮನೆಯಲ್ಲಿ ಕುಳಿತಿದ್ದಾರೆ. ಬೆಳಗಿನ ಸಭೆಯಲ್ಲಿ ಪುಣ್ಯಾಂಗನೆಯರೊಂದಿಗೆ ಬಸವಣ್ಣ ಮತ್ತು ಚನ್ನಬಸವಣ್ಣ ಯಾವ ವಿಷಯದ ಕುರಿತು ಮಾತನಾಡಿದರೂ ಎಂಬ ಕುತೂಹಲದಿಂದ ಕುಳಿತಿದ್ದಾರೆ. ಬಸವಣ್ಣ ಚನ್ನಬಸವಣ್ಣ ವೇದಿಕೆಗೆ ಆಗಮಿಸಿ ಸಕಲ ಶರಣರಿಗೂ ಕೈ ಮುಗಿದು ಶರಣು ಶರಣಾರ್ಥಿ ಎಂದು ಹೇಳುತ್ತ ಕುಳಿತುಕೊಳ್ಳುವರು .

**ಸತ್ಯಕ್ಕ :** ಬಸವರಸ ಬೆಳಗಿನ ಸಭೆಯಲ್ಲಿ ಪುಣ್ಯಾಂಗನೆಯರೊಂದಿಗೆ ನಡೆದ ಸತ್ಸಂಗದ ಮಾತುಗಳು ಇಡೀ ಕಲ್ಯಾಣದ ತುಂಬಾ ಹರಡಿವೆ. ಪುಣ್ಯಾಂಗನೆಯರೊಂದಿಗೆ ಬಸವರಸ ಮಾತನಾಡಿದ ವಿಷಯವಾದರೂ ಏನು ಎನ್ನುವ ಕುತೂಹಲದಿಂದ ಸಕಲ ಶರಣರು ಕಾದು ಕುಳಿತಿದ್ದಾರೆ. ಅವರೆಲ್ಲರಿಗೂ ಸಾಧ್ಯವಾದರೆ, ಸಂಕ್ಷಿಪ್ತವಾಗಿ ಹೇಳಲು ಸಾಧ್ಯವೇ ಬಸವರಸ ?

**ಬಸವಣ್ಣ:** ಸಕಲ ಶರಣರು ಕೂಡ ಕೇಳಲೇಬೇಕಾದ ಮಾತು ; ಆದರೆ ಈ ವಿಷಯ ಗೌಪ್ಯವಾಗಿರಲಿ . ಸಕಲ ಪ್ರಾಣಿ , ಪಶು , ಪಕ್ಷಿ , ಕೀಟ ಉರಗ ಜಲಚರಗಳು ಸಂತಾನಕ್ಕಾಗಿ ಒಂದನ್ನು ಒಂದು ಕೂಡುತ್ತವೆ. ಗರ್ಭದಾನ ಆದ ನಂತರ ಅವು ತೃಪ್ತಿಯಿಂದ ಇರುತ್ತವೆ. ತನಗೆ ಸಂತಾನ ಭಾಗ್ಯ ಆಯಿತು ಎಂದು ಒಂದು ಪ್ರಾಣಿ ತಿಳಿದರೆ, ಮತ್ತೊಂದು ಪ್ರಾಣಿ ತಾನು ಗರ್ಭದಾನ ಮಾಡಿದೆ ಎಂದು ಸಂತೃಪ್ತಿಯಲ್ಲಿ ಇರುತ್ತದೆ. ಆದರೆ ಮನುಷ್ಯ ಮಾತ್ರ ಸಂತಾನಕ್ಕಾಗಿ ಒಂದು ಕಾಯ ಮತ್ತೊಂದು ಕಾಯದೊಂದಿಗೆ ಲೈಂಗಿಕ ಕ್ರಿಯೆಯಲ್ಲಿ ತೊಡಗುತ್ತದೆ. ಎನ್ನುವುದನ್ನು ಎರಡು ಕಾಯಗಳು ಮರೆತು ಹೋಗಿವೆ.

ಹೀಗಾಗಿ ಕಾಯ ಸಂತಾನಕ್ಕಾಗಿ ಮತ್ತೊಂದು ಕಾಯದೊಂದಿಗೆ ಸಂಬಂಧ ಬೆಳೆಸದೇ ಕಾಮದ ತೃಪ್ತಿಗಾಗಿ ಸಂಬಂಧ ಬೆಳೆಸುತ್ತದೆ . ಕಾಯದ ರೂಪಕ್ಕೆ ಮತ್ತೊಂದು ಕಾಯ ಮರುಳಾಗುತ್ತದೆ. ಪ್ರಾಣಿಗಳಿಗೆ ತಿಳಿದ ವಿಷಯ ಮನುಷ್ಯನಿಗೆ ತಿಳಿಯಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ವೇಶ್ಯಾವೃತ್ತಿ ನಿರ್ಮಾಣವಾಯಿತು .

ಕಾಯ, ಕಾಯದೊಂದಿಗೆ ಕಾಮಕ್ಕಾಗಿ ತನ್ನನ್ನು ತಾನು ತೊಡಗಿಸಿಕೊಂಡು ತನ್ನ ಅಜ್ಞಾನವನ್ನು ಮೆರೆಯಿತು . ಕಾಯ ಮತ್ತೊಂದು ಕಾಯದೊಂದಿಗೆ ಸಂತಾನದ ಇಚ್ಛೆ ಇದ್ದರೆ ಮಾತ್ರ ಕೂಡಬೇಕು.ಅದು ಸತಿ - ಪತಿ ಎಂದು ಸಮಾಜದಲ್ಲಿ ಒಪ್ಪಂದ ಮಾಡಿಕೊಂಡ ಕಾಯದ ಮುಖಾಂತರ ಮಾತ್ರ ಸಂತಾನ ಪಡೆಯಬೇಕು . ಹಿಂದೆ ಋಷಿಮುನಿಗಳು ಈ ಭೂಮಿಗೆ ಒಬ್ಬ ಮಹಾ ಜ್ಞಾನಿಯ ಅವಶ್ಯಕತೆ ಇದೆ ಎಂದು ತಮಗೆ ಮನವರಿಕೆಯಾದಾಗ ಮಾತ್ರ ಸತಿಪತಿಗಳಿಬ್ಬರೂ ಕೂಡಿ ಸಂತಾನ ಪಡೆಯುತ್ತಿದ್ದರು .

**ಸತ್ಯಕ್ಕ :** ಈ ಭೂಮಿಯ ಮೇಲೆ ವಾಸ ಮಾಡುತ್ತಿರುವ ಸಾಕಷ್ಟು ಕಾಯಗಳು ಕಾಮದ ಇಚ್ಛೆಗಾಗಿ ಕೂಡುತ್ತವೆಯೇ ಹೊರತು ಸಂತಾನ ಬೇಕೆನ್ನುವ ಇಚ್ಛೆಯಿಂದ ಅಲ್ಲ ಎಂದು ನನಗೆ ಅನ್ನಿಸುತ್ತಿದೆ ಬಸವಣ್ಣ .

**ಬಸವಣ್ಣ:** ಹೌದು ತಾಯಿ . ಸತಿಪತಿಗಳು ಆದವರು ಯಾವ ಇಚ್ಛೆಯಿಂದ ಕೂಡುವರೋ ಅವರಿಂದ ಪ್ರಸಾರವಾಗುವ ಬೀಜ ಆಯಾ ಇಚ್ಛೆಯನ್ನು ಒಳಗೊಂಡು, ಮಗು ಗರ್ಭದಿಂದ ಹೊರ ಬರುತ್ತದೆ.

ಮಗು ಪ್ರೌಢತ್ವಕ್ಕೆ ಬಂದಾಗ ತಂದೆ ತಾಯಿಗಳ ಮೂಲಕ ಬಳುವಳಿಯಾಗಿ ಬಂದ ಅಜ್ಞಾನವನ್ನು ತನಗೆ ಇಚ್ಛೆಯಾದರೆ ಮಾತ್ರ ತನ್ನ ಜ್ಞಾನದಿಂದಲೇ ತಾನು ಕಳೆದುಕೊಳ್ಳುತ್ತದೆ. ತಂದೆ ತಾಯಿಗಳಿಗೆ ಬಂಧು ಬಳಗಕ್ಕೆ ಮಗುವಿನ ಅಜ್ಞಾನ ಕಳೆಯಲು ಬರುವುದಿಲ್ಲ. ತಮ್ಮ ಅಜ್ಞಾನವನ್ನು ತಾವೇ ಕಳೆದುಕೊಳ್ಳಲು ಸಿದ್ದರಾದರೆ ಮಾತ್ರ ತಮ್ಮದೇ ಆದ ಜ್ಞಾನದಿಂದ ತಮ್ಮ ಅಜ್ಞಾನವನ್ನು ಸುಟ್ಟುಕೊಳ್ಳಬಹುದು.

**ಸತ್ಯಕ್ಕ :** ಕಾಯ, ಕಾಯವನ್ನೇ ಮುಟ್ಟಿ ವಿಕೃತಗೊಳ್ಳುತ್ತದೆ. ಅಜ್ಞಾನದಿಂದ ಉದ್ರೇಕಕ್ಕೆ ಒಳಗಾಗಿ ಕಾಯ ಕಾಯವನ್ನೇ ಹರಿದು ತಿನ್ನುವ ರಕ್ಕಸ ನಂತಾಗುತ್ತದೆ. ಇದನ್ನು ತಡೆದುಕೊಳ್ಳುವ ಬಗೆ ಹೇಗೆ ಪ್ರಭು ?

**ಬಸವಣ್ಣ :** ಲೋಕ ತಡೆದುಕೊಳ್ಳುವ ಪ್ರಯತ್ನದಲ್ಲಿಯೇ ಇದೆ. ಮನಸ್ಸಿನ ಅಜ್ಞಾನದ ಕಟ್ಟೆ ಯೊಡೆದಾಗ ತನಗೆ ತಾನೇ ಕಾಯ ವಿಕೃತಗೊಂಡು ರಕ್ಕಸನಾಗುತ್ತದೆ.

**ಸತ್ಯಕ್ಕ :** ತನುವಿನಲ್ಲಿ ಹುಟ್ಟುವ ರಕ್ಕಸತನಕ್ಕೆ ಮದ್ದಿಲ್ಲವೇ ಬಸವರಸ ?

**ಬಸವಣ್ಣ :** ಸುಂದರವಾದ ಪ್ರಶ್ನೆಯನ್ನೇ ಕೇಳಿದಿರಿ ಸತ್ಯಕ್ಕ.

ರಕ್ಕಸತನವು ತನುವಿನಲ್ಲಿ ಇದೆ. ಅದನ್ನು ಕೊಂದು ಹಾಕುವ ಮಹಾಜ್ಞಾನವು ಕೂಡಾ ತನುವಿನಲ್ಲಿಯೇ ಇದೆ.

**ಸತ್ಯಕ್ಕ :** ಅದು ಹೇಗೆ ಬಸವರಸ , ದಯವಿಟ್ಟು ವಿವರಿಸಿ ಹೇಳಿ.

**ಬಸವಣ್ಣ :** ಚರ್ಮಕ್ಕೆ ಜಾತಿ ಇಲ್ಲ. ಚರ್ಮವನ್ನು ಆವರಿಸಿದ ಮನೋಮಯವಾದ ಚರ್ಮದಿಂದಾಗಿ ಚರ್ಮದಲ್ಲಿ ಹೆಣ್ಣು ಗಂಡು ಎನ್ನುವ ಅಜ್ಞಾನ ಸೃಷ್ಟಿಯಾಗಿದೆ.

**ಸತ್ಯಕ್ಕ :** ಹಾಗಾದರೆ , ಕಾಯ ಹೆಣ್ಣೆಂದು ಗಂಡೆಂದು ನೋಡಿ ನಿರ್ಧರಿಸುವ ಕಾಯ ಕೂಡಾ ಅಜ್ಞಾನ ಕಾಯವೇ ಹೇಗೆ ?

**ಬಸವಣ್ಣ :** ಹೌದು ತಾಯಿ . ಕಾಯದಲ್ಲಿ ಯಾವ ಪದಾರ್ಥಗಳು ಹೆಣ್ಣು ಅಲ್ಲ . ಗಂಡು ಅಲ್ಲ ಚರ್ಮ, ರಕ್ತ , ಮೂಳೆ, ಮಾಂಸ, ಮಜ್ಜ , ಮೇದಸ್ಸು , ಉಗುರು, ರೋಮ ಈ ಎಲ್ಲಾ ಪದಾರ್ಥಗಳು ಎರಡು ಕಾಯಗಳಲ್ಲಿಯೂ ಇವೆ. ಸಂತಾನಕ್ಕಾಗಿ ಸ್ವಲ್ಪ ಭಿನ್ನ ರೀತಿಯಿಂದ ನಿರ್ಮಾಣವಾಗಿವೆ. ಆದರೆ ಕಾಯದಲ್ಲಿರುವ ಪದಾರ್ಥಗಳೆಲ್ಲ ಒಂದೆ.

**ಸತ್ಯಕ್ಕ :** ಹೌದು ಬಸವರಸರೇ . ತಾವು ಹೇಳುವ ಮಾತು ನಮ್ಮೆಲ್ಲರ ಅನುಭವಕ್ಕೆ ಬರುತ್ತದೆ. ಆದರೂ ಕೂಡ ಸಂತಾನದ ಬಯಕೆಗಾಗಿ ಇರುವ ಸುಖದ ದ್ರವ್ಯ ರುಚಿಯಾಗಿ

ಮಾರ್ಪಟ್ಟಿರುವ ಕಾರಣವಾದರೂ ಏನು ?

**ಬಸವಣ್ಣ :** ಇಂತಹ ಗಂಭೀರವಾದ ವಿಷಯವನ್ನು ಒಳಹೊಕ್ಕು ನೋಡಿ ಅದನ್ನು 'ರುಚಿ ' ಎಂದು ಹೇಳಿದೆಯಲ್ಲ ತಾಯಿ, ನಿನ್ನ ತಿಳುವಳಿಕೆಗೆ ಶರಣು ಶರಣಾರ್ಥಿ.

**ಸತ್ಯಕ್ಕ :** ನನಗೆ ತಿಳಿಯದ್ದನ್ನು ತಿಳಿಯಬೇಕು ಎಂಬ ಕುತೂಹಲದಿಂದ ತಮ್ಮನ್ನು ಕೇಳಿದೆ ಬಸವರಸ. ತಾವು ಇಷ್ಟು ದೊಡ್ಡ ಮಾತು ಆಡಬಹುದೇ ಎನ್ನಯ್ಯ!

**ಬಸವಣ್ಣ :** ಮನವೆಂಬ ಮರವಿಗೆ ಹಿರಿಯ ಎಂಬ ಜಂಬವುಂಟು ಕಿರಿಯ ಎಂಬ ಅಜ್ಞಾನವುಂಟು. ಅರಿವಿಗೆ ಹಿರಿದು ಕಿರಿದು ಎನ್ನುವುದು ಇಲ್ಲವೇ ಇಲ್ಲ . ಅದು ವಿರಾಟ ಸ್ವರೂಪ. ಸಕಲ ಕಾಯಗಳಲ್ಲಿಯೂ ತನ್ಮಯವಾಗಿದೆ .

**ಸತ್ಯಕ್ಕ :** ಕಾಯದಲ್ಲಿಯೇ ಹುಟ್ಟುವ ಕಾಮದ ಉದ್ರೇಕ ನಾಶವಾಗುವುದು ಹೇಗೆ ಎಂದು ಹೇಳಿ ಬಸವರಸ .

**ಬಸವಣ್ಣ :** ಬೆಳಗಿನ ಸಭೆಯಲ್ಲಿ ಸಕಲ ಪುಣ್ಯಾಂಗನೆಯರಿಗೂ ಈ ಮಾತನ್ನೇ ಹೇಳಿ ಕಳಿಸಿರುವೆ ಸತ್ಯಕ್ಕ . ಅದನ್ನು ಮತ್ತೊಮ್ಮೆ ತಮ್ಮೆಲ್ಲರಿಗೂ ಹೇಳುವೆ . ನಿಧಾನವಾಗಿ ಆಲಿಸಿ.

ಪ್ರತಿ ಕಾಯದಲ್ಲಿ ಬೀಜ ರೂಪದ ದ್ರವ್ಯ ಇದೆ . ಅವು ಸಾಕ್ಷಾತ್ ಪರಮಾತ್ಮನು ಬಚ್ಚಿಟ್ಟುಕೊಂಡ ಬೀಜಗಳು . ಪ್ರತಿ ಬೀಜದಲ್ಲಿ ಅರಿವೆಂಬ ಗುರುದೇವನಿದ್ದಾನೆ. ಆ ಗುರುದೇವನನ್ನು ತಿಳಿಯುವ ಬಯಕೆಯುಳ್ಳ ಮನವೂ ಕೂಡಾ ಆ ಬೀಜಗಳಲ್ಲಿಯೇ ಬಚ್ಚಿಟ್ಟುಕೊಂಡಿದೆ .

ಈ ಬೀಜಗಳುಳ್ಳ ಕಾಯ ಜ್ಞಾನಕ್ಕೆ ಹೋಗಿ ಆ ಜ್ಞಾನಿಯೇ ತಾನಾಗದಿದ್ದರೆ , ಮತ್ತೊಂದು ಕಾಯ ಜನ್ಮ ಪಡೆಯುವುದಕ್ಕಾಗಿ ಆ ಬೀಜ ರೂಪದ ದ್ರವ್ಯ ತವಕ ಪಡುತ್ತದೆ . ಏಕೆಂದರೆ ತಾನು ಬಚ್ಚಿಟ್ಟುಕೊಂಡ ಕಾಯಕ್ಕೆ ಮತ್ತು ಮನಕ್ಕೆ ತನ್ನ ಅರಿವಿನ ವೃತ್ತಾಂತ ತಿಳಿಯದ್ದಕ್ಕಾಗಿ, ಮತ್ತೊಂದು ಕಾಯಕ್ಕೆ ಜನ್ಮಕೊಡಬೇಕೆಂಬ ಬಯಕೆ ಬೀಜರೂಪದ ಆ ದ್ರವ್ಯದಲ್ಲಿ ಅರಿವು ಎಂಬ ಪರಮಾತ್ಮನೇ ಸೃಷ್ಟಿಮಾಡಿದ್ದಾನೆ .

ಕಾಯದಲ್ಲಿದ್ದ ಬೀಜರೂಪದ ದ್ರವ್ಯವನ್ನು ಮತ್ತೊಬ್ಬ ಪರಮಾತ್ಮನ ಸೃಷ್ಟಿಗಾಗಿ ಒಪ್ಪಂದ ಮಾಡಿಕೊಂಡ ಕಾಯಕ್ಕೆ ಅರ್ಪಣೆ ಮಾಡಬೇಕೆ ಹೊರತು ಮತ್ತೇನೂ ಅಲ್ಲ . ಕಾಯದಲ್ಲಿಯ ಬೀಜರೂಪದ ದ್ರವ್ಯ, ಕಾಯಕ್ಕೆ ಅರ್ಪಣೆಯಾದಾಗ ಎರಡೂ ಕಾಯಗಳು ಶಿವಮಯವಾಗುತ್ತವೆ. ಆ ಎರಡೂ ಕಾಯಗಳಲ್ಲಿ ಮತ್ತೇ ಕಾಮಕ್ಕಾಗಿ ಕಾತುರ ಪಡುವ ಅಜ್ಞಾನ ಹುಟ್ಟುವುದೇ ಇಲ್ಲ .

**ಸತ್ಯಕ್ಕ :** ಉದ್ರೇಕದ ಅಜ್ಞಾನ ಕಳೆದುಕೊಳ್ಳುವ ಸೂತ್ರವನ್ನು ಮತ್ತಷ್ಟು ವಿವರವಾಗಿ ತಿಳಿಸಿ ಬಸವರಸ.

**ಬಸವಣ್ಣ :** ಆಗಲಿ ಸತ್ಯಕ್ಕ .

ತನ್ನನ್ನು ತಾನು ಮುಟ್ಟಿಕೊಂಡಾಗ ಚರ್ಮಕ್ಕೆ ಯಾವ ಉದ್ರೇಕವು ಆಗುವುದಿಲ್ಲ . ಏಕೆಂದರೆ, ತಾನು ಮುಟ್ಟುವ ಚರ್ಮವು ತನ್ನದೇ ಎಂದು ಚರ್ಮಕ್ಕೆ ಬಲವಾಗಿ ಗೊತ್ತಿದೆ. ಹೀಗಾಗಿ ಕಾಯಕ್ಕೆ ಉದ್ರೇಕವಾಗುವುದಿಲ್ಲ.

ತನ್ನನ್ನು ಇತರರು ಮುಟ್ಟಿದಾಗ ಇಡೀ ಕಾಯದಲ್ಲಿ ಕಾಮದ ಹಾವು ಹರಿದಾಡಿದಂತೆ ಭಾಸವಾಗಿ ಎರಡೂ ಕಾಯಗಳು ಉದ್ರೇಕಕ್ಕೆ ಒಳಗಾಗುತ್ತವೆ . ಏಕೆಂದರೆ ತನ್ನನ್ನು ಮುಟ್ಟುವ ಚರ್ಮ ಹೆಣ್ಣೆಂದು ತಾನು ಗಂಡೆಂದು ಚರ್ಮ ಅಜ್ಞಾನದ ಆಮಂತ್ರಣ ಮಾಡಿಕೊಳ್ಳುತ್ತದೆ.

ಇಲ್ಲಿ ತನ್ನನ್ನು ತಾನು ಮುಟ್ಟಿಕೊಂಡಾಗ ಮುಟ್ಟುವ ಚರ್ಮವು ಅರಿವಿನ ಚರ್ಮವಾಗಿತ್ತು. ಮುಟ್ಟಿಸಿಕೊಳ್ಳುವ ಚರ್ಮವು ಅರಿವಿನ ಚರ್ಮವಾಗಿತ್ತು .

ಮತ್ತೊಬ್ಬರು ಮುಟ್ಟಿದಾಗ , ನನ್ನ ಅರಿವಿನ ಚರ್ಮ ನನ್ನದೇ ಆದ ಚರ್ಮದ ಕೆಳಗೆ ಬಚ್ಚಿಟ್ಟುಕೊಂಡು ನನ್ನ ಮರೆವಿನ ಚರ್ಮ ಮೇಲೆ ಬಂದು , ನಾನು ಗಂಡು ಎಂದು ಮತ್ತೊಂದು ಚರ್ಮವನ್ನು ಹೆಣ್ಣು ಎಂದು ಮುಟ್ಟಿ ಚರ್ಮ ಅಜ್ಞಾನಕ್ಕೆ ಒಳಗಾಯಿತು . ಎರಡು ಅಜ್ಞಾನದ ಚರ್ಮಗಳ ಬಯಕೆ ತೀರಿ, ಕಾಯಗಳ ಮೂಲಕ ಬೀಜ ರೂಪದ ಕಾಮದ್ರವ್ಯ ಹೊರಚಿಮ್ಮಿದಾಗ ಎರಡೂ ಚರ್ಮಗಳಿಗೆ ಪುನಃ ಅರಿವಾಯಿತು. ಆಗ ಒಬ್ಬರನ್ನು ಮತ್ತೊಬ್ಬರು ಮುಟ್ಟಿಕೊಂಡರು ಕೂಡಾ ಉದ್ರೇಕಗೊಳ್ಳಲಿಲ್ಲ. ಏಕೆಂದರೆ ಎರಡೂ ಕಾಯದ ಅಜ್ಞಾನದ ಚರ್ಮಗಳಿಗೆ ಚರ್ಮವೆಂದು ಅರಿವಾಗಿ ಚರ್ಮದ ಅಜ್ಞಾನದ ಸ್ಪರ್ಶ ಜ್ಞಾನದಲ್ಲಿ ಸಂಗಮವಾಯಿತು.

ಇದು ಕಾಯದ ಸೂತ್ರ . ಕಾಯವನ್ನು ಕಾಯದ ದ್ರವ್ಯವನ್ನು ಹೊರಚೆಲ್ಲದಂತೆ ಸುಂದರವಾಗಿ ಬಂಧಿಸಿದ ಚರ್ಮದ ಸೂತ್ರ .

ಚರ್ಮದೊಳಗೆ ಚರ್ಮವಿದ್ದರೂ ಸ್ಪರ್ಶಿಸಲು ಅರಿಯದ ಚರ್ಮ ಸೂತ್ರ . ಈ ಸೂತ್ರವನ್ನು ತಿಳಿದು ಪ್ರಯೋಗಕ್ಕೆ ಹೋದವನೇ ಮಹಾಜ್ಞಾನಿ. ಇಂತಹ ತನುವಿನಲ್ಲಿ ತನ್ಮಯವಾದ ಮಹಾ ಜ್ಞಾನವನ್ನು ತನು ಮತ್ತು ಮನ ಸ್ವಪ್ರಯತ್ನದಿಂದಲೇ ಪಡೆದುಕೊಳ್ಳಬೇಕೆ ವಿನಃ ಬೇರೆ ಯಾವ ಗುರುದೇವ ಆಶೀರ್ವಾದ ಮಾಡಿದರೂ ಬರುವುದಿಲ್ಲ .

**ಚೆನ್ನಬಸವಣ್ಣ :** ನಿಮ್ಮ ಅಗಾಧವಾದ ಮಹಾಜ್ಞಾನ ಸೂತ್ರವನ್ನು ಕೇಳಿ ಸಕಲ ಶರಣರು ಧನ್ಯರಾದರು ಬಸವಣ್ಣ . ನಾವೆಲ್ಲರೂ ನಿಮಗೆ ಚಿರಋಣಿ ಎಂದು ಹೇಳುತ್ತ

ಸಭೆಗೆ ಮಂಗಲ ಹಾಡಿದರು .

# ಮುಟ್ಟಿ ಮುಟ್ಟಿ ಒಮ್ಮೆ ಕೆಡುವ ಕಾಯವನ್ನು ಮುಟ್ಟದೆ ತಟ್ಟದೆ ಕೆಡದ ಕಾಯದಿಂದಲೇ ತಿಳಿಯಬೇಕು

ಕತ್ತಲು ಬೆಳಕಿನ ಗರ್ಭದಲ್ಲಿ ಸೇರುವ ಸಮಯ ಹತ್ತಿರವಾಗುತ್ತಲಿದೆ . ಶರಣರು ಮಹಾ ಮನೆಯಲ್ಲಿ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡಿದ್ದಾರೆ. ಪುಣ್ಯಾಂಗನೆಯರು ಸಕಲ ಶರಣರೊಂದಿಗೆ ಬೆರೆತು ಒಂದಾಗಿದ್ದಾರೆ. ಬಸವಣ್ಣ , ಚೆನ್ನಬಸವಣ್ಣ ವೇದಿಕೆಗೆ ಆಗಮಿಸಿ, ಸಕಲ ಶರಣರಿಗೂ ಕೈ ಮುಗಿದು ಶರಣು ಶರಣಾರ್ಥಿ ಎಂದು ಹೇಳುತ್ತಾ ಕುಳಿತುಕೊಳ್ಳುತ್ತಾರೆ.

**ಕೇತಲಾದೇವಿ :** ಬಸವರಸ ಮತ್ತು ಚೆನ್ನಬಸವಣ್ಣನವರಿಗೆ ಸಕಲ ಶರಣ ಶರಣೆಯರಿಗೆ ಕೈ ಮುಗಿದು ಶರಣು ಶರಣಾರ್ಥಿ ಎಂದು ಹೇಳುತ್ತಾ , ಇಂದು ನಮ್ಮ ಜೀವನ ಪಾವನವಾಯಿತು ಬಸವಣ್ಣ . ಸಕಲ ಶರಣರೊಂದಿಗೆ ಕೂಡುವ ಭಾಗ್ಯ ನಮ್ಮೆಲ್ಲರಿಗೂ ಲಭ್ಯವಾಯಿತು . ಕಲ್ಯಾಣದ ಜನ ಪಣ್ಯಾಂಗನೆಯರೆಂದು ಈ ನಗರದ ಸೂಳೆಯರೆಂದು ನಮ್ಮನ್ನು ತುಚ್ಚವಾಗಿ ಕಾಣುತ್ತಿದ್ದರು . ಇನ್ನು ನಾವು ರೊಟ್ಟಿ ಚಟ್ನಿ ತಿಂದರೂ ಅಡ್ಡಿಯಿಲ್ಲ , ಹಣಕ್ಕಾಗಿ ನಮ್ಮನ್ನು ನಾವು ಮಾರಿಕೊಳ್ಳುವುದಿಲ್ಲ.

ನಮ್ಮನ್ನು ಈ ಸ್ಥಿತಿಗೆ ತಂದದ್ದು ಸಮಾಜವಲ್ಲವೆಂದು ತಮ್ಮಿಂದಲೇ ತಿಳಿಯಿತು ಬಸವರಸ. ತಾವು ಹೇಳಿದಂತೆ ನಮ್ಮ ತನುವಿನಲ್ಲಿಯೇ ತನ್ಮಯವಾದ ಅರಿವಿನೊಂದಿಗೆ ಸಂಗ ಮಾಡುವುದಕ್ಕಾಗಿ ಮನವನ್ನು ಪ್ರಾರ್ಥಿಸುತ್ತೇವೆ. ನಮ್ಮ ಅಜ್ಞಾನವನ್ನು ನಾವೇ ಕಳೆದುಕೊಂಡು ನಾವೆಲ್ಲರೂ ಜ್ಞಾನಿಗಳಾಗಿ ಪರಮಸಂತೋಷದಿಂದ ಇರಲು ಪ್ರಯತ್ನಿಸುತ್ತೇವೆ. ನಮ್ಮ ಈ ಬದಲಾವಣೆಗೆ ಕಾರಣರಾದ ನಿಮಗೆ ಹಾಗೂ ಸಕಲ ಶರಣರಿಗೂ ಶರಣು ಶರಣಾರ್ಥಿ.

**ರೇಚವ್ವ :** ಎದ್ದು ನಿಂತು, ಬಸವಣ್ಣ ಚೆನ್ನಬಸವಣ್ಣ ಸಕಲ ಶರಣ ಶರಣೆಯರಿಗೂ ಶರಣಾರ್ಥಿ ಹೇಳುತ್ತಾ, ಬಸವಣ್ಣ ನಮಗೆ 'ಪುಣ್ಯಾಂಗನೆ 'ಯರೆಂದು ಹೆಸರು ಕೊಟ್ಟಿದ್ದಾರೆ . ಅವರು ಹೇಳಿದಂತೆ ಕೇಳಿ ಅವರು ಹಾಕಿಕೊಟ್ಟ ಜ್ಞಾನಮಾರ್ಗದಲ್ಲಿ ನಡೆಯುವುದು ನಮ್ಮೆಲ್ಲರ ಕರ್ತವ್ಯ . ಕಲ್ಯಾಣದಲ್ಲಿ ಸಾಕಷ್ಟು ಬದಲಾವಣೆಯನ್ನು ತಂದ ಬಸವರಸರಿಗೆ ನನ್ನ ಶಿರಸಾಷ್ಟಾಂಗ ನಮಸ್ಕಾರಗಳು , ಎಂದು ಹೇಳಿ ಕುಳಿತುಕೊಂಡರು .

**ಚೆನ್ನಬಸವಣ್ಣ :** ಒಡಲ ಗುಣಧರ್ಮವನ್ನು ಬಿಟ್ಟು , ಒಡಲಲ್ಲಿಯೇ ಸಂಗಮವಾದ ಅರಿವಿನ ನಿರ್ಗುಣ ಧರ್ಮದೊಂದಿಗೆ ನಡೆಯುವ ಶಕ್ತಿಯೊಂದು ಒಡಲಲ್ಲಿಯೇ ಇದೆ.

ಒಡಲು ಮತ್ತು ಮನ ಇವೆರಡೂ ಸೇರಿ ಒಡಲಲ್ಲಿಯೇ ಇರುವ ಅರಿವಿನ ಧರ್ಮವನ್ನು ಒಡಲು ಮತ್ತು ಮನ ಪಾಲನೆ ಮಾಡಬೇಕು. ಇದು ಎಡಬಿಡದ ಪೂಜೆಯಾಗಬೇಕು . ಲೋಕಕ್ಕೆ ಉದಯದ ಪೂಜೆ ಮೀಸಲಾದರೆ , ಅಸ್ತಮಾನದ ಪೂಜೆಯನ್ನು ಎಂಜಲೆಂದರು . ಇವರೆಲ್ಲ ಅಗ್ನಿಯ ಎಂಜಲನ್ನು ಉಂಡು ಪೂಜಿಸುವ ಭಂಗಿತರು. ಲೋಕದ ಪೂಜೆ ಶರಣರಿಗೆ ಬೇಡ . ಅರಿವಿನ ಪೂಜೆಯೇ ಪೂಜೆಯೆಂದು

ನಂಬಿ, ಒಡಲ ದುರ್ಗುಣಗಳನ್ನು ಸಾಕ್ಷಿಯಾಗಿ ನೋಡಿ, ಒಡಲ ಮೂಲಕ ಕೊಡವಿಕೊಳ್ಳಬೇಕಾಗಿದೆ .

**ಬಸವಣ್ಣ :** ಸುಂದರವಾದ ಸೂತ್ರವನ್ನೇ ಹೇಳಿದಿರಿ ಚೆನ್ನಬಸವಣ್ಣ . ಅರಿವಿನ ಒಡಲಲ್ಲಿ ಲೋಕದ ಸಂಪ್ರದಾಯದ ಚೇಷ್ಟೆಗಳು ಬಚ್ಚಿಟ್ಟುಕೊಂಡಿವೆ . ಶೀಲ , ಮುಟ್ಟು , ಮೈಲಿಗೆಗಳು ಬಚ್ಚಿಟ್ಟುಕೊಂಡಿವೆ. ಹೊರಗೆ ಶೀಲವನ್ನು ಬಳಸಿ , ಒಳಗಣ ಶುದ್ಧಿಯನ್ನ ಅರಿಯಲು , ನೇಮ ಶೀಲವನ್ನು ಆಚರಣೆಗೆ ತಂದು , ಮರೆವಿನ ನಿರ್ಣಯವನ್ನು ಅರಿಯುವ ಒಡಲ ಸಂಗದಿಂದ ಶರಣರು ಬಹುದೂರ ಉಳಿಯಬೇಕು ಸದಾ ಶರಣರ ಅರಿವಿನ ಸಂಗವನ್ನು ಮಾಡಿ , ನಿಸ್ಸಂಗಿಗಳಾಗಲು ಚೆನ್ನಬಸವಣ್ಣನವರು ತಮಗೆ ವಿವರಿಸಿ ಹೇಳಿರುವರು .

ಹುಟ್ಟಿ ಕೆಟ್ಟಿತ್ತು ಭಾಗ ,
ಹುಟ್ಟದೇ ಕೆಟ್ಟಿತ್ತು ಭಾಗ .
ಮುಟ್ಟಿ ಕೆಟ್ಟಿತ್ತು ಭಾಗ ,
ಮುಟ್ಟದೇ ಕೆಟ್ಟಿತ್ತು ಭಾಗ .
ಇದೇನೊ ಇದೆಂತೊ ಅರಿಯಲೇಬಾರದು .
ಇದೇನೊ? ಇದೆಂತೊ? ಎಂಬ ಎರಡು ಮಾತಿನ ನಡುವೆ ಉರಿ ಹತ್ತಿತ್ತು .
ಮೂರು ಲೋಕ ಗುಹೇಶ್ವರಾ . ಎಂದು ಪ್ರಭುಗಳು ಬೆಡಗಿನ ಸೂತ್ರವನು ರಚಿಸಿದ್ದಾರೆ.

**ಅಕ್ಕಮ್ಮ :** ಇದನ್ನು ಬಿಡಿಸಿ ಹೇಳಿ ಬಸವಣ್ಣ . ಯಾವುದು ಹುಟ್ಟಿ ಕೆಟ್ಟಿದೆ? ಯಾವುದು ಹುಟ್ಟದೇ ಕೆಟ್ಟಿದೆ?

**ಬಸವಣ್ಣ :** ಆಗಲಿ ಅಕ್ಕ , ತಮಗೆ ತಿಳಿಯದ್ದು ಏನಿದೆ ? ಶರಣರು ತಿಳಿಯಲೆಂದೇ ತಾವು ಪ್ರಶ್ನೆ ಮಾಡಿರುವಿರಿ .

ಕಾಯದ ಗರ್ಭದಿಂದ ಕಾಯ ಹುಟ್ಟಿದೆ . ಕಾಯದ ಗರ್ಭದಲ್ಲಿಯೇ ಸಂಗಮವಾದ ಅರಿವಿನ ಕಾಯವನ್ನು , ಕಾಯ ತಿಳಿಯಲಾರದೆ ವ್ಯರ್ಥ ಕೆಟ್ಟು ಹೋಗುತ್ತದೆ.

ಆಯುಷ್ಯ ಪರ್ಯಂತ ಭೌತಿಕ ಸುಖಕ್ಕಾಗಿ ಕಾಯ ಸುಖ ದುಃಖಗಳನ್ನು ಅನುಭವಿಸುತ್ತದೆ . ಅರಿವಿನ ಸುಖವನ್ನು ಉಣ್ಣದೇ ಕಾಯ ವ್ಯರ್ಥ ಸತ್ತು ಹೋಗುತ್ತದೆ. ಇದು ಹುಟ್ಟಿಯೂ ಕೆಟ್ಟ ಭಾಗ .

ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯ ಒಂದಿದೆ . ಈ ಕಾಯಕ್ಕೆ ಹುಟ್ಟಿಲ್ಲ , ಸಾವು ಕೂಡಾ ಇಲ್ಲ , ಕೇಡು ಇಲ್ಲ . ಈ ಜ್ಞಾನ ಕಾಯ ಸ್ಥೂಲ ಕಾಯದಲ್ಲಿ ಇದ್ದು , ಜ್ಞಾನಕಾಯವನ್ನು ತಿಳಿಯದೇ ಹುಟ್ಟಿ ಕೆಟ್ಟ ಕಾರಣ ಇದರೊಂದಿಗೆ ಈ ಕಾಯದಲ್ಲಿಯೇ ಇದ್ದ ಹುಟ್ಟದ ಕಾಯವು ಕೂಡಾ ಕೆಟ್ಟು ಹೋಗುತ್ತದೆ.

ಕಾಯ , ಮತ್ತೊಂದು ಕಾಯವನ್ನು ಮುಟ್ಟುವ ಸುಖಕ್ಕಾಗಿಯೇ ಹುಟ್ಟಿದೆ . ಮುಟ್ಟಿ ಮುಟ್ಟಿ ಒಮ್ಮೆ ಕೆಟ್ಟು ಹೋಗುತ್ತದೆ. ಕಾಯ ಕಾಯವನ್ನೇ ಮುಟ್ಟಿ ಮುಟ್ಟಿ ಸುಖಿಸುವುದೆಂದರೇನು? ಸುಖ ದುಃಖಗಳಿಗೆ ಒಳಗಾಗಿ ಒಮ್ಮೆ ಕೆಡುವುದೆಂದರೇನು ? ಮುಟ್ಟಿ

ಮುಟ್ಟಿ ವ್ಯರ್ಥ ಕೆಟ್ಟು ಹೋಗುವ ಚಿಂತೆಯು ಕಾಯಕ್ಕೆ ಒಮ್ಮೆಯೂ ಹುಟ್ಟುವುದಿಲ್ಲ .

ಸ್ಥೂಲಕಾಯ ಮತ್ತೊಂದು ಸ್ಥೂಲಕಾಯವನ್ನು ಸುಖಕ್ಕಾಗಿ ಮುಟ್ಟಿ ಕೆಟ್ಟರೇನಂತೆ? ಸ್ಥೂಲಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಕಾಯ ಸ್ಥೂಲಕಾಯವನ್ನು ಮುಟ್ಟುವುದಿಲ್ಲ . ಆದರೂ ಕೂಡಾ ಮುಟ್ಟಿ ಸುಖಿಸಿ ಕೆಡುವ ಸ್ಥೂಲ ಕಾಯದಲ್ಲಿಯೇ ಇರುವ ಅರಿವಿನ ಕಾಯ ಕೂಡಾ , ಮುಟ್ಟದೇ ತಟ್ಟದೇ ಕೆಟ್ಟಿತ್ತು ಕಾಯ ಇದೇನೊ ಇದೆಂತೊ ಅರಿಯಲೇಬಾರದು . ಇದೇನೊ ಇದೆಂತೊ ಎಂಬ ಎರಡು ಮಾತಿನ ನಡುವೆ ಜ್ಞಾನದ ಕಿಚ್ಚು ಹತ್ತಿದರೆ , ಸ್ಥೂಲಕಾಯ ಸೂಕ್ಷ್ಮಕಾಯ ಜ್ಞಾನಕಾಯ ಒಂದಾಗುತ್ತವೆ . ಇದನ್ನು ಪ್ರಭುದೇವರು ಮೂರೊಂದಾದ ಘನವೆಂದು ಕರೆದಿದ್ದಾರೆ .

ಅಜ್ಞಾನ ಕಾಯವನ್ನು ಯಾವ ಕೆಲಸದಲ್ಲಿ ತೊಡಗಿಸಿದರೂ ಕೂಡಾ ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯ ಅಜ್ಞಾನ ಕಾಯದ ಕೆಲಸದಲ್ಲಿ ಭಾಗಿಯಾಗುವುದಿಲ್ಲ.

ಸ್ಥೂಲಕಾಯ ಅರಿವೆಂಬ ಗುರುದೇವನು ಇದ್ದ ಮನೆ . ಈ ಮನೆಯನ್ನು ಗುರುದೇವನು ಇದ್ದ ಮನೆಯೆಂದು ಗೌರವಿಸಬೇಕೇ ಹೊರತು , ವೇಶ್ಯೆ ಎಂದು ವಿಟನೆಂದು, ಕಳ್ಳನೆಂದು, ಸುಳ್ಳ , ಭ್ರಷ್ಟಾಚಾರನೆಂದು, ಲಂಚಕೋರನೆಂದು, ಶ್ರೀಮಂತನೆಂದು, ಬಡವನೆಂದು, ಸೈನಿಕನೆಂದು, ಸೇನಾಧಿಪತಿಯೆಂದು, ಪ್ರಧಾನಿ, ರಾಜನೆಂದು ಗುರುತಿಸುವಂತಿಲ್ಲ .

ಕಾಯ ಯಾವ ಕೆಲಸದಲ್ಲಿದ್ದರೇನು ? ಅದು ಮನದಿಂದ ಪ್ರೇರಣೆ ಪಡೆದ ಕೆಲಸವೇ ಹೊರತು ಅರಿವಿನಿಂದ ಮಾಡುವ ಕೆಲಸವಲ್ಲ . ಹೀಗಾಗಿ ದೇಹವೇ ದೇವಾಲಯ . ಅರಿವೆಂಬ ಗುರುದೇವನು ವಾಸ ಮಾಡಿದ ಆಲಯ .

ಸಕಲ ಶರಣರು ಈ ಕಾರ್ಯಕ್ರಮದಲ್ಲಿ ಭಾಗಿಯಾದ 'ಪುಣ್ಯಾಂಗನೆ 'ಯರನ್ನು ತಮ್ಮಂತೆ ನೋಡಿ. ಗುರುದೇವನು ಇದ್ದ ಕಾಯವನ್ನು ಅತ್ಯಂತ ಆದರದಿಂದ ಬರಮಾಡಿಕೊಂಡು ಶರಣು ಶರಣಾರ್ಥಿ ಎಂದು ಆ ಕಾಯಗಳಿಗೆ ಆ ಕಾಯಗಳಲ್ಲಿದ್ದ ಗುರುದೇವನಿಗೆ ಹಣೆ ಮಣಿಯಬೇಕೆಂದು ಸಕಲ ಶರಣರಿಗೆ ತಿಳಿಯುವಂತೆ ಹೇಳಿದರು .

**ಚೆನ್ನಬಸವಣ್ಣ :** ಪ್ರಭುದೇವರ ವಚನದ ಒಂದು ಸೂತ್ರವನ್ನು ಸರಳವಾಗಿ ಹೇಳುತ್ತಾ, ನಮ್ಮೆಲ್ಲರ ಕಣ್ಣು ತೆರೆಸಿದಿರಿ ಬಸವರಸ. ತಮಗೆ ಶರಣು ಶರಣಾರ್ಥಿ. ಅರಿವಿನಿಂದ ಬಸವರಸರ ಮಾತು ಕೇಳಿ ಪ್ರಯೋಗಕ್ಕೆ ಹೋಗುವ ಛಲವುಳ್ಳ ಸಕಲ ಶರಣರಿಗೂ ಶರಣಾರ್ಥಿ ಎಂದು

ಸಭೆಗೆ ಮಂಗಲ ಹಾಡಿದರು .

# ತನುವಿಗೆ ಮನದಿಂದಲೇ ಮುಪ್ಪು ಇದೆ ಮರಣವೂ ಇದೆ ಮುಕ್ತಿಯೂ ಇದೆ

ಸೂರ್ಯೋದಯ ಆಗದ ಮುನ್ನ ಸಕಲ ಶರಣರು ಮಹಾ ಮನೆಯಲ್ಲಿ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿದ್ದಾರೆ. ಬಸವಣ್ಣ ಚನ್ನಬಸವಣ್ಣ ವೇದಿಕೆಗೆ ಆಗಮಿಸಿ, ಸಕಲ ಶರಣರಿಗೆ ಶರಣು ಶರಣಾರ್ಥಿ ಎಂದು ಕುಳಿತುಕೊಳ್ಳುತ್ತಾರೆ.

**ಅಮುಗೆ ರಾಯಮ್ಮ** : ಎದ್ದು ನಿಂತು , ನಿನ್ನೆ ಸಂಜೆಯ ಸಭೆಯಲ್ಲಿ ಪ್ರಭುದೇವರ ವಚನಸೂತ್ರ ಒಂದನ್ನು ತೆಗೆದುಕೊಂಡು , ಹುಟ್ಟಿ ಕೆಡುವ ತನು , ಹುಟ್ಟದೇ ಕೆಡುವ ತನು , ಮುಟ್ಟಿ ಕೆಡುವ ತನು , ಮುಟ್ಟದೇ ಕೆಡುವ ತನು , ತನುವಿನ ಬಗ್ಗೆ ಪ್ರಭುದೇವರು ರಚಿಸಿದ ಬೆಡಗಿನ ವಚನಸೂತ್ರ ನಮ್ಮೆಲ್ಲರಿಗೂ ತಿಳಿಯುವಂತೆ ಸುಂದರವಾಗಿ ಹೇಳಿದಿರಿ ಬಸವರಸ ಮತ್ತಷ್ಟು ವಿವರಿಸಿ ಹೇಳಿ ಎನ್ನೊಡೆಯ .

**ಬಸವಣ್ಣ:** ಆಗಲಿ ತಾಯಿ .

ಕಪ್ಪೆ ಸರ್ಪನ ನೆರಳಿನಲ್ಲಿರುವಂತೆ ತನುವಿನ ಸ್ಥಿತಿ ಇದೆ. ತನುವಿಗೆ ಮನದಿಂದಲೇ ಮುಪ್ಪು ಇದೆ . ಮರಣವೂ ಇದೆ . ಹಾಗೆಯೇ ಮನದಿಂದಲೇ ಕಾಯ ಕೈಲಾಸವೆಂದು ಕರೆಯಿಸಿಕೊಳ್ಳುತ್ತದೆ . ಕಾಯಕ್ಕೆ ಮತ್ತೊಂದು ಕಾಯದಿಂದ ಭಯವಿಲ್ಲ . ಕಾಯವನ್ನು ಆವರಿಸಿದ ಮನದಿಂದಲೇ ಕಾಯಕ್ಕೆ ತೊಂದರೆ ಇದೆ.

**ರಾಯಮ್ಮ** : ಅದು ಹೇಗೆ ಬಸವರಸ ?

**ಬಸವಣ್ಣ:** ಸ್ಪರ್ಶ ಬಯಸಿ , ಸುಖ ಅನುಭವಿಸಲು ಹೋದ ಚರ್ಮವನ್ನು ಕೆರಳಿಸಿ ಸರ್ಪವಾಗಿ ಕುಕ್ಕುತ್ತದೆ ಚರ್ಮ. ಸರ್ಪವಾಗಿ ಕೆರಳಿ ಕುಕ್ಕುವ ಚರ್ಮವೂ ಚರ್ಮವೇ ಆಗಿದೆ. ಸುಖಿಸಲು ಹೋದ ಚರ್ಮವೂ ಚರ್ಮವೇ ಆಗಿದೆ . ಒಂದನ್ನು ಮತ್ತೊಂದು ತಿಳಿಯದೇ ತನುವಿನ ಸಂಸಾರ ವ್ಯರ್ಥವಾಗಿ ಹಾಳಾಗುತ್ತದೆ .

ಚರ್ಮದಲ್ಲಿಯೇ ಚರ್ಮ ಎಂದು ತಿಳಿಯುವ ಅರಿವೆಂಬ ಗುರುದೇವನು ಇದ್ದಾನೆ. ಚರ್ಮದಲ್ಲಿಯೇ ಚರ್ಮವನ್ನು ಬಯಕೆ ಮಾಡಿ ಸ್ಪರ್ಶಿಸಿ, ಸುಖಿಸುವ ಅಜ್ಞಾನಿಯೂ ಇದ್ದಾನೆ.

ಚರ್ಮ ಮನವೆಂಬ ಅಜ್ಞಾನಕ್ಕೆ ಬಳಕೆಯಾದರೆ, ತನುವಿನ ಸಂಸಾರ ಸರ್ಪ ಕಚ್ಚಿಸಿಕೊಂಡು ಸಾಯುತ್ತದೆ . ಚರ್ಮದಲ್ಲಿ ಇರುವ ಅರಿವನ್ನು ಚರ್ಮದಲ್ಲಿಯೇ ಇರುವ ಮನ ಬಳಕೆ ಮಾಡಿಕೊಂಡು ಜ್ಞಾನಿ ಎನಿಸಿಕೊಂಡರೆ ಅರಿವಿನ ಸಂಸಾರವಾಗುತ್ತದೆ. ಚರ್ಮ 'ಸರ್ಪದೋಷ ' ದಿಂದ ಮುಕ್ತವಾಗುತ್ತದೆ.

**ರಾಯಮ್ಮ** : ಹೀಗೇಕೆ ಆಗುತ್ತದೆ ಬಸವರಸ.

**ಬಸವಣ್ಣ:** ಚರ್ಮದಲ್ಲಿ ಸ್ಪರ್ಶಿಸಿ ಸುಖಪಡುವ ರಾಸಾಯನಿಕ ದ್ರವ್ಯವನ್ನು

ಉಂಟುಮಾಡುವ ಶಕ್ತಿ ಇದೆ. ಸ್ಪರ್ಶಿಸುವ ಬಯಕೆಯಾಗಿ, ತಡವಾದರೆ ಸ್ಪರ್ಶಿಸದಿದ್ದರೂ ರಾಸಾಯನಿಕ ದ್ರವ್ಯ ನಷ್ಟವಾಗಿ ಚರ್ಮಕ್ಕೆ ಸುಖವಾಗುತ್ತದೆ. ಆ ಕ್ಷಣದಲ್ಲಿ ಚರ್ಮ ಮತ್ತೆ ಸ್ಪರ್ಶ ಸುಖ ಬಯಸುವುದಿಲ್ಲ. ಸುಖ ಎನ್ನುವುದು ತನ್ನ ಚರ್ಮದಲ್ಲಿತ್ತೋ ಅನ್ಯಚರ್ಮದಲ್ಲಿತ್ತೋ ಎನ್ನುವುದು ಮನವೆಂಬ ಅಜ್ಞಾನಕ್ಕೆ ತಿಳಿಯುವುದಿಲ್ಲ. ಚರ್ಮದಲ್ಲಿದ್ದ ಸುಖದ ದ್ರವ್ಯ ಚರ್ಮವೇ ಚೆಲ್ಲಿ ಸುಖಿಸಿ ಅನ್ಯಚರ್ಮದಲ್ಲಿ ಸುಖವಿದೆ ಎಂದು ಮತ್ತೇ ಮತ್ತೇ ಬಯಸುವ ಅಜ್ಞಾನದ ಸಂಸಾರವು ಇದು. ಸರ್ಪ ಕಚ್ಚಿಸಿಕೊಂಡು ವ್ಯರ್ಥ ಸತ್ತು ಹೋಗುತ್ತದೆ.

**ರಾಯಮ್ಮ :** ಎಂತಹ ಸುಂದರವಾದ ಸೂತ್ರವನ್ನು ಹೇಳಿದಿರಿ ಬಸವರಸ. ತನುವಿನಲ್ಲಿ ಗುರುದೇವ ಬಚ್ಚಿಟ್ಟುಕೊಂಡಿದ್ದರೂ ಮನ ಆತನನ್ನು ತಿಳಿಯಲು ಏಕೆ ಸಾಧ್ಯವಾಗುತ್ತಿಲ್ಲ.

**ಬಸವಣ್ಣ:** ಚರ್ಮ ಹೆಣ್ಣು ಅಲ್ಲ ಗಂಡು ಅಲ್ಲ ಎನ್ನುವ ಸತ್ಯ ನಿಮಗೆ ಅರಿವಾಗಿದೆ. ಚರ್ಮದಲ್ಲಿ ಸ್ಪರ್ಶ ಶಕ್ತಿಯನ್ನು ತಿಳಿಯುವ ಅರಿವು ಬಚ್ಚಿಟ್ಟುಕೊಂಡಿದೆ. ಹಾಗೆಯೇ ಚರ್ಮ ತನುವಿನಲ್ಲಿಯೇ ಹರಿಯುವ ರಕ್ತ, ಮೂಳೆ , ಮಾಂಸ, ಮಜ್ಜ, ಮೇದಸ್ಸು ಹೊರಚೆಲ್ಲದಂತೆ ರಕ್ಷಣೆ ಮಾಡುವ ರಕ್ಷಾ ಕವಚವೂ ಆಗಿದೆ. ರೋಮಗಳಿಂದ ಸುಂದರವಾಗಿ ಕಾಣುವ ಸಸ್ಯಕಾಶಿ ಇದು.

ತನು ಬೇರಿಲ್ಲದ ಮರ.

ನುಡಿಯುತ್ತ ನಡೆದಾಡುವ ಅರಿವು ಎನ್ನುವ ಗುರುದೇವನ ಬೋಧೀವೃಕ್ಷ.

ತನುವನ್ನು ಆವರಿಸಿದ ಮನ ದಾರಿ ತಪ್ಪಿ ನಡೆದಾಗ ಅರಿವೆಂಬ ಗುರುದೇವ ಮನಕ್ಕೆ ಬೋಧನೆ ಮಾಡುತ್ತಾನೆ.

ಮನದ ಮಾತು ಕೇಳಿ ತನು ದಾರಿ ತಪ್ಪಿ ನಡೆದಾಗ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವ ತನುವಿಗೂ ಮನಕ್ಕೂ ಬೋಧನೆ ಮಾಡುತ್ತಾನೆ.

ಮನ ಅರಿವೆಂಬ ಗುರುದೇವನನ್ನು ನೆನೆದರೆ ಸಾಕು ಮನವೆಂಬ ಸರ್ಪದ ಹಲ್ಲು ಕಿತ್ತಿ ಅದರ ವಿಷ ತೆಗೆದು ಕೊರಳಲ್ಲಿ ಧರಿಸಿಕೊಂಡು ಸರ್ಪಭೂಷಣನಾಗಿ ಬೆಳಗುತ್ತಾನೆ.

ಮನವೆಂಬ ಹಾವನ್ನೇ ಆಭರಣ ಮಾಡಿಕೊಂಡು ನಾಗಭೂಷಣನಾಗಿ ಬೆಳಗುತ್ತಾನೆ. ಅಜ್ಞಾನದ ಸಂಸಾರ ತಪ್ಪಿಸಿ, ಅರಿವಿನ ಸಂಸಾರವನ್ನು ಕಾಯದಲ್ಲಿಯೇ ಸ್ಥಾಪನೆ ಮಾಡಿ, ಕಾಯುವನ್ನೇ ಕೈಲಾಸವಾಗಿಸಿಕೊಂಡು ಮನವನ್ನು ಮಹಾದೇವಿಯನ್ನಾಗಿಸಿಕೊಂಡು ಅಲ್ಲಿಯೇ ವಾಸ ಮಾಡುತ್ತಾನೆ .

ಮನ ಮತ್ತು ತನು ಎಚ್ಚರದಿಂದ ತನ್ನನ್ನು ತಾನು ಬಳಕೆಮಾಡಿಕೊಳ್ಳಬೇಕು. ಮಹಾದೇವನು ವಾಸ ಮಾಡಿದ ತನುವನ್ನು ಕೆಟ್ಟ ದೃಷ್ಟಿಯಿಂದ ನೋಡುವುದು ಮಾತನಾಡುವುದು ಅಪಚಾರ.

ತನುವಿನ ಕುಲಕ್ಕೆ ಅಪಚಾರ .

ತನಗೆ ತಾನೇ ಮಾಡಿಕೊಳ್ಳುವ ಅಪಚಾರ. ತನಗೆ ತಾನೇ ಅಪಚಾರ ಮಾಡಿಕೊಳ್ಳುವ ಈ ಅಜ್ಞಾನದಿಂದ

ಕಾಯ ಮತ್ತು ಮನ ಬಹುದೂರವಿರಬೇಕು .

**ಕಾಳವ್ವೆ:** ನಾವೆಲ್ಲ ಧನ್ಯರಾದೆವು ಬಸವರಸ . ಕಾಯದಲ್ಲಿರುವ ಅರಿವಿನ ಸಂಪತ್ತನ್ನು ಕಾಯ ಮತ್ತು ಮನ ಉಣ್ಣುವುದಕ್ಕೆ ಅಣಿಯಾಗದೇ ಭೌತಿಕ ಸಂಪತ್ತಿಗಾಗಿ ತನಗೆ ತಾನೇ ಬಲಿಯಾಗುವುದು . ಕಾಯ ಮತ್ತು ಮನದ ಅಜ್ಞಾನವೇ ಸರಿ .

**ಚನ್ನಬಸವಣ್ಣ:** ಚರ್ಮ ಮತ್ತು ಕಾಯದಲ್ಲಿರುವ ಅಗಾಧವಾದ ಸಂಪತ್ತನ್ನು ಸಕಲ ಶರಣ ಕಾಯಗಳಿಗೆ ಪರಿಚಯ ಮಾಡಿ ಕೊಟ್ಟ ಬಸವರಸರಿಗೆ ಶರಣು ಶರಣಾರ್ಥಿ. ಇಂದಿನ ಈ ಸಭೆಗೆ ಮಂಗಲ ಹಾಡೋಣ.

# ಅರಿವು ತನುವಿನಲ್ಲಿದೆ, ಮನಕ್ಕೆ ಬಳಕೆಯಾಗದಿದ್ದರೆ ತನುವಿಗೆ ಕೇಡುತಪ್ಪಿದ್ದಲ್ಲ

ಸಂಜೆ ಸಭೆಯಲ್ಲಿ ಸಕಲ ಶರಣರು ಸೇರಿದ್ದಾರೆ . ಬಸವಣ್ಣ ಚನ್ನಬಸವಣ್ಣ ವೇದಿಕೆಗೆ ಆಗಮಿಸಿ ಸಕಲ ಶರಣರಿಗೆ ಶರಣು ಹೇಳಿ ಕುಳಿತುಕೊಳ್ಳುತ್ತಾರೆ.

**ಅಕ್ಕಮ್ಮ:** ಅಜ್ಞಾನದ ಸಂಸಾರ ತನು ಕೆಡುವವರೆಗೆ ಕರೆದುಕೊಂಡು ಹೋಗುತ್ತದೆ. ಮತ್ತೊಬ್ಬರನ್ನು ಬಾಧಿಸುವಲ್ಲಿಯೇ ಅಜ್ಞಾನಕ್ಕೆ ಸುಖವಿದೆ. ಹೀಗೇಕೆ ಬಸವಣ್ಣ?

**ಬಸವಣ್ಣ :** ಅಕ್ಕ ತಮಗೆ ತಿಳಿಯದ್ದು ಏನಿದೆ ?

ಬೋನಿನಲ್ಲಿ ಪದಾರ್ಥವನ್ನು ಇಟ್ಟು ಇಲಿಯನ್ನು ಬಿಟ್ಟಂತೆ. ಬೋನಿನಲ್ಲಿರುವ ಪದಾರ್ಥ ತಿನ್ನದಿದ್ದರೆ , ನಾಲಿಗೆ ತನ್ನನ್ನು ಹಿಂಸಿಸುತ್ತದೆ. ಪದಾರ್ಥ ತಿನ್ನಲು ಹೋದರೆ ಇಲಿ ಉಳಿಯುವುದಿಲ್ಲ, ಇಲಿಗೆ ಬೋನು ಕಾಣುವುದಿಲ್ಲ . ಬೋನಿನಲ್ಲಿ ರುಚಿಕರ ಪದಾರ್ಥ ಇಡಲಾಗಿದೆ . ಇಲಿಗೆ ಪದಾರ್ಥ ಕಾಣುತ್ತದೆಯೇ ಹೊರತು ಬೋನು ಕಾಣುವುದಿಲ್ಲ, ಪರರ ಬಾಧಿಸದಿದ್ದರೆ ಬೋನಿನ ಅವಶ್ಯಕತೆ ಇಲ್ಲ, ಇಲಿ ಸಾಯುತ್ತಿರಲಿಲ್ಲ, ತನುವಿನ ಸಂಸಾರವು ಹೀಗೆಯೇ ಮುಂದುವರೆಯುತ್ತದೆ.

ಹಗಲಿರುಳು ದುಡಿದು ಆಭರಣ ಖರೀದಿಸುವ ಆಸೆ ತನುವಿಗೆ .

ದೊರೆಯದಿದ್ದರೆ ಕದಿಯುವ ಆಸೆ ತನುವಿಗೆ .

ಅಡ್ಡಿಪಡಿಸಿದರೆ ಕೊಂದು ಪಡೆಯುವ ಆಸೆ ತನುವಿಗೆ .

ಸಿಕ್ಕರೆ ಕದಿಯುವ ತನು ಸಾಯುತ್ತದೆ.

ಕೊಡದಿದ್ದರೆ ಧರಿಸಿದ ತನು ಸಾಯುತ್ತದೆ.

ತನುವಿನ ಅಜ್ಞಾನದ ಸಂಸಾರ ಆಭರಣಕ್ಕಾಗಿ ವ್ಯಯವಾಯಿತು.

ಕಣ್ಣಿನ ದೃಶ್ಯಕ್ಕೆ ಆಭರಣ ಅದೊಂದು ಹಳದಿ ಬಣ್ಣದ ಲೋಹವೆಂದು ಹೊಳೆಯುವುದೇ ಇಲ್ಲ . ಲೋಹದ ಬಣ್ಣ ಅದರ ಮಾಟ ತನು ಮತ್ತು ಮನಕ್ಕೆ ಶ್ರೇಷ್ಠವೆನಿಸಿ ತನಗೆ ತಾನೇ ತನಗರಿಯದಂತೆ ತಾನೇ ನಿರ್ಮಿಸಿಕೊಂಡ ಅಜ್ಞಾನದ ಬೋನಿಗೆ ಸೇರುತ್ತದೆ .

ಆಭರಣ ಖರೀದಿ ಮಾಡಿದ ತನುವು ಲೋಹವೆಂದು ಅರಿಯಲಿಲ್ಲ . ಆಭರಣ ಕದಿಯುವ ತನು ಕೂಡಾ ಲೋಹವೆಂದು ಅರಿಯಲಿಲ್ಲ . ಕದಿಯುವ ತನುವಿಗೆ ಶಿಕ್ಷೆ ಕೊಡುವ ತನು ಕೂಡಾ ಲೋಹವೆಂದು ಅರಿಯಲಿಲ್ಲ . ಕದಿಯುವ ತನುವನ್ನು ಅಪರಾಧಿ ಎಂದು ಘೋಷಿಸುವ ತನುವು ಕೂಡ ಲೋಹವೆಂದು ಅರಿಯಲಿಲ್ಲ, ಲೋಹವನ್ನು ಲೋಹವೆಂದು ಅರಿಯದ ಕಾರಣಕ್ಕಾಗಿ ಆಯಾ ತನುಗಳು ಆಯಾ ಅಜ್ಞಾನದ ಬೋನಿನಲ್ಲಿ ತಮಗೆ ತಾವು ಅರಿಯದಂತೆ ಬಂಧಿಯಾಗಿವೆ.

ಪೀಠಾಧಿಪತಿಗಳು, ಶಾಸಕರು, ಸಚಿವರು, ನ್ಯಾಯಮೂರ್ತಿಗಳು, ಇದಕ್ಕೆ

ಹೊರತಾಗಿಲ್ಲ, ತನುಗಳೆಲ್ಲ ಒಂದೇ. ಅರಿವು ತನುವಿನಲ್ಲಿದೆ. ಅರಿವಿನ ಪಾಠ ಪುಸ್ತಕದಲ್ಲಿದೆ. ಬಳಕೆಯಾಗದಿದ್ದರೆ, ತನು ಮತ್ತು ಮನಕ್ಕೆ ಕೇಡು ತಪ್ಪಿದ್ದಲ್ಲ.

ಚಿನ್ನಕ್ಕೆ ಜನ್ಮ ಕೊಟ್ಟ ಮಣ್ಣು ಯಾವ ಲೆಕ್ಕಕ್ಕಿಲ್ಲ . ಆ ಮಣ್ಣಿನ ಪಾತ್ರೆಯಲ್ಲಿಯೇ ಕುದ್ದು ಹಳದಿ ಬಣ್ಣ ತಳೆದ ಲೋಹ ತನುವಿಗೆ ಚಿನ್ನವಾಗಿ ಮಾರ್ಪಟ್ಟಿದೆ ! ಈ ಲೋಹದ ಬಣ್ಣಕ್ಕೆ ಮರುಳಾದ ಕಣ್ಣಿನ ಅಜ್ಞಾನ ದೃಶ್ಯಕ್ಕೆ ಯಾವ ಶಿಕ್ಷೆಯೂ ಇಲ್ಲ. ಆ ಕಣ್ಣಿನ ಅಜ್ಞಾನ ದೃಶ್ಯಕ್ಕೆ ಯಾರೂ ಪಾಠ ಮಾಡುವುದಿಲ್ಲ.

ಕಣ್ಣಿನ ಅಜ್ಞಾನ ಮತ್ತೊಬ್ಬರನ್ನು ಭಾದಿಸುವುದು, ಮತ್ತೊಬ್ಬರನ್ನು ಛಿದ್ರ ಛಿದ್ರ ಮಾಡುವುದು. ತನು ಕೆಡುವವರೆಗೆ ಕಣ್ಣಿನಲ್ಲಿರುವ ಈ ಅಜ್ಞಾನ ಕಣ್ಣೇ ಅರಿಯದಿದ್ದರೆ ಹೇಗೆ ? ಕಣ್ಣಿನ ಅಜ್ಞಾನ ಸಂಸಾರಕ್ಕೆ , ನಿರಪರಾಧಿ ತನು ಸತ್ತು ಸತ್ತು ಬದುಕುತ್ತದೆ. ಒಮ್ಮೆ ಸತ್ತು ಹೋಗುತ್ತದೆ.

**ಅಕ್ಕಮ್ಮ :** ಎಷ್ಟು ಸುದೀರ್ಘವಾಗಿ ಮತ್ತು ಸಕಲರಿಗೂ ತಿಳಿಯುವಂತೆ ಹೇಳಿದಿರಿ ಬಸವರಸ ! ತಮ್ಮನ್ನು ಪಡೆದ ಶರಣರು ಕೃತಾರ್ಥರಾದರು .

**ಬಸವಣ್ಣ:** ಆನಂದದಿಂದ ತಿನ್ನುವ ಅನ್ನವೇ ಬೇರೆ , ಹಸಿದು ಕಿತ್ತು ತಿನ್ನುವ ಮೃಷ್ಟಾನ್ನವೇ ಬೇರೆ. ಎರಡೂ ಅನ್ನವೇ ಆದರೂ ತಿನ್ನುವಲ್ಲಿ ಭಿನ್ನವಿದೆ . ಒಂದು ಮೃಷ್ಟಾನ್ನವಾದರೆ ಮತ್ತೊಂದು ಕೂಳು, ಎಂದು ಕರೆಸಿಕೊಳ್ಳುತ್ತದೆ. ದೇಹ ತನಗೆ ತಾನೇ ನಿರ್ಮಿಸಿಕೊಂಡ ಶೂಲದ ಮೇಲಿನ ವಿಭೋಗ .

ಕಣ್ಣಿನಲ್ಲಿ ಹರಿದು ತಿನ್ನುವ ಕಾಮವೂ ಇದೆ. ನೋಡಿ ಆನಂದ ಪಡುವ ಅರಿವಿನ ದೃಶ್ಯವೂ ಇದೆ. ಕಣ್ಣಿನಲ್ಲಿ , ಚರ್ಮದಲ್ಲಿ , ನಾಲಿಗೆಯಲ್ಲಿ , ಮೂಗಿನಲ್ಲಿ , ಕಿವಿಯಲ್ಲಿ ಅಜ್ಞಾನವೆಂಬ ಹಾವು, ವಾಸ ಮಾಡಿದ ತನುವನ್ನೇ ತಿನ್ನುವುದಕ್ಕಾಗಿ ಬಚ್ಚಿಟ್ಟುಕೊಂಡು ಕಾದು ಕುಳಿತಿದೆ.

ಹಾವು ವಾಸಮಾಡಿದ ಆಯಾ ಜಾಗದಲ್ಲಿ ಅರಿವು ಎಂಬ ವಿಷದ ಹಾವನ್ನು ಹಿಡಿದು ಅದರ ಹಲ್ಲು ಕಿತ್ತಿ ಪಳಗಿಸುವ ಗಾರುಡಿಗನು ಕೂಡ ಇದ್ದಾನೆ.

ಕಣ್ಣಿನಲ್ಲಿ ವಾಸಮಾಡಿದ ವಿಷಯದ ವಿಷ ಸರ್ಪ ಕಣ್ಣಿನೊಂದಿಗೆ ನೋಡಿ ತನುವನ್ನು ಭೋಗಿಸಲು ಅಣಿಗೊಳಿಸುತ್ತದೆ. ಇಡೀ ತನು ಹಾವಿನಂತೆ ಹೆಡೆ ಬಿಚ್ಚಿ ವೈಯ್ಯಾರದಿಂದ ಬುಸುಗುಟ್ಟುತ್ತ ಕುಣಿಯುತ್ತದೆ .

ಮನವೆಂಬ ಅಜ್ಞಾನದ ಈ ಸುಖ ತನುವಿಗೆ ಶೂಲದ ಮೇಲಿರುವ ಭೋಗವೆಂದು ತಿಳಿಯುವುದಿಲ್ಲ .

**ಅಕ್ಕಮ್ಮ:** ಹೀಗೇಕೆ ಆಗುತ್ತದೆ ಬಸವರಸ?

**ಬಸವಣ್ಣ:** ಅಕ್ಕ

ತನುವಿನಲ್ಲಿ ಸದಾ ಚಿತ್ರ ವಿಚಿತ್ರ ಘಟನೆ ನಡೆಯುತ್ತಲೇ ಇರುತ್ತದೆ. ಅದನ್ನು ಸಾಕ್ಷಿಯಾಗಿ ನೋಡಿ ಅರಿವಿನಿಂದ ದೂರ ಉಳಿಯುವಾತನೇ ಜಾಣ. ನೋಡುವ ಕಣ್ಣು

ಭೋಗಿಸಲು ಅರಿಯದು. ಬೋಗಿಸುವ ದೇಹ ನೋಡಲು ಅರಿಯದು. ಕಣ್ಣು , ನಾಲಿಗೆ , ಮೂಗು, ಕಿವಿ, ಚರ್ಮ, ಇವುಗಳಲ್ಲಿ ವಾಸ ಮಾಡಿದ ಐದು ಎಡೆಯ ಮನವೆಂಬ ಹಾವು, ಇಡೀ ದೇಹವನ್ನೇ ಹುತ್ತವನ್ನಾಗಿಸಿಕೊಂಡು ದೇಹದಲ್ಲಿಯೇ ಸಂಸಾರ ಹೂಡಿದೆ. ಈ ಹಾವನ್ನು ಹಿಡಿದು ಪಳಗಿಸುವ ಹಾವಾಡಿಗನು ಕೂಡ ದೇಹದಲ್ಲಿಯೇ ಇದ್ದಾನೆ. ಹಾವು ಹಾವಾಡಿಗನೊಂದಿಗೆ ಸ್ನೇಹ ಮಾಡದ ಹೊರತು ಹಾವಾಡಿಗ ಹಾವನ್ನು ಹಿಡಿದು ಪಳಗಿಸಿ ತನ್ನಂತೆ ಮಾಡಿಕೊಳ್ಳಲಾರ.

**ಅಕ್ಕಮ್ಮ** : ಮತ್ತಷ್ಟು ವಿವರಿಸಿ ಹೇಳುವಿರಾ ಬಸವಣ್ಣ ?

**ಬಸವಣ್ಣ** : ಆಗಲಿ ಅಕ್ಕ ,

ಮನವೇ ಹಾವು . ತನುವೇ ಹಾವಿನ ಬುಟ್ಟಿ
ಅರಿವೇ ಹಾವಾಡಿಗ .

ಮನ ಎಂಬ ಹಾವು ಹೋದಡೆಯಲ್ಲೆಲ್ಲ ತನು ಹೋಗುತ್ತದೆ. ತನುವಿನೊಂದಿಗೆ ಅರಿವು ಹೋಗುತ್ತದೆ. ಮನ ತನುವಿನೊಂದಿಗೆ ಭೋಗಿಸುತ್ತದೆ. ಅರಿವು ಬೇಡವೆಂದು ಭೋಗಿಸುವ ತನುವಿನಲ್ಲಿಯೇ ಇದ್ದು ಪಾಠ ಮಾಡುತ್ತದೆ.

ಅರಿವು ಎಂಬ ಗಾರುಡಿಗ ಮನ ಮತ್ತು ತನುವಿನ ಭೋಗದಲ್ಲಿ ಭಾಗಿಯಾಗುವುದಿಲ್ಲ. ಇದು ನಾನಾ ವರ್ಣದ ಸಂಸಾರ. ಹಾವು ಹಾವಾಡಿಗನ ಸ್ನೇಹದಂತೆ.

ಮನವೆಂಬ ಹಾವು ತನುವಿನೊಂದಿಗೆ ವಿಷಯದ ಸ್ನೇಹ ಮಾಡಿದರೆ ತನುವೇನು ಮಾಡೀತು. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಈ ಐದು ಇಂದ್ರಿಯಗಳಿಗೆ ಮನವೆಂಬ ದ್ರೌಪದಿಯೊಬ್ಬಳೇ ಹೆಂಡತಿ. ಅರಿವೆಂಬ ಕೃಷ್ಣನೊಬ್ಬನೆ ಸಾರಥಿ. ಈ ಐದು ಇಂದ್ರಿಯಗಳನ್ನು ಹೊತ್ತುಕೊಂಡ ತನುವೆಂಬ ರಥ ಒಂದೇ. ಮನ ಪಗಡೆಯಾಡಲು ಪಾಂಡವರನ್ನು ಕರೆದುಕೊಂಡು ಹೋದರೆ ಶ್ರೀಕೃಷ್ಣನಾದರೂ ಏನು ಮಾಡಿಯಾನು ? ವಲ್ಲದ ಮನಸ್ಸಿನಲ್ಲಿ ಅವರಿಗೆ ಸಾರಥಿಯಾದ ಮನ ಹೇಳಿದಂತೆ ಕೇಳಿ ಪಾಂಡವರು ಪಗಡೆಯಾಡಿದರು. ರಾಜ್ಯವನು ಸೋತರು. ತಮ್ಮನ್ನು ಸೋತರು. ದ್ರೌಪದಿಯನ್ನು ಸೋತರು. ವಿವಸ್ತ್ರಗೊಳ್ಳುವಾಗ ಮನವೆಂಬ ದ್ರೌಪದಿ ಅರಿವೆಂಬ ಕೃಷ್ಣನ ಮೊರೆಹೊಕ್ಕಳು . ಆತ ಆಕೆಗೆ ಅರಿವಿನ ವಸ್ತ್ರದಾನ ಮಾಡಿ ತನ್ನ ಬುಟ್ಟಿಯಲ್ಲಿ ಹಾಕಿಕೊಂಡು ಶ್ರೀ ಕೃಷ್ಣ ಗಾರುಡಿಗನಾದ .

ವ್ಯಾಸ ಮಹರ್ಷಿಗಳು ಬರೆದ ಮಹಾಭಾರತದ ಅರಿವಿನ ಈ ಸೂತ್ರ ಜ್ಞಾನಕ್ಕೆ ಬಳಕೆಯಾಗಲಿಲ್ಲ . ಕಥೆಯಾಗಿ ಅಜ್ಞಾನದ ನಾಲಿಗೆಗಳಲ್ಲಿ ಕುಣಿದರೆ, ವ್ಯಾಸ ಮಹರ್ಷಿಗಳಾದರು ಏನು ಮಾಡಿಯಾರು?

ತನ್ನಾತ್ಮ ತನುವನ್ನು ಮನವನ್ನು ಕಟ್ಟಿ ಹಾಕದೇ ತನು ಮತ್ತು ಮನಕ್ಕೆ ಹಗೆಯಾಗಿದೆ?

ಅರಿವಿನೆಡೆಗೆ ಕರೆದುಕೊಂಡು ಹೋಗುವ ಆತ್ಮವೂ ಇದೆ . ಅಜ್ಞಾನದೆಡೆಗೆ ಕರೆದುಕೊಂಡು ಹೋಗುವ ಮನವೂ ಇದೆ . ಮನವನ್ನು ಅಪ್ಪಿಕೊಂಡು ಅರಿವಿನೆಡೆಗೆ ನಡೆಯಬೇಕಾದ ಆತ್ಮ ತನುವಿಗೆ ಹಗೆಯಾದ ಬಳಿಕ ತನು ಮತ್ತಾರಿಗೆ ದೂರುವುದು

? ಆತ್ಮವೆಂಬ ಜಗದ್ ರಕ್ಷಕನಾದ ಪರಮಾತ್ಮನೇ ! ನೀನು ತನುವಿಗೆ ಜನ್ಮ ವಿತ್ತು ಅರಿವನ್ನು ದಾನ ಮಾಡಿದೆ. ಆ ತನುವಿನಲ್ಲಿ ಅರಿವಿನ ಬೆಳಕಿನಿಂದ ಹುಟ್ಟಿದ ಮನವನ್ನು ದಾನ ಮಾಡಿದೆ. ತನುವನ್ನು ದಾನ ಮಾಡಿ, ಆ ತನುವಿನಲ್ಲಿಯೇ ಬಚ್ಚಿಟ್ಟುಕೊಂಡ ಮಹಾದಾನಿ ಕೂಡಲಸಂಗಮದೇವ ನೀನು. ನೀನೇ ನನಗೆ ಹಗೆಯಾದ ಬಳಿಕ ಬಿನ್ನಾಣವುಂಟೇ ? ಎಂದು ಅಂಗದಲ್ಲಿಯೇ ಸಂಗಮವಾದ ಪರಮಾತ್ಮನನ್ನು ಕೇಳುವ ಬಯಕೆ ಸಕಲ ಶರಣರ ತನುಗಳಲ್ಲಿ ಸಂಗಮವಾದ ಮನಕ್ಕೆ ಉಂಟಾಗಲಿ ಎಂದು ಮನವನ್ನು ಬೇಡುತ್ತ

ಸಭೆಗೆ ಮಂಗಲ ಹಾಡಿದರು.

# ತನುವನ್ನು ತನುವೆಂದು ನೋಡಲು ಮನೋಮಯವಾದ ದೃಶ್ಯಕ್ಕೆ ಸಾಧ್ಯವಾಗುವುದಿಲ್ಲ

ಸಂಜೆ ಸಭೆ ಬಸವಣ್ಣ , ಚನ್ನಬಸವಣ್ಣ ವೇದಿಕೆಯ ಮೇಲೆ ಕುಳಿತಿದ್ದಾರೆ. ಅವರಿಬ್ಬರಿಗೂ ಶರಣು ಶರಣಾರ್ಥಿ ಎಂದು ಕೈ ಮುಗಿದು ಶರಣರು ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಳ್ಳುತ್ತಾರೆ.

**ಕೊಟ್ಟಣದ ಸೋಮಮ್ಮ** : ತನುವಿನ ಗುಣ ಅವಗುಣದ ಬಗ್ಗೆ ವಿವರಿಸಿ ಹೇಳಿ ಬಸವರಸ

**ಬಸವಣ್ಣ** : ತನುವಿನಲ್ಲಿ ಅರಿವು ಎಂಬ ಗುರುದೇವ ತನ್ಮಯವಾಗಿದ್ದಾನೆ . ತನುವನ್ನು ಮನ ಆವರಿಸಿದೆ. ಹೀಗಾಗಿ ಗುರುದೇವನು ವಾಸಮಾಡಿದ ತನುವನ್ನು ಮನ ತನ್ನ ಮನಬಂದೆಡೆಗೆ ಕರೆದುಕೊಂಡ ಹೋಗುತ್ತದೆ. ಮನವೆಂಬ ನಾಯಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿ, ಮೆರವಣಿಗೆ ಮಾಡಿದರೂ ಕೂಡ ತುಂಡು ಎಲುಬಿಗಾಗಿ ಠಣ್ಣನೆ ಹಾರಿ ಹೊತ್ತ ಪಲ್ಲಕ್ಕಿಯನ್ನೇ ಮರೆಯುವುದು.

**ಸೋಮಮ್ಮ** : ತಾವು ಪಲ್ಲಕ್ಕಿ ಎಂದು ಹೇಳಿದ ವಿಷಯ ನಮ್ಮ ಅರಿವಿಗೆ ಬರಲಿಲ್ಲ ಬಸವರಸ.

**ಬಸವಣ್ಣ** : ಪಲ್ಲಕ್ಕಿ ಎಂದರೆ, ಗುರುಗಳನ್ನು ಹೊತ್ತುಕೊಂಡು ಹೋಗುವ ಪಲ್ಲಕ್ಕಿ ಅಲ್ಲ . ತನುವೆಂಬುದು ಒಂದು ಅರಿವಿನ ಪಲ್ಲಕ್ಕಿ . ಅದು ಮಹಾಜ್ಞಾನವೆಂಬ ಅರಿವಿನ ದೇವರು ಇದ್ದ ತೇರು . ಅರಿವಿನ ದೇವರ ನೆರಳಾಗಿ ಬದುಕಬೇಕಾದ ಮನವೆಂಬ ನಾಯಿ ಮತ್ತೊಂದು ತನುವಿನ ತೇರು ನೋಡಿ ಬೊಗಳುವುದೆಂದರೇನು ?

ತನು ತನುವನ್ನು ನೋಡಿ ಉದ್ರೇಕಗೊಳ್ಳುವುದು, ತನು ತನುವನ್ನು ನೋಡಿ ಮತ್ಸರ ಪಡುವುದು , ತನು ಮತ್ತೊಂದು ತನುವನ್ನು ನೋಡಿ ದ್ವೇಷ ಅಸೂಯೆ ಪಡುವುದು ಕಾಮ, ಕ್ರೋಧ , ಲೋಭ , ಮೋಹ , ಮದ , ಮತ್ಸರಗಳಿಂದ ತನುವೆಂಬ ಅರಿವಿನ ಪಲ್ಲಕ್ಕಿಯನ್ನು ಹಾಳುಗೆಡುವುವ ಅಜ್ಞಾನದ ಗುಣದ ಮನವೆಂಬ ನಾಯಿ ಒಂದಿದೆ . ಇದು ತನುವಿನ ಆಶ್ರಯ ಪಡೆದು ತನುವಿಗೆ ದ್ರೋಹ ಬಗೆಯುತ್ತದೆ. ಅರಿವಿನ ದೇವರು ವಾಸ ಮಾಡಿದ ತನುವೆಂಬ ಪಲ್ಲಕ್ಕಿಯನ್ನು ಮನ ಬಳಕೆ ಮಾಡಿ ತನುವನ್ನೇ ನಿಂದಿಸುವುದೆಂದರೇನು? ಮನ ತಾನಿದ್ದ ತನುವಾದರೇನು ಅನ್ಯ ತನುವಾದರೇನು ? ಅದು ಅರಿವಿನ ದೇವರು ವಾಸ ಮಾಡುವುದಕ್ಕಾಗಿ ಒತ್ತಿದ ಅಚ್ಚು ಎಂದು ಮನ ಅರಿಯಬೇಡವೇ ?

ತನು ಅಚ್ಚುಗನು ಒತ್ತಿದ ಮೆಚ್ಚಿನ ಅಚ್ಚುಗನ ಅಚ್ಚು, ಅಪ್ರತಿಮ ಮಹಿಮನ ಅಚ್ಚು.

**ಸೋಮಮ್ಮ** : ತನು ಕುಲವೆಲ್ಲ ಒಂದೇ ಎನ್ನುವ ಅಭಿಪ್ರಾಯ ತಮ್ಮದೆ ಬಸವಣ್ಣ?

**ಬಸವಣ್ಣ:** ಹೌದು ತಾಯಿ .

ಅಚ್ಚುಗನು ಇದ್ದ ತನುಗಳೆಲ್ಲ ಅಚ್ಚುಗನ ಸ್ವತ್ತು. ಕಳ್ಳ , ಸುಳ್ಳ , ಕೊಲೆಗಡುಕ, ವಿಷಯಲಂಪಟ ಭ್ರಷ್ಟ , ಧನಿಕ , ಸ್ವಾಮಿ , ಗುರು ಹೀಗೆ ದೇಹದ ಪಾತ್ರ ಯಾವುದಾದರೇನು? ಅದರ ಅರಿವಿನ ಸೂತ್ರ ಒಂದೆ. ಸೂತ್ರದ ಪಾತ್ರಧಾರಿಯು ಒಬ್ಬನೇ. ಪಾತ್ರದ ಗುಣ ಅವಗುಣಗಳನ್ನು ನಿಂದಿಸುವುದೆಂದರೆ , ಅದರ ಸೂತ್ರಧಾರಿಯನ್ನು ನಿಂದಿಸಿದಂತಾಗಲಿಲ್ಲವೇ? ಆ ಸೂತ್ರಧಾರಿ ನಿರ್ಮಿಸಿದ ಮನ ಆತನಿಗೆ ಸರಿಸಾಟಿಯೇ ?

ಅರಿವೆಂಬ ಆ ಗುರುದೇವ ಮಾಡಲಾಗಿ ಮನವಾಯಿತು. ಆ ಗುರುದೇವ ಮಾಡಲಾಗಿ ತನುವಾಯಿತು . ತನುಗಳೆಲ್ಲ ಒಂದೆ. ಅದು ಮಹಾದೇವ ನಿರ್ಮಾಣ ಮಾಡಿದ ಅರಿವಿನ ಕುಲುಮೆ. ಮನ ಮತ್ತು ತನುವಿನಿಂದ ನಿರ್ಮಾಣವಾದ ಗುಣ ಅವಗುಣಗಳನ್ನು ಅರಿವಿನ ಕುಲುಮೆಯಲ್ಲಿ ಸುಟ್ಟು ಮನ ಅರಿವಿನಲ್ಲಿ ಸಂಗಮವಾಗಿ ಮಹಾದೇವನನ್ನು ಕೂಡಬೇಕು ಆ ಮಹಾದೇವನೇ ತಾನಾಗಬೇಕು.

**ರೇಚವ್ವ** : ತನು, ಸಕಲ ತನುಗಳನ್ನು ತನ್ನಂತೆಯೇ ನೋಡುವ ದೃಷ್ಟಿ ಯಾಕೆ ಕುರುಡಾಗಿದೆ ಬಸವರಸ ?

**ಬಸವಣ್ಣ:** ಸುಂದರವಾದ ಪ್ರಶ್ನೆಯನ್ನೇ ಕೇಳಿದಿರಿ ತಾಯಿ .

ಕಣ್ಣಿನಲ್ಲಿ ಎರಡು ದೃಶ್ಯಗಳಿವೆ . ಒಂದು ಮನೋಮಯವಾದ ದೃಶ್ಯ ಮತ್ತೊಂದು ಅರಿವಿನ ಜ್ಞಾನಮಯವಾದ ದೃಶ್ಯ. ಮನೋಮಯವಾದ ದೃಶ್ಯದ ಮೂಲಕ ಕಣ್ಣನ್ನು ಬಳಸಿ, ಮನ ನೋಡುವುದರಿಂದ ಹೆಣ್ಣು ಗಂಡು ಶ್ರೀಮಂತ, ಬಡವ , ಪ್ರಧಾನಿ , ಸೈನಿಕ ಎಂದು ತನು ತನುವನ್ನೇ ಸೀಳಿ ನೋಡುತ್ತದೆ. ಹೀಗೆ ನೋಡುವುದು ತಪ್ಪು ಎಂದು , ತನುವನ್ನು ತನುವಿನಂತೆ ನೋಡು ಎಂದು , ಅರಿವಿನ ದೃಶ್ಯ ಮನೋಮಯವಾದ ದೃಶ್ಯಕ್ಕೆ ಪಾಠ ಮಾಡುತ್ತದೆ. ಹೀಗಾಗಿ ತಾನು ಹಾಗೆ ನೋಡಿದ್ದು ತಪ್ಪು ಎಂದು ತನಗೆ ಹೊಳೆಯುತ್ತದೆ.

**ರೇಚವ್ವ** : ಬಹುದಿನಗಳಿಂದ ಕಾಡುವ ಪ್ರಶ್ನೆ ಮೇಲು ಕೀಳು ಎಂದು ನೋಡುವ ಸಮಾಜ ಸುಧಾರಿಸುವುದಾದರೂ ಹೇಗೆ ಬಸವಣ್ಣ ?

**ಬಸವಣ್ಣ** : ಸಮಾಜವನ್ನು ಸುಧಾರಿಸಲು ಬರುವದಿಲ್ಲ, ತನ್ನನ್ನು ತಾನು ಸುಧಾರಿಸಿಕೊಳ್ಳಲು ಮಾತ್ರ ಬರುತ್ತದೆ . ತನ್ನನ್ನು ತಾನು ಸುಧಾರಿಸಿಕೊಳ್ಳುವುದೇ ಸಮಾಜ ಸುಧಾರಣೆ.

ತಾನು ಅರಿವಿನ ಕಣ್ಣಿನಿಂದ ನೋಡಿದರೆ , ಸಮಾಜ ಕೆಟ್ಟಿಲ್ಲ , ಸಕಲ ತನುಗಳು ತನುಗಳೇ ಆಗಿವೆ. ತನುವಿನಲ್ಲಿ ತನ್ಮಯವಾದ ಅರಿವು ಕೂಡ ಹಾಗೆಯೇ ಇದೆ. ತನುವನ್ನು ಆವರಿಸಿದ ಮನ ಕೂಡ ಒಂದೇ ಆಗಿದೆ. ಮನದಿಂದಾಗಿ ತನು ತೊಂದರೆಗೆ ಒಳಗಾಗಿದೆ.

**ಬೊಂತಾದೇವಿ** : ಅರಿವಿನ ಕಣ್ಣಿನಿಂದ ನೋಡುವುದು ಹೇಗೆ ಬಸವರಸ ?

**ಬಸವಣ್ಣ** : ಮನೋಮಯವಾದ ಕಣ್ಣು ವಸ್ತುವಿನ ಸತ್ಯ ಮುಚ್ಚಿಟ್ಟು ನೋಡುತ್ತದೆ.

ಅಂದರೆ ಅದಕ್ಕೆ ವಸ್ತುವಿನ ಸತ್ಯ ಕಾಣುವುದಿಲ್ಲ , ಅದು ಕುರುಡು ಕಣ್ಣು.

**ಬೊಂತಾದೇವಿ:** ಅದು ಹೇಗೆ ಬಸವರಸ?

**ಬಸವಣ್ಣ:** ಮನೋಮಯವಾದ ದೃಶ್ಯ ಕಲ್ಲನ್ನು ಕಲ್ಲೆಂದೆ ನೋಡುತ್ತದೆ. ಅದೇ ಕಲ್ಲನ್ನು ಕೆತ್ತಿ ಮೂರ್ತಿ ಮಾಡಿದಾಗ ಅದು ದೇಹಕ್ಕೆ ದೇವರೆಂದು ತಿಳಿ ಹೇಳಿ ಕೈ ಮುಗಿಯುವಂತೆ ಮಾಡುತ್ತದೆ. ಮನಕ್ಕೆ ವಸ್ತುವಿನ ಸತ್ಯ ಗೊತ್ತಾಗುವುದಿಲ್ಲ . ತನುವಿನಲ್ಲಿರುವ ಪದಾರ್ಥಗಳು ಒಂದೇ ಆಗಿದ್ದರೂ ತನುವನ್ನು ತನುವೆಂದು ನೋಡಲು ಮನೋಮಯವಾದ ಕಣ್ಣಿಗೆ ಸಾಧ್ಯವಾಗುವುದಿಲ್ಲ . ತನುವಿನ ಸತ್ಯ ಒಂದೆ. ಕಣ್ಣು , ಕಿವಿ , ಮೂಗು , ನಾಲಿಗೆ , ಚರ್ಮ, ರಕ್ತ , ಮೂಳೆ , ಮಾಂಸ , ಮಜ್ಜ , ಮೇದಸ್ಸು ಇವು ಯಾವು ಹೆಣ್ಣು ಅಲ್ಲ ಗಂಡು ಅಲ್ಲ . ಆದರೂ ತನು ತನುವನ್ನು ಹೆಣ್ಣೆಂದು , ಗಂಡೆಂದು ನೋಡುತ್ತದೆ. ಕಣ್ಣಿನಲ್ಲಿರುವ ಅರಿವಿನ ದೃಶ್ಯ ಮರೆವಾಯಿತು. ಮನೋಮಯ ದೃಶ್ಯದ ಬಲ ಅಧಿಕವಾಗಿರುವುದರಿಂದ ವಸ್ತುವಿನ ಸತ್ಯ ನೋಡಲು ಮನಕ್ಕೆ ಸಾಧ್ಯವಾಗುವುದಿಲ್ಲ .

**ಬೊಂತಾದೇವಿ :** ಇದಕ್ಕೆ ಪರಿಹಾರವಿಲ್ಲವೇ ಬಸವಣ್ಣ?

**ಬಸವಣ್ಣ:** ಖಂಡಿತ ಇದೆ.

ವಸ್ತುವಿನ ಸತ್ಯ ನೋಡುವ ಅರಿವಿನ ಕಣ್ಣು ಬಳಕೆಯಾಗಬೇಕು . ಆಗ ಮನೋಮಯ ದೃಶ್ಯ ತನಗೆ ತಾನೇ ಇಲ್ಲವಾಗುತ್ತದೆ. ಕಲ್ಲನ್ನು ಕಲ್ಲೆಂದೇ ನೋಡುತ್ತದೆ. ಕಲ್ಲಲ್ಲಿ ಯಾವ ದೇವರನ್ನು ಕೆತ್ತಿದರೇನು ? ಕಲ್ಲು ಕಲ್ಲೇ ಆಗಿದೆ.

**ಚನ್ನಬಸವಣ್ಣ :** ಕಣ್ಣಿನಲ್ಲಿರುವ ಎರಡು ದೃಶ್ಯಗಳನ್ನು ವಿವರಿಸಿ ನಮಗೆ ಮನವರಿಕೆ ಆಗುವಂತೆ ಹೇಳಿದಿರಿ ಬಸವರಸ . ನಾವು ಧನ್ಯರಾದೆವು ಎಂದು ಹೇಳುತ್ತ

ಸಭೆಗೆ ಮಂಗಲ ಹಾಡಿದರು.

# ವೇಷದ ಗುರು ಗುರುವಲ್ಲ, ಗುರುದೇವ ಕಾಯದ ವೇಷಧಾರಿ

ಬೆಳಗಿನ ಸತ್ಸಂಗದ ಸಭೆಯಲ್ಲಿ ಸಕಲ ಶರಣರು, ಬಸವಣ್ಣ , ಚನ್ನಬಸವಣ್ಣ ಅವರ ಬರುವಿಕೆಯ ಕಂಡು ಕೈ ಮುಗಿದು ಶರಣು ಶರಣಾರ್ಥಿ ಎಂದು ಹೇಳುತ್ತಾರೆ . ಪ್ರತಿಯಾಗಿ ಕೈ ಮುಗಿದು ಬಸವಣ್ಣ ಚನ್ನಬಸವಣ್ಣ ವೇದಿಕೆಯ ಮೇಲೆ ಕುಳಿತುಕೊಳ್ಳುತ್ತಾರೆ.

**ಚನ್ನಬಸವಣ್ಣ** : ಪ್ರಭುದೇವರು ಸೊನ್ನಲಾಪುರದ ಸಿದ್ಧರಾಮ ಶಿವಯೋಗಿಗಳನ್ನು ಕರೆದುಕೊಂಡು ಸ್ವಲ್ಪ ಸಮಯದಲ್ಲಿಯೇ ಮಹಾಮನೆಗೆ ಆಗಮಿಸುತ್ತಾರೆ. ಅವರಿಬ್ಬರನ್ನು ಮಹಾಮನೆಗೆ ಬರಮಾಡಿಕೊಳ್ಳೋಣ (ಎಂದು ಸಕಲ ಶರಣರಿಗೂ ಹೇಳುವಷ್ಟರಲ್ಲಿಯೇ ಅಲ್ಲಮಪ್ರಭು ಮತ್ತು ಸೊನ್ನಲಾಪುರದ ಸಿದ್ಧರಾಮ ಶಿವಯೋಗಿಗಳು ಮಹಾ ಮನೆಗೆ ಆಗಮಿಸುತ್ತಿರುವುದನ್ನು ಕಂಡು ಸಕಲ ಶರಣರು ಹರುಷದಿಂದ ಬರಮಾಡಿಕೊಳ್ಳುತ್ತಾರೆ. ಅಲ್ಲಮಪ್ರಭುಗಳನ್ನು ಸಿದ್ಧರಾಮ ಶಿವಯೋಗಿಗಳು ವೇದಿಕೆಯ ಮೇಲೆ ಕರೆದೊಯ್ಯುತ್ತಾರೆ. ಪ್ರಭುದೇವರು ಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಳ್ಳಲು ಬಸವಣ್ಣನವರು ಮನವಿ ಮಾಡುತ್ತಾರೆ.)

**ಚನ್ನಬಸವಣ್ಣ** : ಇಂದು ಮತ್ತೆ ನಮ್ಮ ಸಭೆಗೆ ಶೋಭೆ ಬಂದರೆ ದಯವಿಟ್ಟು ಅಲ್ಲಮ ಪ್ರಭುಗಳು ವೇದಿಕೆಯ ಅಧ್ಯಕ್ಷತೆಯನ್ನು ಅಲಂಕರಿಸಬೇಕು.

**ಅಲ್ಲಮಪ್ರಭು** : ಸಕಲ ಶರಣರಿಗೂ ಶರಣು ಶರಣಾರ್ಥಿ ಎಂದು ಹೇಳುತ್ತ , ಸೊನ್ನಲಾಪುರದ ಸಿದ್ಧರಾಮ ಶಿವಯೋಗಿಗಳನ್ನು ಕರ್ಮಯೋಗಿಗಳೆಂದು ಶರಣರಿಗೆ ಪರಿಚಯಿಸುತ್ತಾರೆ. ಮಹಾಜ್ಞಾನದ ಆಸೆಯಿಂದಾಗಿ ಕಲ್ಯಾಣಕ್ಕೆ ಆಗಮಿಸಿದ್ದಾರೆ . ಇವರಿಗೆ ನಮ್ಮೆಲ್ಲರ ಹೃದಯಪೂರ್ವಕ ಸ್ವಾಗತ .

**ಸಿದ್ಧರಾಮ ಶಿವಯೋಗಿ** : ಬೆಳಗು ಬೆಳಗಿನಲ್ಲಿ ಕೂಡಿದರೆ ಕತ್ತಲೆ ಹೇಗೆ ಉಳಿಯುವುದಿಲ್ಲವೋ ಹಾಗೆಯೇ ಮಹಾನುಭಾವ ಗೋಷ್ಠಿಯ ಮಾಡುವಲ್ಲಿ ಸತ್ಸಂಗದಲ್ಲಿ ಭಾಗಿಯಾದವರ ಅಜ್ಞಾನವು ಅಳಿದು ನಿಜವನು ಅರಿವುದರಲ್ಲಿ ಸಂದೇಹವೇ ಇಲ್ಲ . ಇಂತಹ ಶರಣರ ಮಹಾನುಭಾವರ ಸೋಂಕಿನ ಸೆರಗಿನೊಳಗೆ ಇದ್ದು , ನಾನು ಪರಮಸುಖಿಯಾಗಿ ಮಡಿವಾಳಯ್ಯನ ಪಾದದಲ್ಲಿ ಮನ ಮಗ್ನನಾದೆನು ಪ್ರಭುವೆ ಎಂದರು .

**ಚನ್ನಬಸವಣ್ಣ** : ಅಂಗದ ಮೇಲೆ ಲಿಂಗವಿಲ್ಲದಿದ್ದರೆ ಪ್ರಾಣದಲ್ಲಿ ಲಿಂಗ ಪರಿಣಾಮವನು ಐದುವ ಪರಿಯಂತು ? ಅಂಗತ್ರಯ ಉಳ್ಳವರು ಲಿಂಗತ್ರಯ ಸಂಪನ್ನರಾಗಲೇ ಬೇಕು . ಅಂತಹದರಲ್ಲಿ ಒಂದಂಗ ವಿರಹಿತರಾಗಿ ಇರುವವರು ಉಂಟೇ?

ಕಂಗಳ ನೋಟಕ್ಕೆ ಇಂಬಾವುದು ಹೇಳಾ . ಒಂದಂಗ ತೊರದಾಗ ಸಂದು ಬೇನೆ ಇಲ್ಲದೇ ಇರುವ ಮಡಿವಾಳಯ್ಯನ ನಿಲವು ನಿಮಗೆ ಹೇಗೆ ಸಾಧ್ಯವಾಗುವುದು ಸಿದ್ಧರಾಮಯ್ಯ ?

**ಸಿದ್ಧರಾಮಯ್ಯ** : ಚನ್ನಬಸವಣ್ಣ , ಬಸವಣ್ಣ , ಪ್ರಭುದೇವರಿಗೆ ಹಾಗೂ ಸತ್ಸಂಗದಲ್ಲಿ ಭಾಗಿಯಾದ ಸಕಲ ಶರಣರಿಗೆ ಶರಣು ಶರಣಾರ್ಥಿ (ಎಂದು ಕೈ ಮುಗಿದು ಚನ್ನಬಸವಣ್ಣನವರು ಕೇಳಿದ ಪ್ರಶ್ನೆಗೆ ಸಮಾಧಾನದಿಂದ ನಿಧಾನವಾಗಿ ಉತ್ತರಿಸಿದರು.)

ತನುವು ಇದೆ ಎಂಬ ಭಾವ ನನ್ನ ಮನದಲ್ಲಿಲ್ಲ . ಮನವು ಇದೆ ಎಂಬ ಭಾವ ಅರಿವಿನಲ್ಲಿ ಇಲ್ಲ . ಅರಿವು ಇದೆ ಎಂಬ ಭಾವ ನಾನು ನುಡಿಯುವ ನುಡಿಯೊಳಗಿಲ್ಲ, ಹೀಗೆ ತನು , ಮನ , ಜ್ಞಾನ ಎಂಬ ತ್ರಿವಿಧವು ಏಕಾರ್ಥವಾದ ಬಳಿಕ ಯಾವ ತನುವಿನ ಮೇಲೆ ಲಿಂಗವನ್ನು ಸ್ವಾಯತವನು ಮಾಡಲಿ ಚನ್ನಬಸವಣ್ಣ? ಕಾಯವೇ ಬಸವಣ್ಣ, ಪ್ರಾಣವೇ ಪ್ರಭುದೇವ, ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಮಹಾ ಜ್ಞಾನದಲ್ಲಿ ಒಳಹೊರಗೆಂಬುದಿಲ್ಲ ಚನ್ನಬಸವಣ್ಣ .

**ಚನ್ನಬಸವಣ್ಣ** : ಅಂಗವಿಲ್ಲ ಎಂದು ಹೇಳುವಲ್ಲಿಯೇ ಅಂಗದ ಶಂಕೆ ಬಿಡದು. ಅಂಗವಿಲ್ಲವೆಂದು ಹೇಳಿದ ಮೇಲೆ ಇತ್ತು ಎನ್ನುವ ಶಂಕೆ ಹುಟ್ಟಿದಂತಲ್ಲವೇ ? ಅಂಗವಿಲ್ಲವೆಂದು ಹೇಳುವ ಮಾತಿನಲ್ಲಿಯೇ ಲಿಂಗದ ಶಂಕೆಯು ಬಚ್ಚಿಟ್ಟುಕೊಂಡಿದೆ . ಇಲ್ಲ ಎಂಬುದಕ್ಕೆ ಉಂಟು ಎಂಬುದೇ ಮರಹು ಉಂಟು ಎಂಬುದಕ್ಕೆ ಇಲ್ಲ ಎಂಬುದೇ ಮರಹು ಉಂಟು , ಇಲ್ಲವೆಂಬುದು ಕೂಡ ಅರಿಯುವವರೆಗೆ ಪ್ರಾಣಲಿಂಗ ಸಂಬಂಧ ಸಯವಾದದ್ದು . ಹೀಗೆಂದ ಮೇಲೆ ಪ್ರಾಣಲಿಂಗ ಸಂಬಂಧವೆಂಬುವುದು ನಿನಗೆ ಬಹುದೂರ ಸಿದ್ಧರಾಮಯ್ಯ.

**ಸಿದ್ಧರಾಮಯ್ಯ** : ತನುವಿದೆ ಎಂದು ನೋಡಲು ಹೋದರೆ ತನುವೆಲ್ಲ ಗುರುದೇವನೆ, ಮನವಿದೆ ಎಂದು ನೋಡಲು ಹೋದರೆ ಮನವೆಲ್ಲ ಪ್ರಭುವೇ, ಭಾವವಿದೆ ಎಂದು ನೋಡಲು ಹೋದರೆ ಭಾವವೆಲ್ಲ ಬಸವರಸ. ನೀನೆಂಬುದು ನನ್ನಲ್ಲಿ ಉಂಟಾಗಿ ಭೃತ್ಯಾಚಾರವೆಂಬುದು ಇಲ್ಲ, ನಾನೆಂಬುದು ಕೂಡ ನನ್ನಲ್ಲೇ ಉಂಟಾಗಿ ಅಹಂಕಾರವಿಲ್ಲ . ಲಿಂಗ ಸರ್ವಾಂಗದಲ್ಲಿ ಸಂಗಮವಾಗಿರುವುದನ್ನು ನುಡಿದು ಹೇಳುವಂತಿಲ್ಲ ಚನ್ನಬಸವಣ್ಣ, ಅದು ಸ್ವಾನುಭಾವಕ್ಕೆ ಬರುವ ಮಾತು.

**ಪ್ರಭುದೇವರು** : ಆಕಾಶವನು ಹಾರುವವನ ಮುಂದೆ ನಿಚ್ಚಣಿಕೆಯ ಅವಶ್ಯಕತೆಯಾದರೂ ಯಾಕೆ ಬೇಕು ? ಸಮುದ್ರವನ್ನೆ ದಾಟುವವನಿಗೆ ಹರಗೋಲಿನ ಹಂಗೇಕೆ? ಸೀಮೆಯ ಮೀರಿದ ನಿಸ್ಸೀಮ ಸಿದ್ಧರಾಮನಿಗೆ ಸೀಮೆಯ ಹಂಗೇಕೆ ? ಗುಹೇಶ್ವರ ಲಿಂಗದಲ್ಲಿಯೇ ಸಂಗಮವಾದ ಸಿದ್ಧರಾಮನಿಗೆ ಪುನಃ ಲಿಂಗವೇಕೆ ಹೇಳಾ ಚನ್ನಬಸವಣ್ಣ?

**ಚನ್ನಬಸವಣ್ಣ** : ಪ್ರಭುಗಳಿಗೆ ಕೈಮುಗಿದು , ಆಕಾಶದಲ್ಲಿ ಹಾರಾಡುವ ಪಟಕ್ಕೆ ಕೂಡ ಮೂಲ ಸೂತ್ರಬೇಕು . ಭೂಮಿ ಇಲ್ಲದೇ ನಡೆಯುವುದೆ ? ಅಂಗಕ್ಕೆ ಲಿಂಗ ಸಂಗವಿಲ್ಲದೇ

ಅದು ನಿಸ್ಸಂಗ ಆಗುವುದಿಲ್ಲ . ಶರಣರ ಸಭೆಯಲ್ಲಿ ಅರಿವಿನ ಲಿಂಗಯ್ಯನ ಸಂಗವಿಲ್ಲದೇ ನಿಸ್ಸಂಗಿ ಎಂದು ನುಡಿಯಬಹುದೇ ಪ್ರಭುವೆ?

ಪಟವು ಆಕಾಶವನು ಅಗಲಿತೆಂದರೇ ಆ ಪಟದ ಸೂತ್ರದ ಸಂಚು ಕೆಳಗಿರುತ್ತದೆ. ಬಯಲಲ್ಲಿ ಚಲಿಸುವ ಸೂರ್ಯ ಚಂದ್ರರ ಚಲನೆ ಕೂಡ ತಪ್ಪದು ನೋಡಾ. ಭೂಮಿಯನ್ನು ಒಲ್ಲದೇ ಗಗನಕ್ಕೆ ಹಾರಿದವನಿಗೆ ಆ ವ್ಯೋಮದಲ್ಲಿ ನಿಲ್ಲುವುದಕ್ಕೆ ಒಂದೆಡೆಯಾದರೂ ಇರಬೇಕಲ್ಲ, ಮಣ್ಣು ಮರನನ್ನು ಉಳಿದು ತೋರುವ ಹಣ್ಣು ರುಚಿಯುಂಟೇ ? ನಮ್ಮ ಕೂಡಲಚೆನ್ನಸಂಗನ ಶರಣರೊಳಗಿದ್ದು ಸೀಮೆಯ ಮೀರಿದ ನಿಸ್ಸೀಮನು ಸಿದ್ಧರಾಮಯ್ಯನು ಎಂಬ ನಿಮ್ಮ ಮಾತು ಅಂತಿರಲಯ್ಯ ಪ್ರಭುವೆ .

**ಪ್ರಭುದೇವರು :** ಕಾಯವೇ ಸಕಲ, ಪ್ರಾಣವೇ ಸಕಲ ನಿಷ್ಕಲ. ಭಾವವೇ ನಿಷ್ಕಲ ಲಿಂಗವಾಗಿರಲು ಮತ್ತೆ ಬೇರೆ ಆಯತ ಸ್ವಾಯತ, ಸನ್ನಿಹಿತವೆಂಬುದು ಇಲ್ಲ ನೋಡಾ. ಅರಿವು ಎನ್ನುವ ಶಿವ , ಮನ ಎನ್ನುವ ಶಕ್ತಿ ಸಂಬಂಧವೇ ದೇಹ, ದೇಹಿಗಳಾಗಿದ್ದ ಬಳಿಕ ಪುನಃ ಗುಹೇಶ್ವರ ಲಿಂಗದಲ್ಲಿ ಮತ್ತೆ ಬೇರೊಂದು ಕುರುಹನು ಹಿಡಿದು ಕಾಯವನ್ನು ಮನವನ್ನು ಅರಿಯಬೇಕೇನಯ್ಯ ಚನ್ನಬಸವಣ್ಣ ?

(ಸಿದ್ಧರಾಮ ಶಿವಯೋಗಿಗಳ ಚನ್ನಬಸವಣ್ಣನವರ ಮತ್ತು ಪ್ರಭುದೇವರ ಸೌಹಾರ್ದಯುತ ಸಂವಾದವನ್ನು ಸಕಲ ಶರಣರು ಮೈ ತುಂಬಾ ಕಣ್ಣಾಗಿ ಕುತೂಹಲದಿಂದ ಕೇಳುತಿದ್ದಾರೆ.)

**ಚನ್ನಬಸವಣ್ಣ :** ಆಚಾರ ಲಿಂಗದ ಮೇಲೆ ಆಯತವಾದುದೇ ಇಷ್ಟಲಿಂಗ. ಆ ಇಷ್ಟವಿಡಿದುಹುದೇ ಪ್ರಾಣಲಿಂಗ. ಸ್ವಾಯತ ಇಂತಹ ಪ್ರಾಣಲಿಂಗ ಅಂಗದಲ್ಲಿ ಉದಯಿಸಿದಲ್ಲದೇ ಇಷ್ಟಲಿಂಗ ಕಾಣಬಾರದು. ಈ ಬೇಧವ ಬೇಧಿಸಬಲ್ಲಡೆ ಕೂಡಲ ಸಂಗಯ್ಯನಲ್ಲಿ ಲಿಂಗೈಕ್ಯನೆಂದು ತಿಳಿಯುವೆ ಪ್ರಭುವೆ .

ತಿಳಿ ತುಪ್ಪ ಗಟ್ಟಿ ತುಪ್ಪ ಇವೆರಡಕ್ಕೂ ಬೇಧವಿಲ್ಲ .ಹಾಗೆಯೇ ದೀಪಕ್ಕೂ ದೀಪ್ತಿಗೂ ಬೇಧವಿಲ್ಲ. ಅಂದ ಮೇಲೆ ಆತ್ಮನಿಗೆ ದೇಹಕ್ಕೆ ಹಂಗುಂಟೇ ? ಕ್ಷೀರಕ್ಕೆ ಸ್ವಾದಕ್ಕೆ ಭಿನ್ನವುಂಟೇ? ಕಾರಣ ಸಾಕಾರವೆ ನಿರಾಕಾರವೆಂದು ಅರಿತು, ಅಂಗ ಲಿಂಗ ಸಂಬಂಧವಿಲ್ಲದವರ ಸಂಗ ಕೂಡಲ ಚೆನ್ನಸಂಗನ ಶರಣರು ಇದನ್ನು ಮೆಚ್ಚುವುದಿಲ್ಲ ಪ್ರಭುವೆ.

(ಚನ್ನಬಸವಣ್ಣನವರು ಪ್ರಭುದೇವರು ಕೊಟ್ಟ ಉತ್ತರವನ್ನು ಖಂಡಿಸಿ ನುಡಿದುದಕ್ಕಾಗಿ ಅಸಂಖ್ಯಾತ ಶರಣರ ಮುಖ ನೋಡಲು ಆ ಸಮಯದಲ್ಲಿ ಬಸವಣ್ಣ ಮೋಳಿಗೆ ಮಾರಯ್ಯ ಮೆರೆಮಿಂಡ ದೇವ ಉರಿಲಿಂಗ ಪೆದ್ದಿ , ಪ್ರಸಾದ ಭೋಗಣ್ಣ ಮುಖ್ಯವಾದ ಏಳು ನೂರಾ ಎಪ್ಪತ್ತು ಅಮರಗಣಂಗಳೆಲ್ಲರು ನುಡಿವ ವಚನ).

**ಮೋಳಿಗೆಯ ಮಾರಯ್ಯ :** ವಿಷವಿಲ್ಲದ ಹಾವಿಗೆ ಯಾರಾದರೂ ಅಂಜಲು ಸಾಧ್ಯವೆ? ಖಡ್ಗವಿಲ್ಲದ ಭಂಟ ಘರ್ಜಿಸಿದರೆ , ಯಾರಾದರೂ ಅಂಜಲು ಸಾಧ್ಯವೆ ? ಇವೆಲ್ಲ ಹೊರಗಣ ಮಾತು. ಎಷ್ಟು ಹಾಡಿದಡೆ ಏನು, ಸ್ವತಃ ತಾನು

ಪ್ರಾಣಲಿಂಗಿಯಾಗಲು ಸಾಧ್ಯವೆ? ಅದು ನಿಶ್ಚಯವಲ್ಲ . ಗೊತ್ತಿದ್ದರೆ ಸ್ವಾನುಭಾವಕ್ಕೆ ಬರುವಂತೆ ಮಾತನಾಡಬೇಕು.

**ಸಿದ್ಧರಾಮ ಶಿವಯೋಗಿ :** ಮನುಷ್ಯ ಜ್ಞಾನಿ. ಸದಾ ಆನಂದದಲ್ಲಿ ಇರಬೇಕಾದವನು. ಆದರೂ ಆನಂದದಲ್ಲಿ ಇಲ್ಲ, ಆನಂದದ ಹುಡುಕಾಟಕ್ಕಾಗಿ ಇಡೀ ಆಯುಷ್ಯವನ್ನೇ ಕಳೆಯುತ್ತಾನೆ. ಆನಂದಕ್ಕಾಗಿ ವಿಲಿವಿಲಿ ಒದ್ದಾಡುತ್ತಾನೆ .

**ಮೋಳಿಗೆಯ ಮಾರಯ್ಯ :** ಹಾಗಾದರೆ, ಆನಂದ ಎನ್ನುವುದು ಎಲ್ಲಿದೆ ಸಿದ್ದರಾಮಯ್ಯ? ಮನುಷ್ಯ ಆನಂದವನ್ನು ಎಲ್ಲಿ ಹುಡುಕುತ್ತಿದ್ದಾನೆ ?

**ಸಿದ್ಧರಾಮ ಶಿವಯೋಗಿ :** ಮನುಷ್ಯ ಆನಂದವನ್ನು ರುಚಿಯಲ್ಲಿ, ವಾಸನೆಯಲಿ, ಸ್ಪರ್ಶದಲ್ಲಿ, ದೃಶ್ಯದಲ್ಲಿ, ಶಬ್ದದಲ್ಲಿ ಹುಡುಕುತ್ತಿದ್ದಾನೆ. ಆನಂದ ಅಲ್ಲಿ ಇಲ್ಲವೆಂದು ತಿಳಿಯಲು ಮನುಷ್ಯನಿಗೆ ತುಂಬಾ ತಡವಾಗುತ್ತದೆ . ಏಕೆಂದರೆ ತನ್ನ ತನುವಿನಲ್ಲಿರುವ ಚಿತ್ತ ತನಗೇ ತೊಂದರೆ ಉಂಟು ಮಾಡುತ್ತದೆ .

ರಾಜಸ , ತಾಮಸ , ಸಾತ್ವಿಕ ಗುಣಗಳಿಗೆ ಚಿತ್ತ ಮರುಳಾಗಿ ಒಂದಿಷ್ಟು ಕಾಲ ತನುವನ್ನು ರಾಜಸನನ್ನಾಗಿ ಮುಂದುವರಿಸುತ್ತದೆ. ಅಧಿಕಾರದ ಅಮಲು ನೆತ್ತಿಗೇರಿ ಸುಖ ದುಃಖಗಳನ್ನು ಅನುಭವಿಸುತ್ತ ಅಧಿಕಾರ ಚಲಾಯಿಸುತ್ತದೆ .

ತಾನು ಅಧಿಕಾರಿ, ತನ್ನಂತೆಯೇ ಇರುವ ಇತರ ತನುಗಳು ತನಗೆ ಸೇವಕರು . ಸೇವಕರ ಮೇಲೆ ಅಧಿಕಾರ ಚಲಾಯಿಸುವುದೆಂದರೆ , ಚಿತ್ತಕ್ಕೆ ಬಲು ಸುಖ . ಏಕೆಂದರೆ ಚಿತ್ತ ವಿಚಿತ್ತವಾಗಿದೆ. ಚಿತ್ತದ ಚಿತ್ತ ಅಧಿಕಾರದ ಮೇಲೆ ನೆಟ್ಟಿದೆ.

ಅಧಿಕಾರವೆಂದರೆ ಚಿತ್ತಕ್ಕೆ ಸುಖ . ಅಧಿಕಾರವಿಲ್ಲದಿದ್ದರೆ ಚಿತ್ತಕ್ಕೆ ದುಃಖ . ಚಿತ್ತ ತನಗಾದ ಸುಖವನ್ನು ತನಗಾದ ದುಃಖವನ್ನು ತನುವಿನ ಮೂಲಕ ಅನುಭವಿಸುತ್ತದೆ . ಅಧಿಕಾರದಲ್ಲಿ ಸುಖವಿಲ್ಲ ಅಧಿಕಾರವಿಲ್ಲದಿದ್ದರೆ ದುಃಖವೂ ಇಲ್ಲವೆಂದು ಚಿತ್ತಕ್ಕೆ ತಿಳಿಯುವುದಿಲ್ಲ . ಹೀಗಾಗಿ ತನುವಿನ ಆಯುಷ್ಯದ ಒಂದಿಷ್ಟು ಕಾಲ ಅಥವಾ ಆಯುಷ್ಯದ ಪೂರ್ಣಾವಧಿಯನ್ನು ಚಿತ್ತ, ರಾಜಸ ಗುಣದಲ್ಲಿಯೇ ಕಳೆಯುತ್ತದೆ . ರಾಜಸ ಗುಣ ಸಾಕಾದಾಗ ಚಿತ್ತ ತಾಮಸ ಗುಣವನ್ನು ಆಯ್ಕೆ ಮಾಡಿಕೊಳ್ಳುತ್ತದೆ .

ಸದಾ ವಿಷಯ ಸುಖದಲ್ಲಿ , ಮದಿರೆಯ ಸುಖದಲ್ಲಿ ನಾನಾ ಭಕ್ಷ ಭೋಜನಗಳ ರುಚಿಯಲ್ಲಿ ನೃತ್ಯ , ಮೋಜು , ಮಜದಲ್ಲಿ ಕಾಲ ಕಳೆಯುವುದೆಂದರೆ ಚಿತ್ತಕ್ಕೆ ಬಲು ಸುಖ . ಏಕೆಂದರೆ , ಚಿತ್ತ ವಿಚಿತ್ತವಾಗಿ ತಾಮಸ ಗುಣವನ್ನು ಆಯ್ಕೆ ಮಾಡಿಕೊಂಡಿದೆ . ರಾಜಸ ಗುಣದಿಂದ ತಾಮಸ ಗುಣಕ್ಕೆ ಪಲ್ಲಟವಾಗಿದೆ .

**ಮೋಳಿಗೆಯ ಮಾರಯ್ಯ :** ಚಿತ್ತ ಇಷ್ಟೆಲ್ಲ ಕೆಲಸವನ್ನು ತನುವಿನಲ್ಲಿ ಆಶ್ರಯ ಪಡೆದು, ತನುವಿಗೆ ಮೋಸ ಮಾಡುತ್ತದೆ ಎಂದು ನನ್ನ ಅನುಭವಕ್ಕೆ ಇಲ್ಲದಿದ್ದರೂ ನನಗೆ ದುಃಖವಾಗಿ ಲೋಕದ ಸುಖವನ್ನು ತ್ಯಜಿಸಿ , ಕಾಶ್ಮೀರದಿಂದ ಇಲ್ಲಿಗೆ ಬಂದಿರುವೆ . ನನ್ನ ಅನುಭವಕ್ಕೆ ಬರುವಂತೆ , ತಾವು ವಿವರವಾಗಿ ಚಿತ್ತದ ಬಗ್ಗೆ ಹೇಳಿದಿರಿ ಶರಣರೆ

. ದಯವಿಟ್ಟು ಮುಂದುವರಿಸಿರಿ.

**ಸಿದ್ಧರಾಮ ಶಿವಯೋಗಿ** : ವಿಷಯ ಸುಖಕ್ಕಾಗಿ ಮದಿರೆಯ ಸುಖಕ್ಕಾಗಿ, ಮೃಷ್ಟಾನ್ನ ಭೋಜನದ ಸುಖಕ್ಕಾಗಿ , ಶಬ್ದ ಸುಖಕ್ಕಾಗಿ , ದೃಶ್ಯ ಸುಖಕ್ಕಾಗಿ , ಚಿತ್ತ ತಾನು ವಾಸ ಮಾಡಿದ ತನುವನ್ನೇ ಘಾಸಿ ಗೊಳಿಸುತ್ತದೆ . ಕ್ಷಣ ಕ್ಷಣಕ್ಕೂ ಸುಖ ಕೊಡುತ್ತ ಕ್ಷಣ ಕ್ಷಣಕ್ಕೂ ದುಃಖ ಕೊಡುತ್ತ ಈಡೀ ತನುವನ್ನು ಹಂತ ಹಂತವಾಗಿ ಕೊಲ್ಲುತ್ತದೆ. ಒಂದಿಷ್ಟು ಕಾಲ ಚಿತ್ತ ತಾಮಸ ಗುಣದಲ್ಲಿ ಕಳೆದು ಸಾತ್ವಿಕ ಗುಣಕ್ಕೆ ಜಿಗಿಯುತ್ತದೆ.

**ಮೋಳಿಗೆಯ ಮಾರಯ್ಯ** : ರಾಜಸ , ತಾಮಸ , ಗುಣಗಳಂತೆ , ಸಾತ್ವಿಕ ಗುಣವು ಒಳ್ಳೆಯದಲ್ಲವೇ ಶರಣರೆ ?

**ಸಿದ್ಧರಾಮ ಶಿವಯೋಗಿ** : ಸರಿಯಾದ ಪ್ರಶ್ನೆ ಕೇಳಿದಿರಿ ಶರಣರೆ. ಲೋಕಕ್ಕೆ ಸಾತ್ವಿಕನೆಂದರೆ, ಬಲು ಪ್ರೀತಿ . ಸಾತ್ವಿಕನೆನ್ನುವುದು ಕೂಡ ಒಂದು ಗುಣ . ಅದು ಚಿತ್ತ ವಿಚಿತ್ತವಾಗಿ ಸಾತ್ವಿಕ ಎನ್ನುವ ಹುಸಿ ಸೋಗಿನ ಸುಖ ಅನುಭವಿಸುವ ನಾಟಕ ಎಂದು ಮನುಷ್ಯನಿಗೆ ತಿಳಿಯುವುದಿಲ್ಲ. ಏಕೆಂದರೆ ಮನುಷ್ಯನಿಗೆ ತಿಳಿಯದಂತೆ , ಮನುಷ್ಯನಿಗೆ ಮೋಸ ಮಾಡುತ್ತ ಚಿತ್ತ ಮನುಷ್ಯನಲ್ಲಿಯೇ ಬಚ್ಚಿಟ್ಟುಕೊಂಡಿದೆ .

ಚಿತ್ತಕ್ಕೆ ದಾನಿ ಎನಿಸಿಕೊಳ್ಳುವ ಆಸೆ ಉಂಟಾದಾಗ ಅದು ತನ್ನಂತೆ ಇರುವ ಮನುಷ್ಯನಿಗೆ ದಾನ ಮಾಡುತ್ತದೆ. ದಾನ ಕೊಡುವುದು, ದಾನ ಪಡೆಯುವುದು ಇವೆರಡು ಕೂಡ ಚಿತ್ತದ ಗುಣವೆಂದು ಚಿತ್ತವೇ ಮರೆಯುತ್ತದೆ. ಹೀಗಾಗಿ ದಾನ ಕೊಡುವ ತನು ದಾನಿ ಎಂದು ದಾನ ಪಡೆಯುವ ತನು ಭಿಕ್ಷುಕನೆಂದು, ತನುವಿನಿಂದಲೇ ತನು ಕರೆಯಿಸಿಕೊಳ್ಳುತ್ತದೆ. ಹೀಗೆ ಕರೆಯಿಸಿಕೊಳ್ಳುವಾಗ ದಾನಿ ತನುವಿನಲ್ಲಿರುವ ಚಿತ್ತಕ್ಕೂ ಸುಖವಾಗುತ್ತದೆ. ಬಿಕ್ಷುಕನ ತನುವಿನಲ್ಲಿರುವ ಚಿತ್ತಕ್ಕೂ ಸುಖವಾಗುತ್ತದೆ. ದಾನ ಮಾಡಿದ ವಸ್ತು ತನ್ನದಲ್ಲವೆಂದು , ದಾನ ಪಡೆದ ವಸ್ತು ಆತನದಲ್ಲವೆಂದು ಚಿತ್ತಕ್ಕೆ ಗೊತ್ತಾಗುವುದಿಲ್ಲ . ಏಕೆಂದರೆ ಚಿತ್ತ ವಿಚಿತ್ತವಾಗಿ. ದಾನಿ ತನುವನ್ನು ಬಿಕ್ಷುಕನ ತನುವನ್ನು ಯಾಮಾರಿಸಿದ ಚಿತ್ತ , ಅವೆರಡೂ ತನುಗಳಿಗೆ ತಾನೇ ಸಾಮ್ರಾಟನಾಗಿದೆ . ಚಿತ್ತ ಹೇಳಿದಂತೆ , ತನು ಕೇಳುತ್ತದೆ. ಇದು ಚಿತ್ತದ ಕಪಟತನವೆಂದು ತನುವಿಗೆ ಗೊತ್ತಾಗುವುದಿಲ್ಲ.

**ಮೋಳಿಗೆಯ ಮಾರಯ್ಯ** : ಚಿತ್ತದ ಬಗ್ಗೆ ಮತ್ತಷ್ಟು ವಿವರಿಸಿ ಹೇಳಲು ಸಾಧ್ಯವೇ ಸಿದ್ಧರಾಮಯ್ಯ ?

**ಸಿದ್ಧರಾಮ ಶಿವಯೋಗಿ** : ಚಿತ್ತ, ತನುವನ್ನು ರಾಜನನ್ನಾಗಿ ಮಾಡುತ್ತದೆ. ರಾಜಕಾರಣಿಯನ್ನಾಗಿ , ಅಧಿಕಾರಿಯನ್ನಾಗಿ , ಸೇವಕನನ್ನಾಗಿ , ಮಾಡುತ್ತದೆ. ಕುಡುಕ ವಿಷಯ ಲಂಪಟ, ವೇಶ್ಯೆ, ಕಳ್ಳ , ಸುಳ್ಳನನ್ನಾಗಿ ಮಾಡುತ್ತದೆ . ದಾನಿಯನ್ನಾಗಿ , ಬಿಕ್ಷುಕನನ್ನಾಗಿ ಮಾಡುತ್ತದೆ. ವಸ್ತುವಿನ ಸತ್ಯ ತನುವಿಗೆ ಗೊತ್ತಾಗದಂತೆ ತನುವಿನಲ್ಲಿದ್ದ ಚಿತ್ತ ತನುವನ್ನೇ ಮೋಸ ಮಾಡುತ್ತದೆ. ಇದು ಚಿತ್ತ ಮಾಡಿದ ಮೋಸವೆಂದು ತನುವಿಗೆ ತಿಳಿಯದೇ ಹೋಗುತ್ತದೆ. ಏಕೆಂದರೆ, ಚಿತ್ತಕ್ಕೆ ತನು ಉಪಕರಣವಾಗಿದೆ ಹೊರತು ತನುವೆ

ಏನೆಲ್ಲಾ ಅಲ್ಲ .

ನಾನು ಹೀಗೆ ತನುವನ್ನು ಮೋಸ ಮಾಡುವುದು ತಪ್ಪೆಂದು ಚಿತ್ತಕ್ಕೆ ಅರಿವಾಗುವುದೇ ಇಲ್ಲ. ತನುವನ್ನು ಮೋಸ ಮಾಡುವುದರಲ್ಲಿಯೇ ಚಿತ್ತಕ್ಕೆ ಸುಖವಿದೆ. ತನುವಿಗೆ ಸುಖವಾದರೂ ಚಿತ್ತಕ್ಕೆ ಸುಖ ತನುವಿಗೆ ದುಃಖವಾದರೂ ಚಿತ್ತಕ್ಕೆ ಸುಖ, ಇಂತಹ ಚಿತ್ತವನ್ನು ತನು ತನ್ನ ತನುವಿನಲ್ಲಿ ಇಟ್ಟುಕೊಂಡು ಆಶ್ರಯ ನೀಡಿ ಪೋಷಿಸುತ್ತದೆ.

**ಮೋಳಿಗೆಯ ಮಾರಯ್ಯ** : ಬಸವಣ್ಣನವರು, 'ಎನ್ನ ಚಿತ್ತವು ಹತ್ತಿಯ ಹಣ್ಣು ನೋಡಯ್ಯ, ವಿಚಾರಿಸಿದಡೆ ಹುರಿಳಿಲ್ಲವಯ್ಯ . ಪ್ರಪಂಚಿನ ಥಂಬಿನಲ್ಲಿ ಎನ್ನದೊಂದು ರೂಪು ಮಾಡಿ ನೀವಿರಿಸಿದಿರಿ ಕೂಡಲ ಸಂಗಮದೇವಾ ' ಎಂದು ಹಾಡಿರುವರಲ್ಲ . ಇದು ಅರ್ಥಪೂರ್ಣವಾದ ವಚನ.

**ಸಿದ್ಧರಾಮ ಶಿವಯೋಗಿ** : ಸತ್ಯವಾದ ಮಾತು ಶರಣರೇ ತನುವಿನಲ್ಲಿಯೇ ತೊಂದರೆ ಇದೆ ಎಂದು ತನುವಿಗೆ ತನುವನ್ನು ಆವರಿಸಿದ ಮನಕ್ಕೆ ತಿಳಿಯುವುದಿಲ್ಲ. ತನುವಿನಲ್ಲಿ ತನ್ಮಯವಾದ ಅರಿವು ಗುರುದೇವನಾಗಿ ತನುವಿಗೂ ಮನಕ್ಕೂ ಮಾಡುವ ಸತ್ಯದ ಪಾಠ ತನು ಮತ್ತು ಮನ ಇವೆರಡೂ ಕೇಳದಿರುವುದೇ ತನುಕುಲದ ದುರ್ದೈವ. ವಸ್ತುವಿನ ಸತ್ಯವನ್ನು ಮರೆಮಾಡಿ ವಸ್ತುವಿಗೆ ಮರುಳಾಗುವಂತೆ , ತನುವನ್ನು ಪ್ರೇರೇಪಿಸುವುದೇ ಚಿತ್ತದ ಗುಣ.

**ಮೋಳಿಗೆಯ ಮಾರಯ್ಯ** : ಇದನ್ನು ವಿವರಿಸಿ ಹೇಳಲು ಸಾಧ್ಯವೇ ಸಿದ್ಧರಾಮಯ್ಯ?

**ಸಿದ್ಧರಾಮ ಶಿವಯೋಗಿ** : ವಸ್ತುವಿನ ಸತ್ಯ ಹಳದಿ ಲೋಹ. ಚಿತ್ತ ಅದರ ಮೇಲೆ ತನ್ನ ದೃಷ್ಟಿ ನೆಟ್ಟು ಬಂಗಾರವನ್ನಾಗಿಸುತ್ತದೆ. ಅದನ್ನು ಪಡೆದವ ಶ್ರೀಮಂತ. ಅದನ್ನು ಕದ್ದವ ಕಳ್ಳ , ಕೊಂದು ಪಡೆದವ ಕೊಲೆಗಾರ. ಯುದ್ಧ ಮಾಡಿ ಪಡೆದವನು ರಾಜ . ಚಿನ್ನಕ್ಕಾಗಿ ಹಪ ಹಪಿಸುವವ ಭಿಕಾರಿ.

ಒಂದು ಸರ್ಕಾರ, ಒಂದು ದೇಶವನ್ನು , ಒಬ್ಬ ವ್ಯಕ್ತಿಯನ್ನು ಆಳೆಯುವುದು ಕೂಡ ಚಿನ್ನದಿಂದಲೇ! ಏನೀ ಚಿತ್ತದ ಮಹಿಮೆ ! ಇಡೀ ದೇಶವನ್ನಾಳುವ ಸರ್ಕಾರಕ್ಕೂ ನ್ಯಾಯ ನೀಡುವ ನ್ಯಾಯಾಲಯಗಳಿಗೂ, ನಿಯಂತ್ರಿಸುವ ಆಡಳಿತ ವರ್ಗಕ್ಕೂ , ಈ ಚಿತ್ತದ ಮಹಿಮೆ ಗೊತ್ತಾಗಬಾರದೇ . ವಿಶ್ವವಿದ್ಯಾಲಯಗಳಿಗೂ . ಗುರುವರ್ಗಕ್ಕೂ ಆಶ್ರಮ , ಮಠ, ಪೀಠಾಧಿ ಪತಿಗಳಿಗಾದರೂ ಈ ಚಿತ್ತದ ಮಹಿಮೆ ಗೊತ್ತಾಗಬಾರದೆ ! ಗೊತ್ತಾಗುವುದಿಲ್ಲ. ಏಕೆಂದರೆ, ಗುರುವಾಗುವುದು ಕೂಡ ಚಿತ್ತದಿಂದಲೇ , ಗುರುವಿಗೆ ಶಿಷ್ಯನಾಗುವುದು ಕೂಡ ಚಿತ್ತದಿಂದಲೇ !

**ಮೋಳಿಗೆಯ ಮಾರಯ್ಯ** : ಗುರುವಾಗುವುದು ಚಿತ್ತದ ಮಹಿಮೆಯೆ ಸಿದ್ಧರಾಮಯ್ಯ?

**ಸಿದ್ಧರಾಮ ಶಿವಯೋಗಿ** : ಗುರುವಾಗುವುದೆಂದರೆ, ಮಠಾಧೀಶನಾಗುವುದೆಂದರೆ, ಚಿತ್ತಕ್ಕೆ ಸುಖ. ಏಕೆಂದರೆ, ತನುವಿಗೆ ಖಾವಿ ತೊಡಿಸಿ, ಪುಸ್ತಕದ ನಾಲ್ಕು ಮಂತ್ರಗಳನ್ನು ತನುವಿನ ಮೂಲಕ ಪಠಿಸಿ, ವಿಭೂತಿ, ರುದ್ರಾಕ್ಷಿಗಳನ್ನು ತನುವಿಗೆ ಧರಿಸಿ, ಲಿಂಗ, ಕೊರಳಿಗೆ ಹಾಕಿ,

ಪಾದಕ್ಕೆ ಆವಿಗೆ ತೋಡಿಸಿ, ಕೈಯಿಗೆ ಬೆತ್ತ ಹಿಡಿಸಿ, ಚಿತ್ತ ತನುವನ್ನು ಗುರುವಾಗಿಸುತ್ತದೆ. ಇದು ತನಗೆ ತಾನೇ ಮೋಸ ಮಾಡಿಕೊಳ್ಳುವ ವೇಷವೆಂದು ತನುವಿಗೆ ಅನ್ನಿಸುವುದೇ ಇಲ್ಲ. ಇದು ಚಿತ್ತ ಮಾಡಿದ ಮೋಸವೆಂದು ಕೂಡ ತನುವಿಗೆ ತಿಳಿಯುವುದಿಲ್ಲ. ತನು ಗುರುವಾಗಿ ಆ ಗುರುವಿನ ತನುವಿಗೆ ಮತ್ತೊಂದು ತನು ಶಿಷ್ಯನಾಗಿ ತನು ತನ್ನ ಆಯುಷ್ಯವನ್ನು ವ್ಯರ್ಥವಾಗಿ ಕಳೆದುಕೊಳ್ಳುತ್ತದೆ.

**ಮೋಳಿಗೆಯ ಮಾರಯ್ಯ** : ಚಿತ್ತವನ್ನು ಕೊಲ್ಲಲು ಸಾಧ್ಯವಿಲ್ಲವೇ ಸಿದ್ಧರಾಮಯ್ಯ?

**ಸಿದ್ಧರಾಮ ಶಿವಯೋಗಿ** : ಸಾಧ್ಯವಿದೆ ಶರಣರೆ

ಚಿತ್ತವನ್ನು ಕೊಲ್ಲುವ ಶಕ್ತಿಯುಳ್ಳ ತನುವಿಗೆ ಗುರುತನದ ವೇಷ ಬೇಡ . ಶಿಷ್ಯನ ಸೇವೆಯೂ ಬೇಡ ಗುರುದೇವನಿಗೆ ವೇಷದ ಅವಶ್ಯಕತೆ ಇಲ್ಲ. ಗುರುದೇವ ಕಾಯದ ವೇಷಧಾರಿ. ಪ್ರತಿ ಕಾಯದಲ್ಲಿಯೂ ಗುರುವಿದ್ದಾನೆ . ಅರಿವೆಂಬ ಗುರುದೇವನು ಚಿತ್ತವನ್ನು ಅರಿವಿನಿಂದ ನೋಡಿ ಆ ಅರಿವಿನಲ್ಲಿಯೇ ಚಿತ್ತವನ್ನು ನೆಟ್ಟು ತನುವಿನಲ್ಲಿ ತನ್ಮಯವಾದ ಆ ಅರಿವಿನಿಂದಲೇ ತನುವಿನ ಚಿತ್ತವನ್ನು ಕೊಲ್ಲುತ್ತಾನೆ. ಚಿತ್ತದ ಸಕಲ ಪಾತ್ರಗಳನ್ನು ಅರಿವಿನಿಂದ ತಿಳಿಯುತ್ತಾನೆ. ತನಗೆ ತಾನೇ ಗುರುವಾಗುತ್ತಾನೆ. ತನಗೆ ತಾನೇ ಶಿಷ್ಯನಾಗುತ್ತಾನೆ . ಒಮ್ಮೆ ಚಿತ್ತವನ್ನು ಒಮ್ಮೆ ಮನವನ್ನು ಒಮ್ಮೆ ತನುವನ್ನು ತನ್ನ ಅರಿವಿನ ಮೂಲಕ ತನಗೆ ತಾನೇ ನೋಡಿಕೊಂಡು ತನ್ನೊಂದಿಗೆ ತಾನೇ ಮಾತನಾಡಿಕೊಳ್ಳುತ್ತಾನೆ. ತನುವಿನಲ್ಲಿ ಉಂಟಾದ ರಾಜಸ, ತಾಮಸ, ಸಾತ್ವಿಕ ಗುಣಗಳನ್ನು ತನುವಿನಲ್ಲಿಯೇ ತನ್ಮಯವಾದ ಜ್ಞಾನದಿಂದ ಕೊಂದು ಮಹಾಜ್ಞಾನಿಯೇ ತಾನಾಗುತ್ತಾನೆ. ಇದು ತನಗೆ ತಾನೇ ಜ್ಞಾನಿಯಾಗುವ ಮಹಾಸೂತ್ರ. ಚಿತ್ತ ವಸ್ತುಗಳ ಮೇಲೆ ನೆಟ್ಟರೆ ತನುವಿಗೆ ವಸ್ತುಗಳು ಬೇಕೆ ಬೇಕು ಭೂಮಿಬೇಕು, ಹೇಮಬೇಕು, ಕಾಮಿನಿಯೂ ಬೇಕು, ಅಧಿಕಾರ ಬೇಕು, ಪದವಿಬೇಕು, ಭೂಮಿಯ ಮೇಲಿದ್ದ ಸಕಲವಸ್ತುಗಳು ಬೇಕು. ಏಕೆಂದರೆ, ತನುವಿನ ಚಿತ್ತ ವಸ್ತುವಿನ ಮೇಲೆ ನೆಟ್ಟಿದೆ. ಹೀಗಾಗಿ ವಸ್ತುವಿನ ಸತ್ಯ ತನುವಿಗೆ ಗೊತ್ತಾಗುವುದಿಲ್ಲ, ವಸ್ತುವಿನ ಆಸೆಗಾಗಿ ತನು ಕಳ್ಳನಾಗುತ್ತದೆ, ಸುಳ್ಳನಾಗುತ್ತದೆ, ವಿಷಯ ಲಂಪಟನಾಗುತ್ತದೆ, ಪ್ರಾಮಾಣಿಕನಾಗುತ್ತದೆ, ಭ್ರಷ್ಟನಾಗುತ್ತದೆ. ತನುವಿನಿಂದಲೇ ತನು ಹೀಗೆ ಕರೆಯಿಸಿಕೊಂಡು ಸುಖ ದುಃಖಕ್ಕೆ ಒಳಗಾಗುತ್ತದೆ. ವಸ್ತುವಿನ ಸತ್ಯ ತಿಳಿದುಕೊಳ್ಳುವ ಜ್ಞಾನ ಶಕ್ತಿ ತನುವಿನಲ್ಲಿದ್ದರೂ ಆ ಜ್ಞಾನ ಶಕ್ತಿಯ ಸಮೀಪಕ್ಕೆ ಚಿತ್ತ ಹೋಗುವುದೇ ಇಲ್ಲ. ಚಿತ್ತ ವಸ್ತುವನ್ನು ಯಾಮಾರಿಸಿ, ಜ್ಞಾನವನ್ನು ಬಯಕೆ ಮಾಡಿ ತನುವನ್ನು ಪುಸ್ತಕದಲ್ಲಿ ಹುಡುಕಲು ಹಚ್ಚುತ್ತದೆ. ಪುನಃ ಚಿತ್ತ ತನುವನ್ನು ಪುಸ್ತಕಕ್ಕೆ ದಾಸನಾಗುವಂತೆ ಮಾಡುತ್ತದೆ .

(ಬೈಬಲ್ ಓದಿ ಶಿಲುಬೆ ಧರಿಸಿ, ತನು ಕ್ರೈಸ್ತನಾಗುತ್ತದೆ.

ಕುರಾನ್ ಓದಿ ಮುಸಲ್ಮಾನನಾಗುತ್ತದೆ.

ಭಗವದ್ಗೀತೆ ಓದಿ ಹಿಂದೂವಾಗುತ್ತದೆ.

ವೈಚಾರಿಕ ಪುಸ್ತಕಗಳನ್ನು ಓದಿ ತನು ಕವಿ, ಸಾಹಿತಿ, ವಿಚಾರವಾದಿ, ಪಂಡಿತ ಶಾಸ್ತ್ರಿಯಾಗುತ್ತದೆ. ಸಹಜ ಜ್ಞಾನದಿಂದ ತನು ಬಹುದೂರ ಉಳಿಯುತ್ತದೆ.)

**ಚೆನ್ನಬಸವಣ್ಣ :** ತಮ್ಮ ಮಾತು ಕೇಳಿ ಅತ್ಯಂತ ಸಂತೋಷವಾಯಿತು ಸಿದ್ಧರಾಮಯ್ಯ. ತಮ್ಮಿಂದ ತನುಕುಲ ತನುವಿನಲ್ಲಿ ತನ್ಮಯವಾದ ಅರಿವನ್ನು ಪಡೆಯುವಲ್ಲಿ ಸಫಲವಾಗುವುದರಲ್ಲಿ ಸಂದೇಹವೇ ಇಲ್ಲ ಎಂದು ಹೇಳುತ್ತ ಸಕಲ ಶರಣರಿಗೂ ವೇದಿಕೆಯ ಮೇಲೆ ಆಸೀನರಾದ ಬಸವಣ್ಣ ಅಲ್ಲಮಪ್ರಭು ಗಳಿಗೂ ಶರಣು ಶರಣಾರ್ಥಿ ಎಂದು ಹೇಳಿ

ಸಭೆಗೆ ಮಂಗಲ ಹಾಡಿದರು.

## ತನುವಿನಲ್ಲಿ ಭರಿತವಾದ ಜಲ ಕಿಚ್ಚಿಲ್ಲದೆ ಸುಡುತ್ತದೆ

**ಭೋಗಣ್ಣ** : ವೇದಿಕೆಯ ಮೇಲೆ ಆಸೀನರಾದ ಪ್ರಭುದೇವರಿಗೆ, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ ಶಿವಯೋಗಿಗಳಿಗೆ ಕೈಮುಗಿದು ಶರಣೆಂದು ಸತ್ಸಂಗದಲ್ಲಿ ಆಸೀನರಾದ ಸಕಲ ಶರಣರಿಗೂ ಕೈಮುಗಿದು ಶರಣು ಶರಣಾರ್ಥಿ ಎಂದು ಹೇಳುತ್ತಾ

ತನುವಿನಲ್ಲಿ ಭರಿತವಾದ ಜಲ ಕಿಚ್ಚಿಲ್ಲದೆ ಸುಡುತ್ತದೆ. ಮಡಿಕೆಯಲ್ಲಿ ಭರಿತವಾದ ಜಲಕ್ಕೆ ಕಟ್ಟಿಗೆಯನ್ನು ಇಕ್ಕಿ ಉರುಹಿದರೂ ಸುಡುವುದಿಲ್ಲ. ದಯವಿಟ್ಟು ಇದನ್ನು ವಿವರಿಸಿ ಹೇಳಿ ಶರಣರೆ.

**ಬಸವಣ್ಣ** : ಭೋಗಣ್ಣ ಸುಂದರವಾದ ಪ್ರಶ್ನೆಯನ್ನೇ ಕೇಳಿದ್ದಾರೆ. ಈ ಪ್ರಶ್ನೆ ನಿಮ್ಮದೊಂದೇ ಅಲ್ಲ; ಇಡೀ ತನುಕುಲಕ್ಕೆ ಸಂಬಂಧಿಸಿದ್ದು. ನಿಮ್ಮ ಈ ಪ್ರಶ್ನೆಗೆ ಪ್ರಭುದೇವರ ಪ್ರಸಾದದ ಅವಶ್ಯಕತೆಯಿದೆ.

**ಪ್ರಭು** : ಭೋಗಣ್ಣ ಶರಣರ ಪ್ರಶ್ನೆಯಲ್ಲಿಯೆ ಉತ್ತರವಿದೆ. ಅವರು ಮಂಡಿಸಿದ ಪ್ರಶ್ನೆಗೆ ಅವರೇ ಉತ್ತರ ನೀಡಲಿ. ಸತ್ಸಂಗದಲ್ಲಿ ಆಸೀನರಾದ ಸಕಲ ಶರಣರು ಅವರಿಂದಲೇ ಉತ್ತರ ಪಡೆಯುವ ಕಾತುರದಲ್ಲಿದ್ದಾರೆ. ಎಂದು ಹೇಳುತ್ತಾ ಶರಣರನ್ನು ನೋಡಲು ; ಸಕಲ ಶರಣರು ಒಕ್ಕೊರಲಿನಿಂದ ತಾವೆ ಉತ್ತರ ನೀಡಿ ಭೋಗಣ್ಣ ಶರಣರೇ ಎಂದು ಕೂಗಿ ಹೇಳಿದರು.

**ಭೋಗಣ್ಣ** : ಸತ್ಸಂಗದ ಪ್ರಭಾವದಿಂದ ನನಗೆ ನನ್ನ ಸತ್ಯದೊಂದಿಗೆ ಸಂಗ ಮಾಡುವ ಸೂತ್ರ ಹೊಳೆಯಿತು. ಆ ಸೂತ್ರವನ್ನೆ ತಮಗೆ ಎಡೆ ಮಾಡುವೆ.

''ಅಪ್ಪು ತುಂಬಿದ ಕುಂಭದಲ್ಲಿ ಕಿಚ್ಚು ಹಾಕಿ
ಕಟ್ಟಿಗೆಯನು ಇಕ್ಕಿ ಉರುಹಲಿಕ್ಕೆ ಅಪ್ಪುವ ಸುಟ್ಟುದುಂಟೆ ಕಿಚ್ಚು?
ಆ ಕುಂಭದ ತಪ್ಪಲಿನಲ್ಲಿ ಕಟ್ಟಿಗೆಯನಿಕ್ಕಿ ಉರುಹಲಿಕ್ಕೆ
ಕುಂಭದ ಲೆಪ್ಪದ ಮರೆಯಲ್ಲಿಯ ಅಪ್ಪುವ ಸುಡಬಲ್ಲದೆ?
ಇದು ಕಾರಣ ಕ್ರಿಯ ಮರೆಯಲ್ಲಿರ್ದ ನಿಃಕ್ರೀ, ಶಿಲೆಯ ಮರೆಯಲ್ಲಿರ್ದ ನೆಲೆ
ವಸ್ತುವ ಚಿತ್ತದ ಒಲವರದಿಂದ ಅರಿಯಬೇಕು.
ಚೆನ್ನಬಸವಣ್ಣ ಪ್ರಿಯ ಭೋಗ ಮಲ್ಲಿಕಾರ್ಜುನ ಲಿಂಗವನರಿವಲ್ಲಿ.''

ಎಂದು ಹೇಳುತ್ತಾ ಸಕಲ ಶರಣರಿಗೂ ಕೈ ಮುಗಿದು ಕುಳಿತುಕೊಂಡರು.

**ಪ್ರಭು** : ಕಲ್ಯಾಣದಲ್ಲಿ ಬಸವಣ್ಣ ಹಮ್ಮಿಕೊಂಡ ಸತ್ಸಂಗದ ಫಲ ಇಂದು ಸಾರ್ಥಕವಾಯಿತು. ಭೋಗಣ್ಣ ಶರಣರ ಕಾಯ, ಪ್ರಸಾದ ಕಾಯವಾಗಿದೆ. ಅದು ಶಬ್ದ, ಸ್ಪರ್ಶ, ವಾಸನೆ, ರುಚಿ, ದೃಶ್ಯದ ಕಿಚ್ಚಿಗೆ ಸುಡುವುದಿಲ್ಲ. ಭೋಗಣ್ಣ ಶರಣರಿಗೆ

ನಮೋ ನಮೋ ಎಂದು ಎದ್ದು ನಿಂತು ಕೈ ಮುಗಿದರು.

ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮಶಿವಯೋಗಿಗಳು ಕೂಡಾ ಎದ್ದು ನಿಂತು ಕೈ ಮುಗಿದು ಶರಣು ಶರಣಾರ್ಥಿ ಭೋಗಣ್ಣ ಎಂದರು.

**ಭೋಗಣ್ಣ :** ಶಿವ ಶಿವ ಅಪಚಾರ ಅಪಚಾರ. ತಾವು ಈ ಅಲ್ಪನಿಗೆ ಕೈ ಮುಗಿಯುವುದೆ?

**ಬಸವಣ್ಣ :** ಎದ್ದು ನಿಂತು ಕೈ ಮುಗಿದು ಆನಂದ ಭಾಷ್ಪಗಳೊಂದಿಗೆ ಸಭೆಗೆ ಘೋಷಣೆ ಮಾಡಿದರು. ಭೋಗಣ್ಣ ಶರಣರ ಕಾಯ, ಪ್ರಸಾದ ಕಾಯವಾಗಿದೆ.

ಮಾಂಸ ಪಿಂಡ ಮಂತ್ರ ಪಿಂಡವಾಗಿದೆ.

ಸಕಲ ಇಂದ್ರಿಯಗಳು ಜ್ಞಾನೇಂದ್ರಿಯಗಳಾಗಿ ಮಾರ್ಪಟ್ಟಿವೆ. ಮನುಕುಲ ಮಹಾ ಮಾನವ ಕುಲವಾಗಿ ಮಾರ್ಪಾಡು ಮಾಡಲು ಮಹಾ ಸೂತ್ರವೇ ಭೋಗಣ್ಣ ಶರಣರಿಂದ ಹೊರಬಂದಿದೆ.

ಜಲದಿಂದಲೇ ಮಣ್ಣಾಗಿದೆ, ಜಲದಿಂದಲೇ ಮಡಕೆಯಾಗಿದೆ. ಮಡಿಕೆಯೊಳಗಿದ್ದ ಜಲ ಕಿಚ್ಚಿಗೆ ಸುಟ್ಟು ಬೂದಿಯಾಗುವುದಿಲ್ಲ. ಮಡಿಕೆಯಾಗಲು ಕಾರಣವಾದ ಮಡಿಕೆಯ ಮರೆಯಲ್ಲಿದ್ದ ಜಲ ಕಿಚ್ಚಿಗೆ ಸುಡುವುದಿಲ್ಲ. ಜಲಬಿಂದುವಿನಿಂದಲೇ ಆದ ತನು ಕೂಡಾ, ಒಂದು ಜಲ ಭರಿತವಾದ ಮಡಕೆ !

ತನುವಿನಿಂದ ಹೊರಬಂದ ಶಬ್ಧದ ಇಡೀ ತನುವನ್ನು ಕಿಚ್ಚಿಲ್ಲದೆ ಕತಕತನೆ ಕುದಿಯುವಂತೆ ಮಾಡುತ್ತದೆ. ಜಲದಲ್ಲಿ ಹುಟ್ಟಿದ ಕಿಚ್ಚು ಜಲದಿಂದ ನಂದುವುದಿಲ್ಲ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಹುಟ್ಟಿದ ಕಿಚ್ಚು ಇಡೀ ತನುವನ್ನು ಸುಟ್ಟು ಬೂದಿ ಮಾಡುತ್ತದೆ. ಆದರೆ ಇಂದ್ರಿಯಗಳ ಮರೆಯಲ್ಲಿ ಬಚ್ಚಿಟ್ಟುಕೊಂಡ ಜ್ಞಾನೇಂದ್ರಿಯಗಳು ಸುಡುವುದಿಲ್ಲ. ಚಿತ್ತದ ಒಲವರದಿಂದ ಆ ಜ್ಞಾನವೆ ತಾನಾಗಬೇಕು ಎಂಬ ಸೂತ್ರವನ್ನು ಭೋಗಣ್ಣ ಶರಣರು ನಮ್ಮೆಲ್ಲರಿಗೂ ಪ್ರಸಾದರೂಪವಾಗಿ ಕರುಣಿಸಿದ್ದಾರೆ.

ಇಂದಿನಿಂದ ಅವರನ್ನು ಪ್ರಸಾದಿ ಭೋಗಣ್ಣ ಶರಣರೆಂದು ಕರೆಯೋಣ ಎಂದು ಸಕಲರಿಗೂ ಕೈ ಮುಗಿದು ಸಭೆಗೆ ಮಂಗಲ ಹಾಡಿದರು.

## ಅರಿವು ಎನ್ನುವ ಗುರುದೇವನಿಗೆ ಹುಟ್ಟಿಲ್ಲ ಸಾವಿಲ್ಲ, ಸಾವಿಲ್ಲದ ಕೇಡಿಲ್ಲದ ಸರದಾರ ಆತ

**ಭೀಮಯ್ಯ :** ವೇದಿಕೆಯ ಮೇಲೆ ಕುಳಿತ ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ ಶಿವಯೋಗಿಗಳಿಗೆ ಹಾಗೂ ಸಕಲ ಶರಣರಿಗೆ ಶರಣು ಶರಣಾರ್ಥಿ ಎಂದು ಹೇಳುತ್ತಾ, ಭೀಮಯ್ಯ ತನ್ನ ಪರಿಚಯ ಮಾಡಿಕೊಂಡು ಬಸವರಸರೆ, 'ಅರಿವೆ ಗುರು ' ಎನ್ನುವುದು ನಮ್ಮ ಶರಣರಿಗೆಲ್ಲ ಪರಿಚಯವಾಗಿದೆ. ಆ ಗುರುದೇವನೇ ಸದಾಶಿವ. ಆತನಿಗೆ ಹಿಂದಿಲ್ಲ ಮುಂದಿಲ್ಲ. ಹುಟ್ಟು ಸಾವು ಕೂಡಾ ಆತನಗಿಲ್ಲ. ಪಶು ಎನ್ನುವ ನನ್ನನ್ನು ಕಾಯುವ ಗೊರವನು ಆತ.

ನಾನು ಆತನನ್ನು ಹೊತ್ತುಕೊಂಡಿದ್ದರೂ, ಆತನಿಗೆ ನಾನು ವಾಹನವಾಗಿದ್ದರೂ ಆತನ ಪರಿಚಯವಿಲ್ಲದ ಭಿಕಾರಿ ನಾನು.

ನನಗೆ ಬೇಕಾದ ಸಕಲ ವಸ್ತುಗಳನ್ನು ಆತನೇ ಸೃಷ್ಟಿಸಿದರೂ ಅವು ಯಾವೂ ಬೇಡದ ಭಿಕಾರಿ ಆತ.

ಇದು ನನ್ನ ಸ್ವಾನುಭವದಿಂದ ಹೊರಬಂದ ಮಾತು ಬಸವರಸ .

**ಬಸವಣ್ಣ :** ಎದ್ದು ನಿಂತು, ಭೀಮಯ್ಯನವರಿಗೆ ಕೈ ಮುಗಿದು ನಾನು ಧನ್ಯನಾದೆ ಭೀಮಯ್ಯ ಶರಣರೆ. ನಿಮ್ಮ ಈ ಮಾತು ಕೇಳಿ ಚೆನ್ನಬಸವಣ್ಣ , ಸಿದ್ಧರಾಮರು ಕೂಡಾ ಪುಳಕಿತರಾಗಿದ್ದಾರೆ.

ತನು ಒಂದಾದರೂ ಸ್ಥೂಲ ತನು , ಸೂಕ್ಷ್ಮ ತನು ಕಾರಣ ತನುಗಳೆಂದು ಮೂರು ತನುಗಳಿವೆ. ಸ್ಥೂಲ ತನುವಿನ ಜನ್ಮಕ್ಕೂ ಕಾರಣವಾದದ್ದು ಕಾರಣ ತನು. ಸೂಕ್ಷ್ಮ ತನುವಿನ ಉಗಮಕ್ಕೆ ಕಾರಣವಾದುದು ಕೂಡಾ ಕಾರಣ ತನುವೇ ಆಗಿದೆ.

ಕಾರಣ ತನುವೇ 'ಭಿಕಾರಿ' ಭೀಮಯ್ಯ ಶರಣರು ಕಂಡುಕೊಂಡ ; ಭೀಮೇಶ್ವರ ಲಿಂಗವು ಆಗಿದೆ. ಸ್ಥೂಲ ತನುವಿಗೆ ಮತ್ತು ಸೂಕ್ಷ್ಮ ತನುವಿಗೆ, ಕಾರಣ ತನುವೆಂದು ಕರೆಯಿಸಿಕೊಂಡ 'ಭಿಕಾರಿ' ಭೀಮೇಶ್ವರ ಲಿಂಗಯ್ಯನೇ ಜನ್ಮ ನೀಡಿದ್ದಾನೆ . ಈತನಿಂದ ಜನ್ಮ ಪಡೆದ ಸ್ಥೂಲ ಮತ್ತು ಸೂಕ್ಷ್ಮ ತನುಗಳೆರಡು 'ಭಿಕಾರಿ'ಯನ್ನೇ ಮರೆತ 'ಭಿಕಾರಿ'ಗಳು.

ಆಹಾ, ಎಂತಹ ಅದ್ಭುತವಾದ ದೃಷ್ಟಾಂತವನ್ನು ಕೊಟ್ಟು ಇಡೀ ಶರಣ ಕುಲವನ್ನೆ ಧನ್ಯರನ್ನಾಗಿಸಿದರು ಭೀಮಯ್ಯ ಶರಣರು.

'ಭಿಕಾರಿ' 'ಶಿವನ ' ಹೆಸರನ್ನೇ ಭೀಮಯ್ಯ ಶರಣರಿಗೆ ಇಟ್ಟು

ಇಂದಿನಿಂದ ಭಿಕಾರಿ ಭೀಮಯ್ಯ ಎಂದೇ ಸಕಲ ಶರಣರೂ , ಭೀಮಯ್ಯ ಶರಣರನ್ನು ಸಂಬೋಧಿಸಬೇಕೆಂದು ಸಕಲ ಶರಣರಲ್ಲಿ ಬಸವರಸ ಮನವಿ ಮಾಡಿಕೊಂಡರು.

ವೇದಿಕೆಯ ಮೇಲೆ ಕುಳಿತ ಚೆನ್ನಬಸವಣ್ಣ ಶಿದ್ಧರಾಮ ಶಿವಯೋಗಿಗಳು ಎದ್ದು ನಿಂತು ಮಹಾಜ್ಞಾನಿ ಭಿಕಾರಿ ಭೀಮಯ್ಯ ಶರಣರಿಗೆ ಶರಣು ಶರಣಾರ್ಥಿ ಎಂದು ಹೇಳಿ ಕುಳಿತುಕೊಂಡರು.

ಚೆನ್ನಬಸವಣ್ಣ ಸಭೆಗೆ ಮಂಗಲ ಹಾಡಿದರು .

# ಅಂಗದೊಂದಿಗೆ ಅಜ್ಞಾನದ ಬೇಲಿ ಹಾಕುವ ಮನವನ್ನು ಅಂಗದ ಮೇಲಿರುವ ಲಿಂಗ ತಡೆಯುವುದಿಲ್ಲ

ಬೆಳಕು ಕತ್ತಲೆಯನ್ನು ನಿಧಾನವಾಗಿ ತನ್ನ ಗರ್ಭದಲ್ಲಿಟ್ಟು ಕೊಳ್ಳುತ್ತಿರುವುದು ಸಕಲ ಶರಣರ ಗಮನಕ್ಕೆ ಬರುತ್ತಲಿದೆ. ಹೀಗೆಯೇ ಸಕಲ ತನುಗಳಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಅರಿವಿನಿಂದ ಬೆಳಗುವ ಲಿಂಗಯ್ಯ ನುಂಗಬಾರದೆ ಎಂದು ಶರಣರು ಮಾತನಾಡಿಕೊಳ್ಳುತ್ತಾ ಮಹಾಮನೆಗೆ ಲಗು ಬಗೆಯಿಂದ ಹೋಗುತ್ತಿದ್ದಾರೆ.

ಕಲ್ಯಾಣದ ಜನ ತಮ್ಮ ತಮ್ಮ ಬೆಳಗಿನ ಕೆಲಸಗಳಲ್ಲಿ ನಿರತರಾಗಿದ್ದಾರೆ. ಪರ ಊರುಗಳಿಂದ ಬಂದ ಕೆಲ ಶರಣರು ಮಹಾ ಮನೆಯಲ್ಲಿಯೆ ಮಲಗಿ , ಬೇಗನೇ ಎದ್ದು ವೇದಿಕೆಯನ್ನು ಸಿದ್ಧಪಡಿಸುತ್ತಿದ್ದಾರೆ.

ಸಕಲ ಶರಣರಿಗೂ ಶರಣು ಶರಣಾರ್ಥಿ ಎಂದು ಹೇಳುತ್ತಾ ಕುಳಿತುಕೊಳ್ಳುತ್ತಾರೆ.

ಬಸವಣ್ಣ , ಚೆನ್ನಬಸವಣ್ಣ , ಅಲ್ಲಮಪ್ರಭು ಸಿದ್ಧರಾಮಶಿವಯೋಗಿಗಳು ವೇದಿಕೆಯ ಮೇಲೆ ಕುಳಿತುಕೊಳ್ಳುತ್ತಾ , ಸಕಲ ಶರಣರಿಗೂ ಕೈ ಮುಗಿದು ಶರಣು ಶರಣಾರ್ಥಿ ಎಂದು ಹೇಳಿದರು.

**ಮಾಚಿದೇವ** : ( ಎದ್ದು ನಿಂತು ಸಭೆಗೆ ಕೈ ಮುಗಿದು, ವೇದಿಕೆಯ ಮೇಲೆ ಆಸೀನರಾದ ಶರಣರಿಗೆ ಕೈ ಮುಗಿದು ) ನಾನು ಮಾಚಯ್ಯ ಉಡುಪುಗಳನ್ನು ಮಡಿ ಮಾಡಿಕೊಡುವ ಕೆಲಸ ಮಾಡುತ್ತಿದ್ದೇನೆ. ನನಗೊಂದು ಸೂತ್ರ ಹೊಳೆದಿದೆ . ಅದನ್ನು ತಮಗೆ ಅರ್ಪಿಸುತ್ತಿದ್ದೇನೆ.

ಅಂಗ ಲಿಂಗ ಸಂಬಂಧವಾಗಬೇಕೆಂಬ ಭಂಗಿತರ ಮಾತು ಕೇಳಲಾಗದು.
ಅಂಗ ಲಿಂಗ ಸಂಬಂಧ ಕಾರಣವೇನು ಮನ ಲಿಂಗ ಸಂಬಂದವಾಗದನ್ನಕ್ಕ ?
ಮನವು ಮಹದಲ್ಲಿ ನಿಂದ ಬಳಿಕ
ಲಿಂಗ ಸಂಬಂಧವೇನು ಹೇಳಾ , ಕಲಿದೇವರ ದೇವಾ.

**ಬಸವಣ್ಣ** : ನಾನು ಧನ್ಯನಾದೆ ಮಡಿವಾಳ ಮಾಚಯ್ಯನವರೆ. ಎಂತಹ ಸುಂದರವಾದ ಅರಿವಿನ ಸೂತ್ರವನ್ನು ಸಭೆಗೆ ಎಡೆಮಾಡಿದಿರಿ. ಸಕಲ ಶರಣರೂ ಈ ಸೂತ್ರವನ್ನು ಪ್ರಸಾದ ಮಾಡಿಕೊಳ್ಳಿ .

**ಮಧುವಯ್ಯ** : ಮಡಿವಾಳಯ್ಯನವರೆ, ನಮ್ಮೆಲ್ಲರಿಗೂ ತಿಳಿಯುವಂತೆ ತಾವೇ ಬಿಡಿಸಿ ಹೇಳಲು ಸಾಧ್ಯವೆ ?

**ಮಾಚಯ್ಯ** : ಆಗಲಿ ಶರಣರೆ ಎಂದು ತಲೆಬಾಗಿ ಸಕಲ ಶರಣರಿಗೂ ಶರಣು ಹೇಳುತ್ತಾ.

ಅಂಗದಲ್ಲಿ ಅರಿವಿನ ಲಿಂಗಯ್ಯನಿದ್ದರೂ , ಅಂಗಕ್ಕೆ ಲಿಂಗಯ್ಯನ ಸಂಬಂಧ ಮಾಡಲು ಸಾಧ್ಯವಾಗುತ್ತಿಲ್ಲ . ಆದರೂ ಮನ ಅಂಗದ ಮೇಲೆ ಲಿಂಗ ಧರಿಸಿ ಅಂಗ ಲಿಂಗ ಸಂಬಂಧವಾಗಬೇಕೆಂದು ಅಂಗದೊಂದಿಗೆ ನುಡಿಯುತ್ತದೆ. ಇಂತಹ ನುಡಿಗಳನ್ನು ಕೇಳಲಾಗದು ಮನದ ಮಾತು ಕೇಳಿ ಅಂಗದ ಮೇಲೆ ಲಿಂಗ ಧರಿಸಿದರೂ ಕಟ್ಟಿಕೊಂಡ ಲಿಂಗಕ್ಕೂ ಅಂಗಕ್ಕೂ ಸಂಬಂಧವಿಲ್ಲ . ಅಂಗವೆಂದರೆ ಏನೆಂದು ಕಟ್ಟಿಕೊಂಡ ಲಿಂಗಕ್ಕೆ ಪರಿಚಯವಿಲ್ಲ .

ಅಂಗದ ಮೇಲೆ ಲಿಂಗವಿದ್ದರೂ ಮನ ಅಂಗದೊಂದಿಗೆ ಅಜ್ಞಾನದ ಬೇಲಿ ಹಾರುತ್ತದೆ. ಲಿಂಗ ಅಂಗವನ್ನು ತಡೆಯುವುದಿಲ್ಲ . ಕಟ್ಟಿದ ಮನಕ್ಕೆ ಕಟ್ಟಿಕೊಂಡ ಅಂಗಕ್ಕೆ ಯಾವ ಉಪದೇಶವನ್ನೂ ಮಾಡುವುದಿಲ್ಲ . ಅದು ಜಡ ಅಂಗದ ಮೇಲೆ ಧರಿಸಿದರೆ ಅಲ್ಲಿಯೇ ನೇತಾಡುತ್ತದೆ. ಗೂಟಕ್ಕೆ ಹಾಕಿದರೆ ಅಲ್ಲಿಯೂ ನೇತಾಡುತ್ತದೆ. ಅಂಗ ಲಿಂಗ ಸಂಬಂಧವಾಗಲಿಲ್ಲ ಅವೆರಡೂ ಸಮರಸವಾಗಿ ಬೆರೆಯಲಿಲ್ಲ .

ಅಂಗವಿದೆ, ಅಂಗದಲ್ಲಿ ಅರಿವಿದೆ. ಅರಿವೇ ಲಿಂಗ . ಅಂಗ ಲಿಂಗ ಒಂದರೊಳಗೊಂದು ಬೇರ್ಪಡಿಸದಂತೆ ಸಮರಸವಾಗಿ ಬೆರೆತಿದೆ. ಚಿನ್ನದಲ್ಲಿ ಬಣ್ಣ ಬೆರೆತು ಬೇರ್ಪಡಿಸದಂತೆ.

ಮನ , ಅಂಗದ ಗೆಳೆತನ ಮಾಡಿರುವುದರಿಂದ ಅಂಗದಲ್ಲಿಯೆ ಸಂಗಮವಾದ ಅರಿವಿನ ಲಿಂಗಯ್ಯನನ್ನು ಸಂಪೂರ್ಣ ಮರೆತು ಹೋಗಿದೆ. ಅಂಗದ ಮೇಲೆ ಗುರು ಕಟ್ಟಿದ ಲಿಂಗಯ್ಯನನ್ನು ಮೂರು ಕಾಲ ಪೂಜಿಸುತ್ತದೆ . ತಾನು ಲಿಂಗವಂತ ಭಕ್ತ ಎಂದು ಮೆರೆಯುತ್ತದೆ.

ಮನ ತನಗೆ ಬಯಕೆಯಾದ ಕಡೆಗೆ ಅಂಗವನ್ನು ಕರೆದೊಯ್ದು ಅಂಗದೊಂದಿಗೆ ಭೋಗಿಸಿ ಸುಖಿಸಿ , ಅಂಗಕ್ಕೆ ಕೆಟ್ಟ ಪಟ್ಟ ಕಟ್ಟುತ್ತದೆ . ಇಂತಹ ಸಂಸ್ಕಾರವಿಲ್ಲದ ಮನಕ್ಕೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನ ಸಂಬಂಧವಾಗಬೇಕು . ಆಗ ಮನ ಘನಮನವಾಗುತ್ತದೆ. ಅಂಗ ಅರಿವಿನ ಲಿಂಗವೇ ಆಗಿ ಲಿಂಗಾಂಗವಾಗುತ್ತದೆ . ಇಂತಹ ಅಂಗಕ್ಕೆ ಲಿಂಗ ಕಟ್ಟಿಕೊಳ್ಳುವ ಅವಶ್ಯಕತೆಯಿಲ್ಲ . ಅಂಗದಲ್ಲಿಯೆ ಲಿಂಗವಿರುವಾಗ ಪುಃನ ಲಿಂಗ ಕಟ್ಟುವುದು ಚಿನ್ನಕ್ಕೆ ಬಣ್ಣ ಬಳಿದಂತೆ ಆಗುತ್ತದೆಯಲ್ಲ ಶರಣರೆ.

ನಾನು ನನ್ನ ಸ್ವಾನುಬಾವದ ಮಾತನಾಡಿದ್ದೇನೆ . ತಪ್ಪಾದರೆ ಸಕಲ ಶರಣರೂ ಮನ್ನಿಸಬೇಕೆಂದು ಕುಳಿತುಕೊಂಡರು .

ಇಡೀ ಶರಣಸಭೆ ಕಿವಿ ಗಡಚಿಕ್ಕುವಂತೆ ಚಪ್ಪಾಳೆ ತಟ್ಟಿತು . ಸಕಲ ಶರಣರ ಹೃದಯ ಹೂವಿನಂತೆ ಅರಳಿ ಪುಳಕಿತಗೊಂಡಿತು .

ಅಲ್ಲಮಪ್ರಭು, ಬಸವಣ್ಣ , ಚೆನ್ನಬಸವಣ್ಣ , ಸಿದ್ಧರಾಮಶಿವಯೋಗಿಗಳು ಎದ್ದು ನಿಂತು ಮಡಿವಾಳ ಮಾಚಯ್ಯನವರಿಗೆ ತಲೆಬಾಗಿ ಶರಣು ಶರಣಾರ್ಥಿ ಎಂದು ಹೇಳುತ್ತಾ ಕೈ ಮುಗಿದರು.

**ಬಸವಣ್ಣ :** ಮಾಚಯ್ಯನವರೆ, ತಾವು ಮನದ ಮೈಲಿಗೆಯನ್ನು ತೊಳೆದು

ಮಡಿಮಾಡುವ ಮಡಿವಾಳಯ್ಯನವರು. ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಲಿಂಗವಲ್ಲ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗವೇ ಲಿಂಗ. ಆ ಅರಿವಿನ ಲಿಂಗಯ್ಯನನ್ನು ಮನ ಹೇಗೆ ಪೂಜಿಸಬೇಕು, ಆರಾಧಿಸಬೇಕು, ಎಂದು ಹೇಳುತ್ತಾ ಹರಿದಾಡುವ ಮನವನ್ನು ಹಿಡಿದು ಮನಕ್ಕೆ ಲಿಂಗ ಕಟ್ಟಿದ ಮಹಾನುಭಾವರು ತಾವು.

ಇಂದಿನಿಂದ ತಾವು ಮನದ ಮೈಲಿಗೆ ತೊಳೆಯುವ ಮಡಿವಾಳನ ಕಾಯಕದಲ್ಲಿ ಮುಂದುವರಿಯಬೇಕೆಂದು ನನ್ನ ಮನವಿ ಮಡಿವಾಳಯ್ಯನವರೆ .

**ಮಾಚಯ್ಯ** : ಬಸವರಸರೇ, ತಾವು ಎದ್ದು ನಿಂತು ನನ್ನಂತಹ ಅಲ್ಪನಿಗೆ ಕೈ ಮುಗಿದು ಹೇಳುವುದೆಂದರೇನು ? ತಾವು ಆದೇಶ ನೀಡಿ ತಪ್ಪದಂತೆ ತಮ್ಮ ಮಾತನ್ನು ಪಾಲಿಸುವೆ .

ಮಧುವಯ್ಯ : ಮಡಿವಾಳಯ್ಯನವರು ಅರಿವಿನ ಲಿಂಗಯ್ಯನನ್ನು ಅಂಗೈಗೆ ತಂದು ಕೊಟ್ಟ ಮಹಾನುಭಾವರು .

''ಅಂಗೈಯದು ಹೆಂಗಳಾಗಿ ನೋಡುವ ಕಂಗಳು, ಪುರುಷನಾಗಿ
ಉಭಯವನರಿದು, ಪ್ರಜಾಪತಿಯಾಗಿ
ಚಿದ್ಘನಶಕ್ತಿ ಯೋನಿಯಲ್ಲಿ ಕೂಡಿ ಬಿಂದು ವಿಸರ್ಜನವಾಯಿತು.
ಅದು ಲೀಯವಾಗಲ್ಪಟ್ಟುದು ಲಿಂಗವಾಯಿತು .
ಅದು ಅಂಗೈಯಲ್ಲಿ ಅರಿಕೆ , ಕಂಗಳಿಗೆ ಕುರುಹು.
ಮಂಗಳಮಯ ಅರ್ಕೇಶ್ವರ ಲಿಂಗವನರಿವುದಕ್ಕೆ ಇಷ್ಟದ ಗೊತ್ತೆ.
ಅರ್ಕೇಶ್ವರ ಲಿಂಗವು ತಾನು ತಾನೆ !''

**ಚೆನ್ನಬಸವಣ್ಣ** : ಮಧುವಯ್ಯನವರೆ , ತಾವು ಅದ್ಭುತವಾದ ಸೂತ್ರವನ್ನು ಇಂದಿನ ಶರಣ ಸಭೆಗೆ ದಯಪಾಲಿಸಿರುವಿರಿ . ಈ ಸೂತ್ರವನ್ನು ತಾವೇ ವಿವರಿಸಿ ಹೇಳಿ . ಸಕಲ ಶರಣರು ಕುತೂಹಲದಿಂದ ಕಾಯುತ್ತಿದ್ದಾರೆ .

**ಮಧುವಯ್ಯ** : ಆಗಲಿ ಶರಣರೆ ಎಂದು ಕೈ ಮುಗಿಯುತ್ತಾರೆ . ಕಣ್ಣು ಕಿವಿ ಮೂಗು ನಾಲಿಗೆ ಚರ್ಮವೆಂಬ ಐದು ಜ್ಞಾನೇಂದ್ರಿಯಗಳಿಂದ ಕೂಡಿದ ಅಂಗವನ್ನು ಅಂಗೈ ಎಂದು ಕರೆಯಬಹುದು . ಈ ಐದೂ ಜ್ಞಾನೇಂದ್ರಿಯಗಳಲ್ಲಿ ಮನ ಬೆರೆತಿರುವುದರಿಂದ, ಲೋಹದಲ್ಲಿ ಬೆರೆತಿರುವ ಬಣ್ಣ ಚಿನ್ನ ಆಭರಣವಾಗಿ ಕಂಡು ಅಂಗವನ್ನು ಮನ ಮಂಗನಂತೆ ಮಾಡಿದೆ. ಆಭರಣ ಕದ್ದು ಕಳ್ಳನನ್ನಾಗಿಸಿದೆ . ಕೊಂಡು ಶ್ರೀಮಂತನನ್ನಾಗಿಸಿದೆ . ಯುದ್ಧಮಾಡಿ ಕೊಂದ ಆಭರಣ ಪಡೆದು ರಾಜನನ್ನಾಗಿಸಿದೆ . ಲೋಹವನ್ನು ಲೋಹವೆಂದು ತಿಳಿಯದಂತೆ ಮಾಡಿ ಮನ ಅಂಗವನ್ನು ಮಂಗವನ್ನಾಗಿಸಿದೆ .

ಕೇಳುವ ಶಬ್ದವನ್ನು ವಿಪರೀತವಾಗಿ ಕು-ಶಬ್ದವೆಂದು ಕೇಳಿ ಮನ ಅಂಗವನ್ನು ಸುಡುವಂತೆ ಮಾಡುತ್ತದೆ . ಹೀಗೆ ಸ್ಪರ್ಶಿಸುವ ಚರ್ಮ ಮೂಸಿಸುವ ಮೂಗು ರುಚಿಸುವ ನಾಲಿಗೆಯಲ್ಲಿ ಬೆರೆತ ಮನ ಅಂಗಕ್ಕೆ ಸದಾ ಸಂಕಟವನ್ನೊಡ್ಡುತ್ತದೆ.

ಹೀಗೆ ಅಂಗದ ಐದು ಜ್ಞಾನೇಂದ್ರಿಯಗಳಲ್ಲಿ ಬೆರೆತ ಮನವೇ ಹೆಣ್ಣಾಗಿ , ಅಂಗೈಯ ಜ್ಞಾನೇಂದ್ರಿಯಗಳನ್ನೇ ಲಿಂಗಯ್ಯನನ್ನಾಗಿಸಿಕೊಂಡು ಉಭಯವನರಿತು ವೀಕ್ಷಿಸಿದಾಗ, ಮನ ಬಿಂದುವಾಗಿ ಚಿದ್ಘನ ಶಕ್ತಿಯಲ್ಲಿ ಲೀಯವಾಗಿ ಲಿಂಗವಾಯಿತು .

ಇಷ್ಟಲಿಂಗವಾಯಿತು. ಈ ಪೂಜೆಗೆ ಇಷ್ಟದ ಗೊತ್ತಿನ ಅವಶ್ಯಕತೆಯಿಲ್ಲ . ಏಕೆಂದರೆ ಅಂಗವು ತಾನೆ, ಅಂಗದಲ್ಲಿ ಸಂಗಮವಾದ ಲಿಂಗಯ್ಯನು ತಾನೇ. ಅದನ್ನು ವಿಕ್ಷೀಸಿ ಅಲ್ಲಿಯೇ ಲೀಯವಾದ ಮನವೂ ತಾನೇ. ಎಂದು ಕೈ ಮುಗಿದು ಕುಳಿತರು .

ಅಲ್ಲಮಪ್ರಭು : ಆಹಾ ! ಧನ್ಯನಾದೆ ಬಸವರಸ . ಮಧುವಯ್ಯ ಶರಣರು ಎಂತಹ ಅದ್ಭುತವಾದ ಸೂತ್ರವನ್ನು ಮನುಕುಲಕ್ಕೆ ದಯಪಾಲಿಸಿದ್ದಾರೆ. ನೀನು ಕಲ್ಯಾಣದಲ್ಲಿ ಹಮ್ಮಿಕೊಂಡ ಸತ್ಸಂಗದ ಕಾಯಕ ಹೂ ಬಿಟ್ಟು ಕಾಯಾಗಿ ಮಾಗಿ ಅರಿವಿನ ಫಲ ಬಿಡಲು ಸಿದ್ದವಾಗಿದೆ.

ಆಯಾ ಜ್ಞಾನೇಂದ್ರಿಯಗಳಲ್ಲಿ ಬೆರೆತ ಮನ , ಆಯಾ ಜ್ಞಾನೇಂದ್ರಿಯಗಳನ್ನೆ ಪುರುಷನ್ನಾಗಿಸಿಕೊಂಡು ತಾನು ಹೆಣ್ಣಾಗಿ ಕೂಡಿ ಪುರುಷ ಸುಖ ಅನುಭವಿಸಬೇಕು ಎನ್ನುವ ಮಹಾಜ್ಞಾನದ ರಹಸ್ಯ ಸೂತ್ರವನ್ನೂ ತಿಳಿದಿರುವಿರಿ . ಬ್ರಹ್ಮರಸದ ಅರಿವಿನ ಬುಗ್ಗೆಯನ್ನೇ ಸಭೆಯಲ್ಲಿ ಹರಿಸಿದಿರಿ . ಮಧುವಯ್ಯನವರೆ ನಿಮಗೆ ಶರಣು ಶರಣಾರ್ಥಿ ಎಂದು ಸಭೆಗೆ ಮಂಗಲ ಹಾಡಿದರು .

## ಕಾಯದಿಂದಲೇ ಬಂದ ಪುಸ್ತಕದ ಜ್ಞಾನವನ್ನು ಮನ ಪುನಃ ಕಾಯದಲ್ಲಿಯೇ ಬಚ್ಚಿಟ್ಟುಕೊಳ್ಳುತ್ತದೆ

ಅರಮನೆಗೆ ಕನ್ನ ಹೊಡೆದ ಕಳ್ಳನನ್ನು ಹಿಡಿದು ಕೊಟ್ಟವರಿಗೆ ಸಾವಿರ ನಾಣ್ಯಗಳನ್ನು ಬಹುಮಾನ ಕೊಡುವುದಾಗಿ ಅರಸರು ಘೋಷಣೆ ಮಾಡಿದ್ದಾರೆ ಎಂದು ಡಂಗುರ ಹೊಡೆಯುತ್ತಾ ಕಲ್ಯಾಣದ ಬೀದಿ ಬೀದಿಯಲ್ಲಿ ತಿರುಗಾಡಿದರು .

ಇತ್ತ ಮಹಾಮನೆಯಲ್ಲಿ ಬಸವರಸರ ಸತಿ ನೀಲಮ್ಮ ತಾಯಿಯವರು ಚೆನ್ನಬಸವಣ್ಣನವರನ್ನು ಕರೆದು , ಅರಮನೆಯಲ್ಲಿ ಕದ್ದ ಕಳ್ಳ ಮಹಾಮನೆಗೆ ಬಂದೇ ಬರುತ್ತಾನೆ. ನಾವೆಲ್ಲರೂ ಸೇರಿ ಇಂದು ರಾತ್ರಿ ಕಳ್ಳನನ್ನು ಹಿಡಿದು ಅರಸರಿಗೆ ಒಪ್ಪಿಸೋಣ ಎಂದು ಮಾತನಾಡಿಕೊಳ್ಳುತ್ತಾರೆ .

ಸತ್ಸಂಗ ಮುಗಿಸಿಕೊಂಡು ಪ್ರಸಾದಕ್ಕಾಗಿ ಶರಣರು ಮಹಾಮನೆಯಲ್ಲಿ ಸಾಲಾಗಿ ಕುಳಿತಿದ್ದಾರೆ . ಸಕಲರ ಹಣೆಯಲ್ಲಿ ಭಸ್ಮ ಎದ್ದು ಕಾಣುತ್ತಲಿದೆ . ನೀಲಮ್ಮ ತಾಯಿಯವರು ಮೈ ತುಂಬಾ ಆಭರಣ ಧರಿಸಿಕೊಂಡು ಸಕಲ ಶರಣರಿಗೂ ಪ್ರಸಾದ ಎಡೆಮಾಡುತ್ತಲಿದ್ದಾರೆ. ಯಾವ ಶರಣರೂ ಆಭರಣ ಧರಿಸಿದ ನೀಲಮ್ಮ ತಾಯಿಯವರನ್ನು ನೋಡಲೇ ಇಲ್ಲ . ಸಾಲಲ್ಲಿ ಕುಳಿತು ಭಸ್ಮ ಧರಿಸಿದ ಆರು ಜನ ಮಾತ್ರ ನೀಲಮ್ಮ ತಾಯಿಯವರನ್ನು ನೋಡಿ ಗುಸುಗುಸು ಮಾತನಾಡಿಕೊಳ್ಳುತ್ತಾರೆ .

ಚೆನ್ನಬಸವಣ್ಣಾ ಎಂದು ಕೂಗಿ ಕರೆದು ನೀಲಮ್ಮ ತಾಯಿಯವರು ತನ್ನ ಕೊರಳಲ್ಲಿದ್ದ ಆಭರಣಗಳನ್ನು ಬಿಚ್ಚಿ ನೆಲವಿನ ಮೇಲೆ ಇಡಲು ಹೇಲಿ ಕೊಡುತ್ತಾಳೆ .

ರಾತ್ರಿ ಹೊತ್ತು ಸಕಲ ಶರಣರೂ ಗಾಢವಾದ ನಿದ್ರೆಯಲ್ಲಿದ್ದಾರೆ. ಆರು ಜನ ನಿಲುವಿಗೆ ಹೋಗಿ ಆಭರಣಕ್ಕಾಗಿ ಕೈ ಹಾಕುತ್ತಾರೆ . ನೀಲಮ್ಮ ತಾಯಿ ಚೆನ್ನಬಸವಣ್ಣ ಕೆಲ ಶರಣರೊಂದಿಗೆ ಕಳ್ಳರನ್ನು ಹಿಡಿದು ಕಳ್ಳ ಕಳ್ಳ ಎಂದು ಕೂಗುತ್ತಾರೆ . ನಿದ್ರೆಯಲ್ಲಿದ್ದ ಶರಣರೆಲ್ಲ ಎಚ್ಚರಗೊಂಡು ಕಳ್ಳರನ್ನು ಹಿಡಿಯುತ್ತಾರೆ .

ಬಿಜ್ಜಳ ಅರಸರಿಗೆ ಸುದ್ದಿ ತಲುಪಿಸಲು ಇಬ್ಬರು ಹೋಗುತ್ತಾರೆ . ಹಾಗೆಯೇ ಬಸವಣ್ಣನವರಿಗೆ ಸುದ್ದಿ ತಿಳಿಸಿ , ಕರೆದುಕೊಂಡು ಬರುತ್ತಾರೆ .

ಕಳ್ಳನ ಕೈಯಲ್ಲಿದ್ದ ಆಭರಣಗಳನ್ನು ಕಸಿದುಕೊಂಡು ನೀಲಮ್ಮ ತಾಯಿಯವರು ಹಿಡಿದುಕೊಂಡಿದ್ದಾರೆ . ಆಭರಣ ಕದ್ದ ಕಳ್ಳರು ಇವರೇ ಎಂದು ಬಸವಣ್ಣನವರಿಗೆ ತೋರಿಸುತ್ತಾರೆ.

ಅಪಚಾರ ಅಪಚಾರ. ಎಲ್ಲಿದ್ದಾನೆ ಕಳ್ಳ ? ಇವರೆಲ್ಲ ಶಿವಶರಣರು ಹಣೆಯ ಮೇಲೆ ವಿಭೂತಿ ಇದೆ. ಇವರನ್ನು ಕಳ್ಳರು ಎನ್ನುವಿರಲ್ಲ ! ನಮ್ಮನ್ನು ಎಚ್ಚರಿಸಲು ಬಂದ ಬಲುಗಳ್ಳರು

ಇವರು. ನಾವು ಕಳ್ಳರು .

'' ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದರೆ ಕೂಡಲಸಂಗಯ್ಯನಲ್ಲದೆ ಬೇರಲ್ಲ ; ಕೊಡು ಕೊಡಲೆ ಚಾಂಡಾಲಗಿತ್ತಿ ಎನ್ನಯ್ಯನ ಕೈಯಿ ನೊಂದಾವು ''ಎಂದು ಬಸವರಸ ನೀಲಮ್ಮ ತಾಯಿಯವರಿಗೆ ಅನ್ನುವುದೊಂದೆ ತಡ ಕಳ್ಳ ಚೆನ್ನಬಸವಣ್ಣನವರ ಪಾದಕ್ಕೆರಗಿ ತಾಯಿಯವರನ್ನು ನಿಂದಿಸಬೇಡಿ ಎನ್ನೊಡೆಯಾ . ನನ್ನದು ಘೋರ ಅಪರಾಧವಾಗಿದೆ . ನಾನು ಕಳ್ಳ ನನ್ನ ಹೆಸರು ಮಾರಯ್ಯ. ನನ್ನೊಂದಿಗೆ ಐವರು ಬಂದಿದ್ದಾರೆ. ನಾವು ಅರಮನೆಯಲ್ಲಿ ಕನ್ನ ಹೊಡೆದು ಚಿನ್ನಾಭರಣಗಳನ್ನು ದೋಚಿದವರು . ನಮ್ಮ ತಲೆ ತಂದು ಕೊಟ್ಟವರಿಗೆ ಅರಸರು ಬಹುಮಾನ ಘೋಷಿಸಿದ್ದಾರೆ . ಆದರೆ ಇಲ್ಲಿ ನಮ್ಮನ್ನೂ ಹಿಡಿದುಕೊಟ್ಟ ತಾಯಿಯವರನ್ನು ಚಾಂಡಾಲಗಿತ್ತಿ ಎಂದು ನಿಂದಿಸುತ್ತಿರುವಿರಿ. ಎನ್ನಯ್ಯನ ಕೈ ನೊಂದಾವು ಎಂದು ಹೇಳುತ್ತಾ ಕದ್ದ ಆಭರಣಗಳನ್ನು ಕೊಡು ಎಂದು ಹೇಳುತ್ತಿರುವಿರಿ .

ನಾನು ಕೂಡಲಸಂಗಯ್ಯನಲ್ಲ, ಕಳ್ಳ ಕನ್ನಮಾರಿ ಮಾರಯ್ಯ ಎಂದು ನನ್ನನ್ನು ಕರೆಯುತ್ತಾರೆ.

ಹಣೆಯಲ್ಲಿ ಭಸ್ಮ , ಕೊರಳಲ್ಲಿ ಲಿಂಗವಿಲ್ಲದಿದ್ದರೆ ಮಹಾಮನೆಯಲ್ಲಿ ಪ್ರವೇಶವಿಲ್ಲ ಎಂದು ಕೇಳಿದೆ . ಕೊರಳಲ್ಲಿ ಬದನೆಕಾಯಿ ಕಟ್ಟಿಕೊಂಡು ಹಣೆಗೆ ವಿಭೂತಿ ಧರಿಸಿ ಮಹಾಮನೆಗೆ ಪ್ರವೇಶ ಮಾಡಿದೆವು . ದಯವಿಟ್ಟು ಕ್ಷಮಿಸಿ ಎನ್ನೊಡೆಯಾ . ಆ ಮಹಾ ತಾಯಿಯನ್ನು ನಿಂದಿಸಬೇಡಿ. ನಾವು ಮಹಾಮನೆಗೆ ಬಂದದ್ದೇ ತಪ್ಪಾಯಿತು .

ಕೊರಳಲ್ಲಿ ಬದನೇ ಕಾಯಿ ಕಟ್ಟಿಕೊಂಡು ಅದನ್ನೇ ಲಿಂಗವೆಂದು ಭಾವಿಸಿದ ಸಾಕ್ಷಾತ್ ಕೂಡಲಸಂಗಮದೇವನೇ ನೀನು ಎಂದು ಬಸವಣ್ಣ ಮಾರಯ್ಯನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾರೆ .

**ಮಾರಯ್ಯ** : ಕ್ಷಮಿಸಿ ಎನ್ನೊಡೆಯಾ ನನ್ನಿಂದ ಘೋರ ಅಪರಾಧವಾಯಿತು .

**ಬಸವಣ್ಣ** : ನಿಮ್ಮಿಂದ ಯಾವ ಅಪರಾಧವೂ ಆಗಿಲ್ಲ. '' ಹೊನ್ನಿನೊಳಗೊಂದೊರೆಯ ವಸ್ತ್ರದೊಳಗೊಂದೆಳೆಯ , ಅನ್ನದೊಳಗೊಂದಗುಳ ಇಂದಿಂಗೆ ನಾಳಿಂಗೆ ಎಂದೆನಾದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ '' ಎಂದು ಹೇಳಲಾಗಿಯೂ ಹೊನ್ನೆಂದರೇನೆಂದು ತಿಳಿಯಲಿಲ್ಲ, ಅದು ಹಳದಿ ಬಣ್ಣದ ಲೋಹವೆಂದು ತಿಳಿಯಲಿಲ್ಲ .

ಆಭರಣ ಧರಿಸಿದವರು ಲೋಹವೆಂದು ತಿಳಿಯುವುದಿಲ್ಲ . ಅದನ್ನು ಪಡೆಯುವ ಕಳ್ಳ ಕೂಡಾ ಲೋಹವೆಂದು ತಿಳಿಯುವುದಿಲ್ಲ . ಆಭರಣ ಕೊಡದಿದ್ದರೆ ಕಳ್ಳ ಕೊಂದು ಪಡೆಯುತ್ತಾನೆ . ಸಿಕ್ಕರೆ ಕದಿಯಲು ಬಂದ ಕಳ್ಳ ಸಾಯುತ್ತಾನೆ . ಇವರಿಬ್ಬರಿಗೂ ಪ್ರಾಣ ಗೌಣವಾಗಿ ಆಭರಣವೇ ಶ್ರೇಷ್ಠವಾಗುತ್ತದೆ .

ಆಭರಣ ಕೊಂಡು ಧರಿಸಿದರೆ ಶ್ರೀಮಂತ ! ಕದ್ದು ಪಡೆದರೆ ಕಳ್ಳ ! ಯುದ್ದ ಮಾಡಿ ಕೊಂದು ಪಡೆದರೆ ರಾಜ !

ಕಾಯ ಒಂದೇ ಕಾಯವನ್ನು ಆವರಿಸಿದ ಮನ ಕೂಡಾ ಒಂದೇ. ಕಾಯದಲ್ಲಿ ಸಂಗಮವಾದ ಅರಿವು ಕೂಡಾ ಒಂದೇ .

ಕಾಯ ನಿರಪರಾಧಿ . ಕಾಯವನ್ನು ಆವರಿಸಿದ ಮನ ಅಪರಾಧಿ . ಕಾಯದಲ್ಲಿಯೆ ಸಂಗಮವಾದ ಅರಿವು ಗುರುದೇವನಾಗಿ ಕಾಯಕ್ಕೂ ಮನಕ್ಕೂ ಪಾಠ ಮಾಡುತ್ತಾನೆ . ಈತನ ಅರಿವಿನ ಪಾಠ ಮನಕ್ಕೂ ಬೇಡ , ಕಾಯಕ್ಕೂ ಬೇಡ . ಹೀಗಾಗಿ ಮನ ಹೇಳಿದಂತೆ ಕಾಯ ಕೇಳುತ್ತದೆ .

ಮನ ಆಭರಣ ಬಯಸಿ , ಕೊಂಡು ಕಾಯಕ್ಕೆ ಶ್ರೀಮಂತನ ಪಟ್ಟ ಕಟ್ಟುತ್ತದೆ. ಕದ್ದು ಕಾಯಕ್ಕೆ ಕಳ್ಳನ ಪಟ್ಟ ಕಟ್ಟುತ್ತದೆ . ಯುದ್ಧವ ಮಾಡಿ ಕೊಂದು ಆಭರಣ ಪಡೆದು ಕಾಯಕ್ಕೆ ರಾಜನ ಪಟ್ಟ ಕಟ್ಟುತ್ತದೆ . ಬಣ್ಣವಿಲ್ಲದ ಲೋಹ ಯಾರಿಗೂ ಬೇಡ . ಹಾಗೆಯೇ ಬರೀ ಹಳದಿ ಬಣ್ಣ ಕೂಡಾ ಯಾರಿಗೂ ಬೇಡ .

ಮನ ತನ್ನನ್ನು ಬಣ್ಣಕ್ಕೆ ಮರುಳು ಮಾಡಿತೋ ಅಥವಾ ಲೋಹಕ್ಕೆ ಮರುಳು ಮಾಡಿತೋ? ಎಂದು ಕಾಯಕ್ಕೆ ಗೊತ್ತಾಗಬೇಕಲ್ಲ . ಮನದ ಮಾತು ಕೇಳುತ್ತಾ ಕೇಳುತ್ತಾ ಕಾಯದ ಆಯುಷ್ಯ ಮುಗಿದೇ ಹೋಗುತ್ತದೆ . ಮನ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಮಾತು ಕೇಳಿದರೆ ಸಾಕು , ಕಾಯ ಕೈಲಾಸವಾಗುತ್ತದೆ . ಮನ ಘನಮನವಾಗುತ್ತದೆ .

ಮಾರಯ್ಯ ಶರಣರು ತಮ್ಮ ಸಂಗಡಿಗರೊಂದಿಗೆ ಇದು ಚಿನ್ನವಲ್ಲ ಬರೀ ಲೋಹವೆಂದು ನಮ್ಮೆಲ್ಲರನ್ನು ಎಚ್ಚರಿಸಲು ಬಂದಿದ್ದಾರೆ . ಆಭರಣವನ್ನು ಬಚ್ಚಿಟ್ಟುಕೊಂಡ ನಾವು ಕಳ್ಳರು . ಅದನ್ನು ಪಡೆದು ಎಚ್ಚರಿಸಲು ಬಂದ ಅವರು ಬಲುಗಳ್ಳರು ಸಾಕ್ಷಾತ್ ಕೂಡಲಸಂಗಮನಾಥರು ಎಂದು ಪುನಃ ಕೈ ಮುಗಿದರು .

**ಮಾರಯ್ಯ :** ತಂದೆ ಬಸವರಸ , ನಮ್ಮೆಲ್ಲರ ಕಣ್ಣು ತೆರೆಯಿಸಿದ ತಂದೆ ನೀವು. ಲೋಹವೆಂದು ತಿಳಿಯದ ನಾನು ಅದೆಷ್ಟೊ ಜನರನ್ನು ಕೊಂದು ಈ ಹಾಳು ಲೋಹವನ್ನು ಪಡೆದ ಪಾಪಿ ನಾನು .

ನನ್ನ ಅಜ್ಞಾನವನ್ನು ಸುಟ್ಟು ಬೂದಿ ಮಾಡಿದಿರಿ ತಂದೆ ಎಂದು ಮಾರಯ್ಯ ಬಸವಣ್ಣನವರಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾನೆ .

**ಬಸವಣ್ಣ :** ಮಾರಯ್ಯನನ್ನು ಅಪ್ಪಿಕೊಂಡು , ಇನ್ನು ಮುಂದೆ ನೀವು ಕನ್ನಮಾರಿ ಮಾರಯ್ಯ ಶರಣರು . ಸಕಲ ಶರಣರು ಇವರನ್ನು ಹೀಗೆ ಸಂಬೋಧಿಸಿ ಎಂದರು.

ಅಷ್ಟರಲ್ಲಿಯೇ ಶರಣರೊಬ್ಬರು ಬಂದು ಬಿಜ್ಜಳ ಮಹಾರಾಜರು ಸೈನಿಕರೊಂದಿಗೆ ಮಹಾಮನೆಗೆ ಆಗಮಿಸುತ್ತಿದ್ದಾರೆ ಬಸವರಸ ಎಂದರು . ಅವರನ್ನು ಎದುರುಗೊಂಡು ಗೌರವದಿಂದ ಮಹಾಮನೆಗೆ ಕರೆತಂದರು .

**ಬಿಜ್ಜಳ** : ಕಳ್ಳನನ್ನು ಮಹಾಮನೆಯ ಶರಣರು ಬಂಧಿಸಿದ್ದಾರೆಂದು ಸುದ್ದಿ ಬಂತು ಬಸವರಸರೆ , ಕಳ್ಳ ಎಲ್ಲಿದ್ದಾನೆ ?

**YÓÜÊÜ:** ಕಳ್ಳ ಇಲ್ಲ . ಅವನು ಸತ್ತು ಹೋದ . ಮಾರಯ್ಯ ಶರಣರು ಮಾತ್ರ ಇದ್ದಾರೆ . ಶರಣರನ್ನು ತಾವು ಬಂಧಿಸುವಂತಿಲ್ಲ . ಒಂದು ವೇಳೆ ತಾವು ಬಂಧಿಸಲೇಬೇಕೆಂದು ಹಠ ಹಿಡಿದರೆ ನನ್ನನ್ನು ಬಂಧಿಸಿ ಪ್ರಭು ಎಂದು ಬಸವರಸರು ಹಾಗೂ ಅಲ್ಲಿಯ ಶರಣರು ನಡೆದ ವೃತ್ತಾಂತವನ್ನು ಅರಸರಿಗೆ ವಿವರಿಸಿ ಹೇಳಿದರು .

**ಬಿಜ್ಜಳ** : ಧನ್ಯನಾದೆ ಬಸವಣ್ಣ . ನಿನ್ನನ್ನು ಮಂತ್ರಿಯನ್ನಾಗಿ ಪಡೆದ ನಾನು ಧನ್ಯ. ನಿನ್ನಂತಹ ಅರ್ಥ ಸಚಿವರು ಸಕಲ ರಾಜ್ಯಗಳಲ್ಲಿದ್ದರೆ ಸೆರೆಮನೆಗಳ ಅವಶ್ಯಕತೆಯೇ ಆ ರಾಜ್ಯಗಳಿಗೆ ಬರುವುದಿಲ್ಲ ಬಸವಣ್ಣ .

**ಬಸವಣ್ಣ** : ಹೊಗಳಬೇಡಿ ಎನ್ನೊಡೆಯ . ಸಕಲ ಕಾಯಗಳಲ್ಲಿಯೂ ಅರಿವಿನ ಶಕ್ತಿಯಿದೆ. ಅರಿವಿನ ಶಿಕ್ಷಣದ ಕೊರತೆಯಿಂದಾಗಿ ಕಾಯ ಆಯಾ ಮರೆವಿನ ಹಣೆಪಟ್ಟಿ ಕಟ್ಟಿಕೊಂಡಿದೆ. ಎಂದು ಅರಸರಿಗೆ ನಮಸ್ಕರಿಸುತ್ತಾ ಬೀಳ್ಕೊಟ್ಟರು .

ಬಸವಣ್ಣನವರು ಮಾಡಿದ ಇಂದಿನ ಪಾಠ ನೀಲಮ್ಮ ತಾಯಿಯವರಿಗೂ ಮಾರಯ್ಯನಿಗೂ ಸಕಲ ಶರಣರಿಗೂ ಹಾಗೂ ಬಿಜ್ಜಳ ಮಹಾರಾಜರಿಗೂ ಏಕಕಾಲಕ್ಕೆ ಅನುಕೂಲವಾಯಿತು. ಅದೆಂತಹ ಅರು ಹೃದಯ ಬಸವರಸರದು ಎಂದು ಶರಣರು ಮಾತನಾಡಿಕೊಳ್ಳುತ್ತಾ ರಾತ್ರಿ ಕಳೆದರು .

# ಅರಿವಿನ ಮಲ್ಲಯ್ಯನನ್ನೇ ಪತಿಯನ್ನಾಗಿಸಿಕೊಂಡ ಅಕ್ಕಮಹಾದೇವಿ

ಉಡತಡಿಯ ಅಕ್ಕಮಹಾದೇವಿ ಕಲ್ಯಾಣಕ್ಕೆ ಪ್ರವೇಶ ಮಾಡಿದ ಸುದ್ದಿ ಬಸವಣ್ಣನವರಿಗೆ ತಲುಪಿದ ಕೂಡಲೇ ಕಿನ್ನರಿ ಬೊಮ್ಮಯ್ಯ ಶರಣರನ್ನು ಕರೆದು ಆದರದಿಂದ ಸಭೆಗೆ ಕರೆದು ತರಲು ಹೇಳುತ್ತಾರೆ.

ತಲೆಯ ಮೇಲಿರುವ ರೋಮಗಳು ಸಸ್ಯಕಾಶಿಯಂತೆ ಸರ್ವಾಂಗವನ್ನು ಹೆಣೆದುಕೊಂಡಿವೆ. ಅಕ್ಕ ಶರಣರ ಸಭೆಗೆ ಆಗಮಿಸುವುದೊಂದೇ ತಡ ಸಕಲ ಶರಣರು ಎದ್ದು ನಿಂತು ಸ್ವಾಗತಿಸುತ್ತಾರೆ. ಅಕ್ಕಳಿಗೆ ಶರಣು ಶರಣಾರ್ಥಿ ಎಂದು ಹೇಳುತ್ತಾ ಕುಳಿತುಕೊಳ್ಳುತ್ತಾರೆ.

**ಕಿನ್ನರಿಬೊಮ್ಮಯ್ಯ :** ''ಕಾಯದಲ್ಲಿ ಕಳವಳವಿದೆ , ಪ್ರಾಣದಲ್ಲಿ ಮಾಯೆ ಇದೆ. ಹೀಗಿದ್ದಾಗ ನಿನ್ನದು ಏತರ ನಿರ್ವಾಣ ತಾಯಿ ? ಮಹಾಲಿಂಗ ತ್ರಿಪುರಾಂತಕನು ನಿನ್ನನ್ನು ಸಂಸಾರಿ ಎಂಬುವನಲ್ಲದೆ ಸಜ್ಜನೆಯೆಂದು ಕೈ ಹಿಡಿಯುವವನಲ್ಲ ಕೇಳಾ ಮರುಳೆ.''

**ಅಕ್ಕಮಹಾದೇವಿ :** ''ಅಂಗದ ಭಂಗವ ಲಿಂಗಮುಖದಿಂದ ಗೆಲಿದೆ . ಮನದ ಭಂಗವ ಅರಿವಿನ ಮುಖದಿಂದ ಗೆಲಿದೆ . ಕರಣದ ಕತ್ತಲೆಯನು ಬೆಳಗನುಟ್ಟು ಗೆಲಿದೆ . ಯೌವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋರುವ ಕಾಮನ ಸುಟ್ಟು ಉರುಹಿದ ಭಸ್ಮವ ನೋಡಯ್ಯಾ ಚೆನ್ನಮಲ್ಲಿಕಾರ್ಜುನ, ಕಾಮನ ಕೊಂದು ಮನಸಿಜನಾಗುಳುಹಿದಡೆ ಮನಸಿಜನ ತಲೆಯ ಬರಹವ ತೊಡೆದೆನು.''

**ಅಪ್ಪಣ್ಣ :** ಅಕ್ಕ ನಿಮ್ಮ ಮಾತು ಕೂಡಲೇ ಅರಿವಿಗೆ ಬರಲಿಲ್ಲ . ನಮ್ಮ ಶರಣರಿಗೆ ವಿವರಿಸಿ ಹೇಳಿ ತಾಯಿ.

**ಅಕ್ಕಮಹಾದೇವಿ :** ಅಂಗದಲ್ಲಿ ಸದಾ ಭಂಗ ಉಂಟು ಮಾಡುವುದೇ ಮನದ ಕೆಲಸ . ಮನದಿಂದಾಗಿ ಅಂಗ ಹೆಣ್ಣಾಗಿದೆ , ಗಂಡಾಗಿದೆ , ಅಂಗ ಒಂದೇ. ಅದರೊಳಗಿದ್ದ ಪದಾರ್ಥಗಳೂ ಒಂದೇ. ಹೀಗಿದ್ದರೂ ಕೂಡಾ ಅಂಗಕ್ಕೆ ತಾನು ಹೆಣ್ಣು ಗಂಡು ಎನ್ನುವ ಭೇದ ಜ್ಞಾನ ಉಂಟಾಗಿದೆ. ಶ್ರೀಮಂತ, ಬಡವ, ಭಿಕ್ಷುಕ, ರಾಜ, ಪ್ರಧಾನಿ, ಕಾಲಾಳು, ಎನ್ನುವ ಭಂಗ ಉಂಟಾಗಿದೆ. ಹೀಗೆ ಅಂಗದಲ್ಲಿ ಉಂಟಾದ ಭಂಗವನ್ನು ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನ ಸಂಗಮಾಡಿ ಈತನ ಮುಖದಿಂದ ಗೆಲಿದೆ ಅಪ್ಪಣ್ಣ ಶರಣರೆ.

**ಕಾಳವ್ವೆ :** ಮನದ ಭಂಗವನ್ನು ಹೇಗೆ ಗೆದ್ದಿರಿ ತಾಯಿ ?

**ಅಕ್ಕಮಹಾದೇವಿ :** ಸ್ಥೂಲಾಂಗ , ಸೂಕ್ಷ್ಮಾಂಗ, ಕಾರಣಾಂಗ ; ಎಂದು ಅಂಗದಲ್ಲಿ ಮೂರು ವಿಧ . ಸ್ಥೂಲಾಂಗ ಕಾಣುತ್ತದೆ . ಸೂಕ್ಷ್ಮಾಂಗ ಕಾರಣಾಂಗ ಕಾಣುವುದಿಲ್ಲ .

ಕಾರಣಾಂಗದಿಂದಲೇ ಸ್ಥೂಲಾಂಗದ ಜನನ . ಕಾರಣಾಂಗದ ಬೆಳಕಿನಿಂದಲೇ ಸೂಕ್ಷ್ಮಾಂಗದ ಜನನ ! ಸೂಕ್ಷ್ಮಾಂಗ , ಸ್ಥೂಲಾಂಗಗಳೆರಡಕ್ಕೂ ಕಾರಣಾಂಗವೇ ಮೂಲಾಧಾರ. ಕಾರಣಾಂಗದಿಂದಲೇ ಜನ್ಮ ಪಡೆದ ಸೂಕ್ಷ್ಮಾಂಗವೆಂಬ ಮನ ಸ್ಥೂಲಾಂಗದ ಸಂಗ ಮಾಡಿ ಅದನ್ನು ತನ್ನಂತೆ ಮಾಡಿಕೊಂಡಿದೆ . ಸೂಕ್ಷ್ಮಾಂಗ ಬಯಕೆ ಮಾಡಿದ ವಸ್ತುಗನ್ನು ಸ್ಥೂಲಾಂಗದಿಂದ ಪಡೆದು ಭೋಗಿಸಿ , ಸುಖಿಸಿ , ರುಚಿಸಿ , ಆನಂದಪಟ್ಟು , ಸಿಗದಿದ್ದರೆ ಅಂಗಕ್ಕೆ ಭಂಗವನ್ನುಂಟು ಮಾಡುತ್ತದೆ . ಹೀಗೆ ಭಂಗ ಉಂಟುಮಾಡುವ ಮನದ ಭಂಗವನ್ನು ಅರಿವಿನ ಮುಖದಿಂದಲೇ ಗೆಲಿದೆ ಕಾಳವ್ವೆ .

**ಸತ್ಯಕ್ಕ** : ಜೀವದ ಭಂಗವ ಹೇಗೆ ಗೆದ್ದಿರಿ ತಾಯಿ ?

**ಅಕ್ಕಮಹಾದೇವಿ** : ಸರ್ವಾಂಗದಲ್ಲಿ ಜೀವ ಭರಿತವಾಗಿದೆ . ಅಂಗ ಊನವಾದಾಗ ಜೀವ ತಲ್ಲಣಿಸುತ್ತದೆ . ಜೀವ ಇರುವವರೆಗೆ ಅಂಗದ ಭಯ ಜೀವಕ್ಕಿಲ್ಲ . ಅಂಗಕ್ಕೂ ಜೀವಕ್ಕೂ ಅರಿವಿನ ಪರಿವೆಯೇ ಇಲ್ಲ . ಸರ್ವಾಂಗದಲ್ಲಿ ಚೆನ್ನ ಮಲ್ಲಿಕಾರ್ಜುನ ಅರಿವಾಗಿ ಬೆರತಿದ್ದಾನೆ. ಆತ ಇರುವವರೆಗೂ ಅಂಗಕ್ಕೂ ಜೀವಕ್ಕೂ ಅರ್ಥವಿದೆ . ಸೂಜಿಯ ಮೊನೆ ಚುಚ್ಚಲು ಸಂದಿಲ್ಲದಂತೆ ಅರಿವೆಂಬ ಗುರುದೇವ ಸರ್ವಾಂಗದಲ್ಲಿ ಭರಿತವಾಗಿದ್ದಾನೆ . ಆ ಗುರುದೇವನೇ ಮಹಾದೇವ , ಆ ಮಹಾದೇವನೇ ಸದಾಶಿವ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮನೂ ಆಗಿದ್ದಾನೆ . ಹೀಗಿದ್ದಾಗ ಜೀವ ಅರಿವೆಂಬ ಶಿವನಿಂದ ಸೃಷ್ಟಿಯಾಗಿದೆ . ಸೃಷ್ಟಿಮಾಡಿದ ಶಿವನಿಂದಲೇ ಜೀವದ ಭಂಗ ಕಳೆಯಲು ಸಾಧ್ಯ . ಆ ಶಿವಾನುಭಾವದಿಂದಲೇ ಜೀವದ ಭಂಗವ ಗೆಲಿದೆ ಸತ್ಯಕ್ಕ !

**ಡೋಹರಕಕ್ಕಯ್ಯ** : ಕರಣಂಗಳ ಕತ್ತಲೆಯನ್ನು ಗೆದ್ದ ಬಗೆ ವಿವರಿಸಿ ಅಕ್ಕ .

**ಅಕ್ಕಮಹಾದೇವಿ** : ಅಂಗದಲ್ಲಿರುವ ಪಂಚೇಂದ್ರಿಯಗಳನ್ನು ಕರಣೇಂದ್ರಿಯಗಳೆಂದು ಕರೆಯುತ್ತಾರೆ . ಅವು ಜ್ಞಾನೇಂದ್ರಿಯಗಳು ಕೂಡಾ ಹೌದು . ಕಾಣುವ ಕಣ್ಣಲ್ಲಿ ಮನೋಮಯವಾದ ಕತ್ತಲೆಯ ದೃಶ್ಯವೂ ಇದೆ . ಅದನ್ನು ಬೆಳಗಿ ಅರಿವಿನಿಂದ ನೋಡುವ ಬೆಳಕಿನ ದೃಶ್ಯವೂ ಇದೆ.

ಕೇಳುವ ಕಿವಿಯಲ್ಲಿ ಶಬ್ದ ನಿಶಬ್ದ ಮಾಡಿ ಅರಿವಿನಿಂದ ಕೇಳುವ ಶಕ್ತಿಯಿದೆ . ಹಾಗೆಯೇ ಶಬ್ದವನ್ನು ಸುಖದಿಂದ ದುಃಖದಿಂದ ಕೇಳುವ ಅಜ್ಞಾನವೂ ಇದೆ . ಹೀಗೆ ಮೂಗು ಚರ್ಮ ನಾಲಿಗೆಯಲ್ಲಿ ಅಜ್ಞಾನವೂ ಇದೆ. ಜ್ಞಾನವೂ ಇದೆ. ಅಜ್ಞಾನ ಮನದ ಕತ್ತಲೆಯಾದರೆ ಅರಿವು ಅಜ್ಞಾನದ ಕತ್ತಲೆಯನ್ನು ಓಡಿಸುವ ಬೆಳಕು !

ಆಯಾ ಕರಣದ ಅಜ್ಞಾನದ ಕತ್ತಲೆಯನು ಆಯಾ ಕರಣದ ಅರಿವಿನ ಬೆಳಗನುಟ್ಟು ಗೆಲಿದೆ ಕಕ್ಕಯ್ಯ ಶರಣರೆ .

**ನುಲಿಯ ಚೆಂದಯ್ಯ** : ಕಾಯದಲ್ಲಿರುವ ಕಾಮವನ್ನು ಹೇಗೆ ಸುಟ್ಟಿರಿ ತಾಯಿ?

**ಅಕ್ಕಮಹಾದೇವಿ** : ಶರಣರಿಗೆ ಕಂಡುಬರುವ ಈ ಅಂಗದ ಯೌವ್ವನದ ಹೊರ ಮಿಂಚು ಇದು ಕಾಮವನ್ನು ಸುಟ್ಟು ಉರುಹಿದ ಭಸ್ಮ. ಚೆಂದಯ್ಯನವರೆ ತಾವು ಹೊಸೆದ ನುಲಿ ಸುಟ್ಟಾಗ ಅದು ನುಲಿಯಂತೆ ಕಾಣುತ್ತದೆ . ಆದರೆ ನುಲಿಯನ್ನು ಹಿಡಿಯಲು ಹೋದರೆ

ಬರೀ ಭಸ್ಮ ! ಬೂದಿ ಮಾತ್ರ ಕೈಗೆ ದಕ್ಕುತ್ತದೆ . ನುಲಿ ಸುಟ್ಟು ಭಸ್ಮವಾದ ಮೇಲೆ ನುಲಿಯ ಆಕಾರ ಕಂಡರೆ ಅದು ನುಲಿಯಲ್ಲ. ಹಾಗೆಯೇ ಈ ಕಾಯ ಕಾಯದೊಳಗಿರುವ ಅಜ್ಞಾನದ ಕಾಮವನ್ನು ಕಾಯದಲ್ಲಿಯೇ ಸಂಗಮವಾದ ಅರಿವಿನ ಚೆನ್ನಮಲ್ಲಿಕಾರ್ಜುನನೆಂಬ ಅತಿ ಕಾಮಿ ಕಾಮನನ್ನು ಸುಟ್ಟುರುಹಿ ಭಸ್ಮ ಮಾಡಿದ್ದಾನೆ . ಹೀಗಾಗಿ ಕಾಯ ಭಸ್ಮಕಾಯವಾಗಿದೆ . ತಮಗೆ ಕಾಣುವುದು ಯೌವ್ವನದ ಹೊರಮಿಂಚು ಮಾತ್ರ ಚಂದಯ್ಯ ಶರಣರೆ.

**ಗಟ್ಟಿವಾಳಯ್ಯ :** ಚನ್ನಮಲ್ಲಿಕಾರ್ಜುನ ಕಾಮನಕೊಂದು ಮನಸಿಜನಾಗಿ ಉಳುಹಿದ, ಆ ಮನಸಿಜನ ತಲೆಬರಹವ ತೊಡೆದ ಬಗೆಯಾದರೂ ಹೇಗೆ ಹೇಳುವಿರಾ ಅಕ್ಕಾ .

**ಅಕ್ಕಮಹಾದೇವಿ :** ಅಂಗದಲ್ಲಿ ಸಂಗಮವಾದ ಅರಿವೆ ಚನ್ನಮಲ್ಲಿಕಾರ್ಜುನ. ಅಂಗವನ್ನು ಆವರಿಸಿದ ಮನವೇ ನಾನು .

ನೀನು ಎನ್ನುವ ಕಾಮವೆ ಅತಿ-ಕಾಮಿ ಅರಿವಿನ ಚನ್ನಮಲ್ಲಿಕಾಜಜ್ನ ಚನ್ನಚ ಚನ್ನಮಲ್ಲಿಕಾರ್ಜುನನನ್ನು ಕೂಡಿ ಸುಖಿಸಿದ ಮೇಲೆ, ಕಾಯಕ್ಕೆ ಅಂಟಿದ ಕಾಮ ಆಹಾರವಿಲ್ಲದೆ ಸತ್ತಂತೆ .

ಇನ್ನು ಕಾಮನ ಕೊಂದು ಮನಸಿಜನಾಗಿ ಉಳುಹಿದ್ದು ನುಲಿಯಂತೆ ಕಾಣುವ ಬೂದಿ ಮಾತ್ರ . ಕಾಣುವ ಆ ಮನಸಿಜನ ಮುಟ್ಟಿದರೆ ಸಾಕು ನುಲಿಯ ತಲೆ ಬರಹವೇ ಅಳಿಸಿ ಹೋಗುತ್ತದೆ .

**ಅಲ್ಲಮಪ್ರಭು :** ಕಾಯ ಸತಿಯೆಂದು ತಿಳಿದು ಪತಿ-ಕೌಶಿಕನಿಗೆ ಹೇಸಿ, ವಸ್ತ್ರ ಕಳೆದೆಯಾ ? ವಾಯದ ಮನ ಮಾಯೆಯೆಂದು ತಿಳಿದು ಹೇಸಿ ವಸ್ತ್ರ ಕಳೆದೆಯಾ ? ವಾಯದ ಸತಿಯೆಂಬ ಸಂದೇಹವೆಮಗೇಕೆ ? ಸತಿ-ಯರ ಗೋಷ್ಠಿ ವಿಷ ಕಾಣವ್ವಾ. ಗುಹೇಶ್ವರ ಲಿಂಗದಲ್ಲಿ ನಿನ್ನ ಪತಿ -ಯ ಕುರುಹು ಹೇಳು ತಾಯಿ .

**ಅಕ್ಕಮಹಾದೇವಿ :** ಪ್ರಭುದೇವರಿಗೆ ಶರಣು ಶರಣಾರ್ಥಿ. ಕಾಯ ಸತಿಯೆಂದು ತಿಳಿದವಳು ನಾನಲ್ಲ . ಕಾಯ ಪತಿಯೆಂದು ತಿಳಿದವಳೂ ನಾನಲ್ಲ . ಕಾಯದಲ್ಲಿಯೇ ಸಂಗಮವಾದ ಅರಿವಿನ ದೇವರಾದ ಹರನೇ ನನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸುತ್ತಿದ್ದೆ ನಾನು . ನಾನು ಎಂದರೂ ಕಾಯವಲ್ಲ . ಕಾಯವನ್ನು ಆವರಿಸಿದ ಮನವೆಂಬ ನಾನು ಹರನಿಗೆ ಹೆಂಡತಿ-ಯಾಗಬೇಕೆಂದು ತಪಿಸುತ್ತಿದ್ದೆ ತಂದೆ.

ಎನಗೆ ಅರಿವಿನ ಲಿಂಗಯ್ಯನೆ ಪತಿ-ಯಾಗಬೇಕು , ಆತನಿಗೆ ಶರಣು ಹೋಗಿ ಸತಿ-ಯಾಗಬೇಕೆಂದು ಮನವೆಂಬ ನಾನು ಅನಂತ ಕಾಲದಿಂದಲೂ ತಪಿಸುತ್ತಿದ್ದೆ ನನ್ನಯ್ಯ . ಈ ಮದುವೆಯ ಮಾತು ಎಮ್ಮವರ ಮುಂದೆ ವ್ಯಕ್ತ ಪಡಿಸಲು ; ಶಶಿಧರನ ಹತ್ತಿರಕೆ ಕಳುಹಿಸಿದರು ಎಮ್ಮವರು .

ಶಶಿಧರ ಎಂದರೆ ಬೇರೆ ಯಾರೂ ಅಲ್ಲ . ಅವರು ನೀವೆ ಆಗಿರುವಿರಿ . ನೀವು ಈ ಶರಣ ಸಮೂಹದೊಂದಿಗೆ ನನಗೆ ಭಸ್ಮವನ್ನು ಹೂಸಿ , ಕಂಕಣವನ್ನು ಕಟ್ಟಿ , ಬೆಳಗಿಂಗೆ ಬೆಳಗಾಗಿ

ಬೆಳಗುವ ಚೆನ್ನಮಲ್ಲಿಕಾರ್ಜುನನಿಗೆ ಕೊಟ್ಟು ಮದುವೆಯನ್ನು ಮಾಡಿ - ತಂದೆ .

ಕಾಯ ಕಾಯದೊಂದಿಗೆ ಮಾಡುವ ಮದುವೆ ಮದುವೆಯಲ್ಲ . ಅದು ಹೆಣ್ಣು ಹೆಣ್ಣಿನೊಂದಿಗೆ ಮಾಡುವ ಮದುವೆ . ಕಾಯ ಕಾಯದೊಂದಿಗೆ ಕೂಡುವ ಕೂಟ ಕೂಡ ಹೆಣ್ಣು ಹೆಣ್ಣಿನೊಂದಿಗೆ ಕೂಡುವ ಕೂಟವೇ ಆಗಿದೆ .

ಕಾಯದಲ್ಲಿಯೇ ಸಂಗಮವಾದ ಅತಿ-ಕಾಮಿ ಅರಿವಿನ ಚೆನ್ನಮಲ್ಲಿಕಾರ್ಜುನನಿಗೆ ಮನವೆಂಬ ನನ್ನನ್ನು ಕೊಟ್ಟು ಮದುವೆ ಮಾಡಲು ಎಮ್ಮವರು ನಿಮ್ಮಲ್ಲಿಗೆ ಕಳುಹಿಸಿದ್ದಾರೆ ತಂದೆ . ನೀವು ನನ್ನ ಹಡೆದ ತಂದೆ . ಶರಣರೇ ನನ್ನ ಬಂಧು ಬಳಗ . ನನ್ನ ಪತಿಯಾಗಬೇಕಾದಾತನ ಕುರುಹು ಹೇಳಿದ್ದೇನೆ ಪ್ರಭು . ನೀವೆ ನಿಶ್ಚೈಸಿ ಅರಿವಿನ ಮದುವೆ ಮಾಡಿ ಎಂದು ಶರಣ ಸಮೂಹಕ್ಕೆ ಅಕ್ಕ ವಿನಂತಿಸಿಕೊಂಡಳು .

**ಬಸವಣ್ಣ :** ಅಕ್ಕ, ರೂಹಿಲ್ಲದವನಿಗೆ ಒಲಿದ ಕಾರಣ ಕಾಯದ ಹಂಗು ತೊರೆದಿದ್ದಾಳೆ. ಮನವಿಲ್ಲದವನನ್ನು ಮೆಚ್ಚಿದ ಕಾರಣ ಅಭಿಮಾನದ ಹಂಗು ತೊರೆದಿದ್ದಾಳೆ . ದಿಗಂಬರನಿಗೆ ಒಲಿದ ಕಾರಣ ವಸ್ತ್ರದ ಹಂಗು ತೊರೆದಿದ್ದಾಳೆ . ಭಾವದ ಕೂಟವನ್ನು ಬತ್ತಲೆಯಾಗಿಸಿದ್ದಾಳೆ . ತವಕದ ಸ್ನೇಹ ವ್ಯವಹಾರವನ್ನು ಹುಗುದು ಹಾಕಿದ ಎನ್ನ ಹೆತ್ತ ತಾಯಿ ಮಹಾದೇವಿಯಕ್ಕಳ ನಿಲುವ ನೋಡಯ್ಯಾ ಪ್ರಭುವೆ . ಎಂದು ಬಸವಣ್ಣ ಪ್ರಭುದೇವರಿಗೆ ಕೈ ಮುಗಿಯುತ್ತಾರೆ .

**ಅಕ್ಕಮಹಾದೇವಿ :** ಕಲ್ಯಾಣದ ಸಕಲ ಶರಣರನ್ನು ಕಂಡು ಎನ್ನ ಕಂಗಳ ಪಟಲ ಹರಿಯಿತು . ನಿಮ್ಮ ಶರಣರ ಶ್ರೀ ಚರಣಗಳಿಗೆರಗಿ ಎನ್ನ ಹಣೆಯ ಲಿಖಿತ ತೊಡೆಯಿತು. ನಿಮ್ಮ ಶರಣ ಸಂಗನ ಬಸವಣ್ಣನ ಪಾದಕ್ಕೆರಗಿ ನಮೋ ನಮೋ ಎನುತಿರ್ದೆನು .

''ಪಚ್ಚೆಯ ನೆಲೆಗಟ್ಟು ಕನಕದ ತೋರಣ
ವಜ್ರದ ಕಂಭ ಪವಳದ ಚಪ್ಪರವನಿಕ್ಕಿ
ಮದುವೆಯ ಮಾಡಿದರು ನಮ್ಮವರೆನ್ನ , ಮದುವೆಯ ಮಾಡಿದರು .
ಕಂಕಣ ಕೈದಾರ ಸೇಸೆಯನ್ನಿಕ್ಕಿ
ಚೆನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು .
ಗುರುವೆ ತೆತ್ತಿಗನಾದ, ಲಿಂಗವೆ ಮದುವಳಿಗನಾದ,
ನಾನೇ ಮದುಳಿಗೆಯಾದೆನು . ಈ ಭುವನವೆಲ್ಲವನರಿಯಲು
ಅಸಂಖ್ಯಾತರೆನಗೆ ತಾಯಿ ತಂದೆಗಳು .
ಪ್ರಭುವಿನ ಮನೆಗೆ ಸಾದೃಶ್ಯವಪ್ಪ ವರನ ನೋಡಿ ,
ಇದು ಕಾರಣ ಚೆನ್ನಮಲ್ಲಿಕಾರ್ಜುನ ಗಂಡನೆನಗೆ .
ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ ಪ್ರಭುವೆ .''

**ಚೆನ್ನಬಸವಣ್ಣ :** ತನುವಿನೊಳಗಿದ್ದು ತನುವ ಗೆದ್ದಳು ಅಕ್ಕ, ಮನದೊಳಗಿದ್ದು ಮನವ ಗೆದ್ದಳು ಅಕ್ಕ . ವಿಷಯದೊಳಗಿದ್ದು ವಿಷಯವ ಗೆದ್ದಳು ಅಕ್ಕ. ಅಂಗ

ಸಂಗವ ತೊರೆದು ಭವವ ಗೆದ್ದಳು ಅಕ್ಕ . ಕೂಡಲ ಚೆನ್ನಸಂಗಯ್ಯನ ಹೃದಯ ಕಮಲವ ಬಗಿದು ಒಳಹೊಕ್ಕು ನಿಜಪದವನು ಹೊಂದಿದ ಮಹಾದೇವಿ ಅಕ್ಕಳ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು .

**ಮಡಿವಾಳ ಮಾಚಿದೇವ :** ಕಂಗಳ ನೋಟ ಕಾಯದ ಪ್ರಾಣ , ಅಂಗವಿಕಾರ ನಿರ್ವಿಕರವಾಯಿತು . ಸಂಗ ಸುಖ ನಿಸ್ಸಂಗವಾಯಿತು . ಅಕ್ಕಳ ಹೆಂಗೂಸೆಂಬ ಭಾವ ಬಯಲ ಬೆರೆಸಿತ್ತು . ಕಾಯದಲ್ಲಿಯೇ ಇದ್ದ ಕಲಿದೇವರ ದೇವನೆ ನಿಮ್ಮನ್ನು ಒಲಿಸಿ ಒಚ್ಚತವೋದ ಮಹಾದೇವಿಯಕ್ಕಳ ಶ್ರೀಪಾದವ ನೆನೆದು ಬದುಕಿದೆನು ಪ್ರಭುವೆ .

ಉರಿಯುಂಡ ಕರ್ಪುರ ಉರಿಯಲ್ಲಿ ಸಂಯೋಗವಾಯಿತ್ತು ಎನ್ನೊಡೆಯ . ಎನ್ನುತ್ತಾ ಸಕಲ ಶರಣರು ಮಹಾದೇವಿಯಕ್ಕಳನ್ನು ಕಲ್ಯಾಣದಿಂದ ಕದಳಿಗೆ ಬೀಳ್ಕೊಟ್ಟರು.

## ಶುಭ ಮಂಗಳ

## ಬಸವರಾಜ ಸ್ವಾಮಿ ಅವರ ಕೃತಿಗಳು

| | | |
|---|---|---|
| 1. ಬೆಳಕಿನ ಬಳ್ಳಿ | 2011 | ಮುಗಿದಿದೆ |
| 2. ಬಲಯ ಬೀಜಗಳು | 2012 | ಮುಗಿದಿದೆ |
| 3. ರೂಹಿಲ್ಲದ ಚೆಲುವೆ | 2012 | ಮುಗಿದಿದೆ |
| 4. ಜ್ಞಾನಭಂಡಾರಿ ಬಸವಣ್ಣ ( ಸಮಗ್ರ ) | 2018 | ರೂ.800/- |
| 5. ಅಂಬಿಗರ ಚೌಡಯ್ಯಗಳ ವಚನಾನುಭಾವ | 2019 | ಮುಗಿದಿದೆ |
| 6. ಹಡಪದ ಅಪ್ಪಣಗಳ ವಚನಾನುಭಾವ | 2019 | ರೂ.100/- |
| 7. ಸಿದ್ಧರಾಮ ಶಿವಯೋಗಿಗಳ ವಚನಾನುಭಾವ ( ಭಾಗ -1 ) | 2019 | ರೂ.300/- |
| 8. ಸಿದ್ಧರಾಮ ಶಿವಯೋಗಿಗಳ ವಚನಾನುಭಾವ ( ಭಾಗ-2 ) | 2022 | ರೂ.800/- |

## ಸಂಪಾದಿತ ಕೃತಿಗಳು

| | | |
|---|---|---|
| 1. ಗಗನ ಸಿದ್ಧಾಂತ ( ಸಮಗ್ರ ) | 2015 | ರೂ.300/- |
| 2. ತೆರಹಿಲ್ಲದಭವ ನುಡಿಗೆಡೆಗೊಡನು | 2011 | ಮುಗಿದಿದೆ |
| 3. ಗುರುಕನ್ಯೆ | 2017 | ರೂ.120/- |
| 4. ಅರಿತ ಕಿರಣ, ಕಲ್ಪಿತ ವೃಕ್ಷ, ಕಲ್ಪಿತ ಕೃಪೆ (ಮೂರು ಪುಸ್ತಕಗಳ ಸಂಗಮ ) | 2022 | ರೂ.200/- |
| 5. ಉತ್ತರ ಸಿದ್ಧಾಂತ | 2023 | ರೂ. 200/- |
| 6. ನಿಜಸುಖಿ | 2023 | ರೂ.150/- |
| 7. ಅಂತರಾತ್ಮಬೋಧೆ | 2023 | ರೂ.150/- |
| 8. ಕರುಣಾಜಲ | 2023 | ರೂ.150/- |
| 9. ಸ್ವರೂಪಸಿದ್ಧಿ | 2023 | ರೂ.150/- |

ತನ್ನರಿವೇ ತನಗೆ ಗುರುವೆಂದು ಅನುಭವಕ್ಕೆ ಬಂದ ಕಾಯ ಮತ್ತೊಂದು ಕಾಯಕ್ಕೆ ಗುರುವಾಗದೇ ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನನ್ನು ಕಾಯಕ್ಕೆ ಮತ್ತು ಮನಕ್ಕೆ ಪರಿಚಯ ಮಾಡಿಸಿ, ಹೊರಗಣ ದೇವರುಗಳಿಂದ ದೂರ ಉಳಿಯುತ್ತಾರೆ. ಸಕಲ ಕಾಯಗಳಲ್ಲಿ ಸಂಗಮವಾದ ಅರಿವಿನ ದೇವರುಗಳಿಗೆ ಶರಣು ಹೋಗಿ ಶರಣಾಗತನಾಗುತ್ತಾನೆ. ಸಕಲ ಕಾಯಗಳು ದೇವರನ್ನು ಹೊತ್ತ ಕಾಯಗಳೆಂದು ತಿಳಿದು ಪ್ರಪಂಚದಲ್ಲಿರುವ ಸಕಲ ಕಾಯಗಳನ್ನು ಗೌರವಿಸುತ್ತಾನೆ. ಜ್ಞಾನಿಗಳು ಮಾತ್ರ ಹೀಗೆ ಮಾಡಲು ಸಾಧ್ಯವಾಗುತ್ತದೆ. ಸಕಲ ಕಾಯಗಳಲ್ಲಿಯೂ ಜ್ಞಾನ ಇರುವುದರಿಂದ, ಮನ ಆ ಜ್ಞಾನಕ್ಕೆ ಶರಣು ಹೋದರೆ ಸಾಕು ಸಕಲ ಕಾಯಗಳಿಗೂ ಹೀಗೇ ಇರಲು ಸಾಧ್ಯವಾಗುತ್ತದೆ.

ಮನ ತನುವಿಗೆ ಗುರುದೇವನ ವೇಷ ಧರಿಸಿ, ಹಲವು ತನುಗಳನ್ನು ಶಿಷ್ಯರನ್ನಾಗಿ ಮಾಡಿಕೊಂಡು ಗುರು ವೇಷದ ಮೂಲಕ ಮನ ತನುವಿನೊಂದಿಗೆ ಸುಖಿಸುತ್ತದೆ. ಮನ ಗುರುವಲ್ಲ , ಆ ಗುರುದೇವನಿಗೆ ಶಿಷ್ಯನಾಗುವವನು ಶಿಷ್ಯನಲ್ಲ, ಗುರುದೇವ ವೇಷಧಾರಿಯಲ್ಲ , ಶಿಷ್ಯ ಕೂಡ ವೇಷಧಾರಿಯಲ್ಲ . ಕಾಯದಲ್ಲಿ ಅರಿವು ಎನ್ನುವ ಗುರುದೇವನಿದ್ದಾನೆ. ಹಾಗೆಯೇ ಮನವೆಂಬ ಶಿಷ್ಯನು ಇದ್ದಾನೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಗುರುದೇವನನ್ನು ಹುಡುಕಲೇಬೇಕು. ಇದು ಮನದ ಕರ್ತವ್ಯವಾಗಬೇಕು.

ಗುರುವಾದಾತನು ಕೂಡ ಕಾಯದಲ್ಲಿಯೇ ಸಂಗಮವಾದ ಅರಿವು ಎಂಬ ಗುರುದೇವನನ್ನು ಹುಡುಕಲೇಬೇಕು . ಆ ಗುರುದೇವನ ದರುಶನ ಆದರೆ ಮಾತ್ರ ಗುರುದೇವನಿಗೆ ಮುಕ್ತಿ ಇಲ್ಲದಿದ್ದರೆ ತನಗೆ ತಾನೇ ವಂಚನೆಗೆ ಒಳಗಾಗುತ್ತಾನೆ. ಗುರುದೇವ ವೇಷ ಧರಿಸಿ ಶಿಷ್ಯನನ್ನು ವಂಚಿಸುವುದಿಲ್ಲ, ಗುರುವೇಷದ ಕಾಯವನ್ನು ಆವರಿಸಿದ ಮನ ತಾನಿದ್ದ ಕಾಯವನ್ನೇ ತಾನು ವಂಚಿಸಿಕೊಳ್ಳುತ್ತದೆ. ಶಿಷ್ಯನ ಕಾಯ ಕೂಡ ವೇಷ ಧರಿಸಿದ ಗುರುದೇವನ ಕಾಯಕ್ಕೆ ಶಿಷ್ಯನಾಗಿ ತನ್ನನ್ನು ತಾನು ವಂಚಿಸಿಕೊಳ್ಳುತ್ತದೆ.




ವಿಷಯದ ಸರಿಯಾದ ಗ್ರಹಣದಿಂದ ಆಗಲೇ ಬಂಧನದಿಂದ ಬಿಡುಗಡೆಯು ಸಂಭವಿಸುವುದು ಎಂಬುದು ಅನುಭಾವಿಗಳ ಮತ . ಇದೇ ಅರಿವಿನ ಮಹತ್ವ ಮತ್ತು ಶಕ್ತಿ ! ಆದರೆ ಸರಿಯಾದ ಗ್ರಹಣವಾಗಬೇಕಾದರೆ ಅದು ಗುರುಗಳ ಜೊತೆ ಬದುಕುವುದರಿಂದ, ಒಡನಾಡುವುದರಿಂದ ತನು –ಮನಗಳಿಂದ ಗುರುಗಳ ಒಳ ಬದುಕನ್ನು ಗ್ರಹಿಸುವುದರಿಂದ ಮಾತ್ರ ಸಾಧ್ಯ. ಗುರುಗಳ ಒಳ ಬದುಕನ್ನು ತಿಳಿಯುವಂತಾಗುವುದೇ ಗುರುಗಳು ಮಾಡುವ ಅನುಗ್ರಹ ! ಆಗ ನಮ್ಮ ಒಳ ಬದುಕು ಕೂಡ ನಮಗೆ ತಿಳಿಯುವುದು ! ಅಂದರೆ ಗುರು ನಮ್ಮೊಳಗೇ ಇರುವನು ! ನಾವಾಗಿಯೇ ಇರುವನು ! ನಮ್ಮಿಂದ ಬೇರ್ಪಟ್ಟಿಲ್ಲ, ಎಂದೆಂದೂ ಬೇರ್ಪಡುವುದಿಲ್ಲ.

ಇಂಥ ಗುರುಗಳ ಜೊತೆ ಇದ್ದವರು, ಬಾಳಿ ಬದುಕಿದವರು, ವಿಷಯ ಗ್ರಹಣ ಮಾಡಿದವರು, ರಾಜಿ ಇಲ್ಲದೆ ವಿಷಯವನ್ನು ಮುಂದಿಡುತ್ತಿರುವವರು. ನನ್ನ ಮಾನ್ಯ ಮಿತ್ರರಾದ ಹಿರಿಯರಾದ ಶ್ರೀ ಬಸವರಾಜ ಸ್ವಾಮಿಗಳು ಧಾರ್ಮಿಕವಾಗಿಯೂ ದಿಕ್ಕುಗೆಟ್ಟಿರುವ ಸಾಮಾಜಿಕ ಕೋಲಾಹಲದ ನಡುವೆ ತಾನು ಕೆಂಗೆಡದೆ, ಎದೆಗೆಡದೆ ವ್ಯವಹಾರಿಕವಾದ ಒಪ್ಪಂದವನ್ನು ಇನಿತೂ ಮಾಡಿಕೊಳ್ಳದೆ ಸ್ವಚ್ಛವಾಗಿ ತಮ್ಮ ಗುರುಗಳು ಮತ್ತು ಬಸವಾದಿ ಶರಣರು ಹೇಳಿದ ತನುವಿನಲ್ಲಿ ಅಡಗಿರುವ ಸತ್ಯವನ್ನು ಹುಡುಕಿ ಪಡೆಯಬೇಕೆಂಬ ತತ್ವವನ್ನು ಮುಂದಿಡುತ್ತಿದ್ದಾರೆ.

ದೇಹವೇ ಸರ್ವಸ್ವವೆಂದು ಬದುಕುತ್ತಿರುವ ಆಧುನಿಕರಿಗೆ, ದೇಹ ಭೋಗದ ದೃಷ್ಠಿಯನ್ನು ತುಸು ಬದಲಿಸಿದರೆ ದೇಹದಲ್ಲಿಯೇ ಸತ್ಯಸರ್ವಸ್ವವೂ ಅಡಗಿರುವುದನ್ನು ತಿಳಿಯಬಹುದೆಂದು ಶರಣರ ತತ್ವವನ್ನು ವಿಶದಪಡಿಸುತ್ತಿರುವವರು ಬಸವರಾಜ ಸ್ವಾಮಿಗಳು. ಮೇಲ್ನೋಟಕ್ಕೆ ತುಸು ಜಟಿಲವೆನ್ನಿಸುವ ಈ ಕೃತಿಯ ಒಂದು text ನಂತೆ, ಪಠ್ಯದಂತೆ ಇದೆ. ಅಂದರೆ ಇದನ್ನು ಪಾಠಮಾಡುವ ಗುರುಗಳು ಒಬ್ಬರು ಬೇಕೇ ಬೇಕು. ಇದಕ್ಕೆ ಸರಿಯಾದ ಗುರುಗಳೆಂದರೆ ಶ್ರೀ ಬಸವರಾಜ ಸ್ವಾಮಿಗಳೇ. ಈ ಮೂಲಕವೂ ಕೃತಿರೂಪದಲ್ಲಿರುವ ತಮ್ಮ ಗುರುಗಳಿಂದ ಬಸವರಾಜ ಸ್ವಾಮಿಗಳು ಬೇರ್ಪಟ್ಟಿಲ್ಲ.

ಶರಣು

ಲಕ್ಷ್ಮೀಷ ತೋಳ್ಪಾಡಿ